ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ—೧೨

# ಭಾಷಣಗಳು ಮತ್ತು ಲೇಖನಗಳು

## ಸಂಪುಟ ೨

ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

ಪ್ರಕಾಶಕರು
ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ
ಮೈಸೂರು

ಸಂಪಾದಕರು ಮತ್ತು ಪ್ರಕಾಶಕರು :

ಟಿ. ಎಸ್. ಶಾಮರಾವ್, ಬಿ.ಎ.(ಆನರ್ಸ್)

ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.

ಡಿ. ವಿ. ಶೇಷಗಿರಿರಾವ್, ಬಿ.ಎ.



ಮೊದಲ ಮುದ್ರಣ, ೧೯೪೯



ಬೆಲೆ ನಾಲ್ಕು ರೂಪಾಯಿ

ಮುದ್ರಕರು

ಜಿ. ಎಚ್. ರಾಮರಾವ್, ಬಿ.ಎಸ್‌ಸಿ.

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್

ಮೈಸೂರು

# ಅರಿಕೆ

ನಮ್ಮ ಪೂಜ್ಯಗುರುಗಳಾದ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರೀ ಎಂ.ಎ. ಅವರ ಈ "ಭಾಷಣಗಳು ಮತ್ತು ಲೇಖನಗಳು" ಗ್ರಂಥದ ಎರಡನೆಯ ಸಂಪುಟವನ್ನು ಪ್ರಕಟಿಸುವುದರ ಮೂಲಕ ನಾವು ಒಂದು ಮಹತ್ಕಾರ್ಯವನ್ನು ಸಾಧಿಸುತ್ತಿರುವೆವೆಂದು ನಮಗೆ ತೃಪ್ತಿ. ಪುಣ್ಯಶ್ಲೋಕರಾದ ಕೀರ್ತಿಶೇಷ ವೆಂಕಣ್ಣಯ್ಯನವರ ಸ್ಮಾರಕಗ್ರಂಥ ಮಾಲೆಯಲ್ಲಿ ಅವರ ಜೀವದ ಗೆಳೆಯರಾದ ಶ್ರೀಮಾನ್ ಶಾಸ್ತ್ರಿಗಳ ಗ್ರಂಥ ವೊಂದು ಪ್ರಕಟಗೊಳ್ಳುವುದೇ ನಮಗೊಂದು ದೊಡ್ಡ ಹೆಮ್ಮೆ. ಇದರ ಮೇಲೆ ಅದೆಂತಹ ಅಮೂಲ್ಯವಾದ ಗ್ರಂಥ ಇದು! ಇದನ್ನು ಆಮೂಲಾಗ್ರ ವಾಗಿ ಅವಲೋಕಿಸಿದವರಿಗೆ ಆಶ್ಚರ್ಯವಾಗುತ್ತದೆ. ಇಡೀ ಒಂದು ಜೀವ ಮಾನದ ಸಾರಸ್ವತ ತಪಸ್ಸಿಗೆ ಟೀಕೆಯಂತಿದೆ, ಈ ಗ್ರಂಥ. ಲೇಖನಗಳಲ್ಲಿ ಅದೆಷ್ಟು ವೈವಿಧ್ಯ! ಹೊಸಗನ್ನಡ ಸಾಹಿತ್ಯದ ನೂತನ ಸೃಷ್ಟಿಗೆ ಎಂತಹ ಪ್ರೇರಕಶಕ್ತಿ ಈ ಲೇಖನಗಳಲ್ಲಿ ಅಡಗಿದೆ! ಎಷ್ಟು ಹೊಸ ಹೊಸ ಸಾಹಿತ್ಯ ಪ್ರಯೋಗಗಳಿಗೆ ಶ್ರೀಮಾನ್ ಶಾಸ್ತ್ರಿಗಳು ಆದ್ಯರಾಗಿ, ಇಂದಿನ ಪೀಳಿಗೆಗೆ ಮೇಲ್ಪಂಕ್ತಿಯಾಗಿದ್ದಾರೆ!

ಪ್ರತಿಭೆ, ಪಾಂಡಿತ್ಯ, ಲೋಕಾನುಭವ-ಈ ತ್ರಿವೇಣಿಯ ಸಂಗ ಮದಿಂದ ಪಾವನವಾದ ಜ್ಞಾನವಾಹಿನಿ, ಈ "ಭಾಷಣಗಳು ಮತ್ತು ಲೇಖನಗಳು." ಪ್ರತಿಪಾದಿತವಾಗಿರುವ ಪ್ರತಿಯೊಂದು ವಿಷಯವೂ ಶ್ರೀ ಶಾಸ್ತ್ರಿಗಳ ಸ್ವಂತ ಸೃಷ್ಟಿ. ಹೇಳುವ ರೀತಿಯಲ್ಲಿ ಸುತ್ತಿಲ್ಲ, ಬಳಸಿಲ್ಲ. ಆಡುವ ಮಾತುಗಳಲ್ಲಿ ಮುಚ್ಚಿಲ್ಲ ಮರೆಯಿಲ್ಲ. ನೇರವಾದ ಮಾತುಗಳು, ನಿಷ್ಕಲ್ಮಷ ಹೃದಯ; ಭಾವ ಪೂರ್ಣವಾದ ಮಾತುಗಳು, ಜೀವ ಪೂರ್ಣವಾದ ವಾಕ್ಯಗಳು. ಆದರೂ ನಿರಾಭರಣ ಸುಂದರಿಯಂತಿರುವ ಶೈಲಿ. ಅದೆಷ್ಟು ಅಡಕವಾದ ಬರವಣಿಗೆ! ಒಂದೊಂದು ವಾಕ್ಯವೂ ಒಂದು ಸೂತ್ರವಿದ್ದಂತೆ. ಹಿತಮಿತವಾದ ನುಡಿನಿರಿಗೆಯಿಂದ ಕೂಡಿದ ಆ ಬರೆಹವನ್ನು ಕಂಡು, ಶ್ರೀ ಶಾಸ್ತ್ರಿಗಳು ಸಾರಸ್ವತ ಸಾಮ್ರಾಜ್ಯದಲ್ಲಿ

ಕೃತಕೃತ್ಯರು ಎನ್ನಿಸುತ್ತದೆ. ಇಡೀ ಗ್ರಂಥವನ್ನೇ ವಾಚಕಪ್ರಪಂಚದ ಮುಂದೆ ನೀಡಿ ನಿಂತಿರುವ ನಾವು ಹೆಚ್ಚು ಹೇಳುವುದು ಅನಗತ್ಯ. ಹೇಳ ಹೊರಟರೂ ಹೇಳ ಬೇಕಾದುದನ್ನು, ಹೇಳಬೇಕಾದಷ್ಟನ್ನು ಹೇಳಲಾರದ ಧಾರ್ಷ್ಟ್ಯಕ್ಕೆ ಗುರಿಯಾದೇವು.

ತಮ್ಮ ಈ ಅಮೂಲ್ಯವಾದ ಪುಸ್ತಕವನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಅನುಮತಿ ಇತ್ತು ಉಪಕರಿಸಿದ ಶ್ರೀವರ್ಮಾ ಕೃಷ್ಣಶಾಸ್ತ್ರಿಗಳಿಗೆ ನಾವು ಚಿರಋಣಿಗಳಾಗಿದ್ದೇವೆ; ನಮ್ಮ ಅನಂತ ವಂದನೆಗಳನ್ನು ಅರ್ಪಿಸುತ್ತೇವೆ. ಈ ಪುಸ್ತಕ ಪ್ರಕಟನೆಯ ಕಾರ್ಯದಲ್ಲಿ ನಮಗೆ ನೆರವಾದ ಶ್ರೀ ಜಿ. ಎಚ್. ರಾಮರಾಯರಿಗೆ ನಮ್ಮ ಅನಂತ ಧನ್ಯವಾದಗಳು.

ತ. ಸು. ಶಾಮರಾಯ.

# ಮುನ್ನುಡಿ

ಪ್ರಬುದ್ಧ ಕರ್ಣಾಟಕದಲ್ಲಿ ನಾನು ಆಗಿಂದಾಗ್ಗೆ ಬರೆದ ಲೇಖನಗಳಿಂದ ಕೆಲವನ್ನು ಆರಿಸಿ ಈ ಎರಡನೆಯ ಸಂಪುಟದಲ್ಲಿ ಪ್ರಕಟಿಸಿದೆ. ಇದರಲ್ಲಿ ಮೂರು ವಿಭಾಗಗಳಿವೆ; ಲೇಖನಗಳು—೨, ಎಂಬ ಮೊದಲನೆಯ ವಿಭಾಗದಲ್ಲಿ ಇರುವವು ಪ್ರಬಂಧಗಳು; ಲೇಖನಗಳು—೩, ಎಂಬ ಎರಡನೆಯ ವಿಭಾಗದಲ್ಲಿ ಇರುವವು ಗ್ರಂಥ ವಿಮರ್ಶೆಗಳು; ಲೇಖನಗಳು—೪, ಎಂಬ ಮೂರನೆಯ ವಿಭಾಗದಲ್ಲಿ ಇರುವವು ಸಂಪಾದಕೀಯ ಲೇಖನಗಳು.

ಇವುಗಳಲ್ಲಿ ಮೊದಲನೆಯ ಲೇಖನವಾದ "ಪ್ರಬುದ್ಧ ಕರ್ಣಾಟಕದ ಹುಟ್ಟು ಮತ್ತು ಬೆಳವಣಿಗೆ"ಯು ಕಾಲಾನುಕ್ರಮದಲ್ಲಿ ಎಲ್ಲಕ್ಕೂ ಕೊನೆಗೆ ಬರತಕ್ಕದ್ದು. ಆದರೆ ಅದು ಈ ಸಂಪುಟದ ಲೇಖನಗಳಿಗೆಲ್ಲಾ ಪೀಠಿಕಾರೂಪವಾಗಿಯೂ ವಿವರಣರೂಪವಾಗಿಯೂ ಇರುವುದರಿಂದ ಅದನ್ನು ಮೊದಲಲ್ಲಿಯೇ ಕೊಟ್ಟಿದೆ. ಮಿಕ್ಕ ಲೇಖನಗಳು ಆಯಾ ವಿಭಾಗದಲ್ಲಿ ಕಾಲಕ್ರಮವನ್ನು ಅನುಸರಿಸಿಯೇ ಬಂದಿವೆ. ಪ್ರತಿಯೊಂದು ಲೇಖನದ ಕೊನೆಯಲ್ಲಿಯೂ ಕೊಟ್ಟಿರುವ ಸಂಖ್ಯೆಯು ಪ್ರಬುದ್ಧ ಕರ್ಣಾಟಕದ ಸಂಚಿಕೆಯನ್ನು ಸೂಚಿಸುತ್ತದೆ. ಕೊನೆಯ ವಿಭಾಗದಲ್ಲಿ ಸಂಚಿಕೆಯ ಸಂಖ್ಯೆಯ ಜೊತೆಗೆ ವರ್ಷದ ಸಂಖ್ಯೆಯನ್ನೂ ಕೊಟ್ಟಿದೆ.

ಈ ಭಾಷಣ ಲೇಖನಗಳು ಎಲ್ಲರಿಗೂ ಪ್ರಿಯವಾಗುವುದಿಲ್ಲ; ಉಪಯುಕ್ತವೂ ಆಗುವುದಿಲ್ಲ. ಅದನ್ನು ನಾನು ಬಲ್ಲೆ. ಅವು ಮೊದಲು ಬೆಳಕಿಗೆ ಬಂದಾಗಲೇ ಅವುಗಳ ಮೇಲೆ ನಾನಾ ಜನರು ನಾನಾ ಮಾತನ್ನು ಆಡಿದರು, ಬರೆದರು. ನಾನು ಅನೇಕವೇಳೆ ಆ ವಿಮರ್ಶೆಗಳ ವಿಚಾರದಲ್ಲಿ ಉದಾಸೀನನಾಗಿದ್ದೆ; ಕೆಲವು ವೇಳೆ ಕೆರಳಿ ಉತ್ತರವನ್ನೂ ಕೊಟ್ಟೆ; ಪ್ರಾಯಶಃ ಅದೇ ಲೇಖನಗಳನ್ನು ಈಗ ಬರೆದಿದ್ದರೆ ಹೇಗೆ ಬರೆಯುತ್ತಿದ್ದೆನೋ—ಅಥವಾ ಆ ವಿಷಯಗಳ ಮೇಲೆ ಬರೆಯುತ್ತಲೇ ಇರಲಿಲ್ಲವೋ! ಹೇಗಾದರೂ ಆಗಲಿ, ಈಗ್ಗೆ ಸುಮಾರು ಮುವ್ವತ್ತು ವರ್ಷಗಳಿಂದ ಬರೆದ ಬಗೆ ಬಗೆಯ ಬರವಣಿಗೆಯನ್ನು ಒಟ್ಟಿಗೆ ಒಂದು ಕಡೆ ನೋಡುವುದೇ ಒಂದು ಸೋಜಿಗವೆನ್ನಿಸಿತು; ಅವುಗಳಲ್ಲಿ ಯಾವುದನ್ನೂ ನಾನು ತಿದ್ದುವ ಗೋಜಿಗೆ ಹೋಗಿಲ್ಲ. ಕೆಲವರು ತಮ್ಮ ಆತ್ಮ

ಚರಿತ್ರೆಯನ್ನು ಬರೆದು ಅದರಲ್ಲಿ ತಮ್ಮ ಬಾಲ್ಯ ಯೌವನ ಕೌಮಾರ ವಾರ್ಧಕ ಈ ಎಲ್ಲ ದಶೆಗಳ ಬಗೆಬಗೆಯ ಭಾವಚಿತ್ರಗಳನ್ನು ಕೊಡುವುದುಂಟು. ಒಂದು ವಿಧದಲ್ಲಿ ಸಾಹಿತಿಯ ಲೇಖನಗಳೇ ಅವನ ಆತ್ಮಚರಿತೆ. ಅದರಲ್ಲಿ ಅವನ ಆಶೆ ಪ್ರತ್ಯಾಶೆಗಳೂ ಭಾವ ಭಾವನೆಗಳೂ ಚಿಂತೆ ಕೊರತೆಗಳೂ ಸ್ವಲ್ಪಮಟ್ಟಿಗಾದರೂ ಗೋಚರಿಸಿರುತ್ತವೆ. ಅವೇ ಅವನ ಭಾವ ಚಿತ್ರಗಳು. ಈ ದೃಷ್ಟಿಯಿಂದ, ಹುಡುಗತನದ ಹುಮ್ಮಸ್ಸಿನ ಅಪಕ್ವಗಳು ಕೆಲವು ಇಲ್ಲಿರುವುದು ಪ್ರಾಯಶಃ ಆಕ್ಷೇಪಣೀಯವಾಗಲಾರದೆಂದು ನಂಬುತ್ತೇನೆ.

ಈ ಪುಸ್ತಕದಲ್ಲಿ ಕೊಟ್ಟಿರುವ ಮುಖಚಿತ್ರವೂ ಶ್ರೀಮಾನ್ ಅಳವಂದಿಕರ್ ಅವರು ಹೈದರಾಬಾದಿನ ಸಾಹಿತ್ಯ ಸಮ್ಮೇಳನದ ಕಾಲದಲ್ಲಿ ತೆಗೆದುಕೊಟ್ಟದ್ದೇ. ಪೂಜ್ಯ ಶ್ರೀಕಂಠಯ್ಯನವರೂ ನಾನೂ ಇಬ್ಬರೇ ಹೀಗೆ ಭುಜಸೋಕಿ ಕುಳಿತಿರುವುದು ಇದೊಂದು ಚಿತ್ರದಲ್ಲಿಯೇ; ಅವರು ಬದುಕಿರುವವರೆಗೂ ನನ್ನನ್ನು ಹಿರಿಯ ಅಣ್ಣನಂತೆ, ತಂದೆಯಂತೆ, ಮಮತೆಯಿಂದ ಪೋಷಿಸಿಕೊಂಡು ಬಂದರು. ಅದನ್ನು ಈ ಚಿತ್ರದಲ್ಲಿಯೂ ನೋಡಬಹುದು.

ಈ ಸಂಪುಟವನ್ನು ಅವರಲ್ಲಿ ನಾನು ಇಟ್ಟಿದ್ದ ಭಕ್ತಿಯ ನೆನಪಾಗಿ ಪ್ರಕಟಿಸಿದ್ದೇನೆ. ಅವರಿಗೆ ನನ್ನ ಲೇಖನವೆಂದರೆ ತುಂಬ ವಿಶ್ವಾಸ; ಆದ್ದರಿಂದ ಈ ಸಂಪುಟದ ಪ್ರಕಟನೆ ಅವರ ಆತ್ಮವನ್ನು ಸಂತೋಷಗೊಳಿಸೀತೆಂದು ನನಗೆ ಭರವಸೆ ಇದೆ.

ಈ ಸಂಪುಟದ ಮುದ್ರಣಕಾರ್ಯದಲ್ಲಿ ನನ್ನ ಶಿಷ್ಯರೂ ಮಿತ್ರರೂ ಆದ ಶ್ರೀಮಾನ್ ಎಚ್. ಎಂ. ಶಂಕರನಾರಾಯಣರಾವ್, ಎಂ.ಎ., ಅವರು ತುಂಬ ಸಹಾಯಮಾಡಿದ್ದಾರೆ; ಅಚ್ಚಿನ ಮನೆಯ ಕಷ್ಟವೆಲ್ಲಾ ಅವರದು; ಸುಖ ನನ್ನದು; ಹೀಗೆ ನನಗೆ ನೆರವಾದದ್ದಕ್ಕಾಗಿ ಅವರಿಗೂ, ಬಹು ತಾಳ್ಮೆಯಿಂದ ಅಂದವಾಗಿ ಅಚ್ಚುಮಾಡಿ ಕೊಟ್ಟದ್ದಕ್ಕಾಗಿ ಮ|| ಜಿ. ಎಚ್. ರಾಮರಾವ್, ಬಿ.ಎಸ್‌ಸಿ. ಅವರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಮೈಸೂರು
೩–೩–೧೯೪೯

ಎ. ಆರ್. ಕೃಷ್ಣಶಾಸ್ತ್ರೀ

# ವಿಷಯಾನುಕ್ರಮಣಿಕೆ

ವಿವರ ಪುಟ

## ಲೇಖನಗಳು—೨



## ಲೇಖನಗಳು—೩



## ಲೇಖನಗಳು—೪

# ಅ ರ್ಪ ಣೆ

ಕನ್ನಡ ಇಂಗ್ಲಿಷ್ ಭಾಷಾಸಾಹಿತ್ಯಗಳಲ್ಲಿ ಹಲವು ವರ್ಷಗಳು ನನ್ನ
ಪ್ರೌಢವಿದ್ಯಾಗುರುಗಳಾಗಿದ್ದು, ಬೆಂಗಳೂರಿನ ಸೆಂಟ್ರಲ್
ಕಾಲೇಜಿನಲ್ಲಿ ನನಗೆ ಉಪಾಧ್ಯಾಯನ ಕೆಲಸ ಕೊಡಿಸಿ,
ನನ್ನ ಬರವಣಿಗೆಗೆ ಸಂತತವಾದ ಪ್ರೋತ್ಸಾಹ
ಕೊಟ್ಟು, ತಾವು ಬದುಕಿದ್ದವರೆಗೂ
ವಾತ್ಸಲ್ಯದಿಂದ ಕಾಣುತ್ತ
ನನ್ನನ್ನು ಎಲ್ಲ
ವಿಧದಲ್ಲಿಯೂ ಮೇಲಕ್ಕೆ ತಂದ

**ರಾಜಸೇವಾಸಕ್ತ**
**ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.**
ಅವರಲ್ಲಿ
ಭಕ್ತಿ ಕೃತಜ್ಞತೆಗಳ ಅಲ್ಪಕಾಣಿಕೆ.

ಎ. ಆರ್. ಕೃ.

# ಬಿನ್ನಹ

"ಶ್ರೀಮಾನ್ ಶ್ರೀಕಂಠಯ್ಯನವರೇ, ತಾವು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕಾರ್ಯಕರ್ತರಾಗಿ ಇಂಗ್ಲಿಷ್ ಕನ್ನಡಗಳ ಪ್ರಧಾನಾಧ್ಯಾಪಕರಾಗಿ, ಅಭಿಮಾನದಿಂದಲೂ ಉತ್ಸಾಹದಿಂದಲೂ ದಕ್ಷತೆಯಿಂದಲೂ ಸೇವೆಮಾಡಿ, ಕನ್ನಡವು ಇಂದು ಮೈಸೂರಿನಲ್ಲಿ ಪಡೆದಿರುವ ಸ್ಥಾನಕ್ಕೆ ಮುಖ್ಯ ಕಾರಣರಾದಿರಿ. ಈಗ ಈ ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿರುವ ಅನೇಕರು ತಮ್ಮ ಶಿಷ್ಯರೆಂದು ಹೆಮ್ಮೆಪಟ್ಟುಕೊಳ್ಳುತ್ತಿದ್ದಾರೆ ; ತಾವು ತೋರಿಸಿಕೊಟ್ಟ ದಾರಿಯಲ್ಲಿ ನಡೆಯಲು ಯತ್ನಿಸುತ್ತಿದ್ದಾರೆ. ತಾವು ಮೈಸೂರು ಬೆಂಗಳೂರು ಎರಡು ಕರ್ಣಾಟಕ ಸಂಘಗಳಿಗೂ ಹಲವು ವರ್ಷ ಅಧ್ಯಕ್ಷರಾಗಿದ್ದು ಅದಕ್ಕೆ ಚೈತನ್ಯವನ್ನೂ ಸಾಮರ್ಥ್ಯವನ್ನೂ ಸ್ಥಾಯಿತ್ವವನ್ನೂ ಸಂಪಾದಿಸಿಕೊಟ್ಟು ಅವುಗಳ ಕೃತಜ್ಞತೆಗೆ ಪಾತ್ರರಾಗಿದ್ದೀರಿ. ಅವುಗಳ ಸದಸ್ಯರು ತಾವು ಕೊಟ್ಟ ಸ್ಫೂರ್ತಿಯನ್ನು ತಮ್ಮ ಹೃದಯದಲ್ಲಿ ನೆಲೆಗೊಳಿಸಿಕೊಂಡು, ಹೋದ ಕಡೆಯಲ್ಲೆಲ್ಲಾ ಅದನ್ನು ಬೋಧಿವೃಕ್ಷದ ಶಾಖೆಯಂತೆ ಕೊಂಡುಹೋಗಿ ನಟ್ಟು ಬೆಳಸಿ ತಮ್ಮ ಕೀರ್ತಿಯನ್ನು ಹರಡುತ್ತಿದ್ದಾರೆ. ತಮ್ಮ ಗೀತೆಗಳೂ ಗೀತನಾಟಕಗಳೂ, ಸೂರ್ಯೋದಯದ ಕಾವು ಬೆಳಕುಗಳನ್ನು ನೀಡಿ ಆಧುನಿಕ ಕನ್ನಡ ಸಾಹಿತ್ಯೋದ್ಯಾನವು ಸೊಂಪಾಗಿ ಬೆಳೆಯುವಂತೆ ಮಾಡಿವೆ. ಕನ್ನಡದ ಕನ್ನಡತನವನ್ನು ಕಾಪಾಡಿಕೊಂಡು ಬರಲು ತಾವು ಮಾಡುತ್ತಿರುವ ಪ್ರಯತ್ನವು ಸ್ತುತ್ಯವಾಗಿದೆ. ಕನ್ನಡದ ಮುನ್ನಡೆಗಾಗಿ ತಾವು ಮೈಸೂರು ವಿಶ್ವವಿದ್ಯಾನಿಲಯಕ್ಕೂ ಸಾಹಿತ್ಯಪರಿಷತ್ತಿಗೂ ಸಾವಿರಾರು ರೂಪಾಯಿಗಳನ್ನು ದಾನಮಾಡಿ, ಕನ್ನಡದ ಅಭಿಮಾನಿಗಳಿಗೂ ಕರ್ಣಾಟಕದ ದಾನಿಗಳಿಗೂ ಒಂದು ಅನುಕರಣೀಯವಾದ ಆದರ್ಶವನ್ನು ಮುಂದೆ ಇಟ್ಟಿದ್ದೀರಿ.

ತಾವಿಬ್ಬರೂ* ಆಧುನಿಕ ಕನ್ನಡದ ಕುಟುಂಬದಲ್ಲಿ ಅಣ್ಣತಮ್ಮಂದಿರಾಗಿ, ಸಾಹಿತ್ಯಮಂದಿರದಲ್ಲಿ ಆಚಾರ್ಯಪುರುಷರಾಗಿ, ಕನ್ನಡನಾಡು

---

* ಶ್ರೀಮಾನ್ ಶ್ರೀಕಂಠಯ್ಯನವರು ಮತ್ತು ರಾಜಸೇವಾಪ್ರಸಕ್ತ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು.

ನುಡಿ ಜನಗಳಿಗೆ ಮುನ್ನಡೆಯನ್ನು ತೋರಿಸಿದ್ದೀರಿ: ನುಡಿದು ತೋರಿಸಿ ಕೊಟ್ಟಿದ್ದೀರಿ, ನಡೆದು ತೋರಿಸಿ ಕೊಟ್ಟಿದ್ದೀರಿ. ಕನ್ನಡದ ಬಾವುಟ ವನ್ನು ಹಾರಿಸಿ, ಅದರ ಸಂಸ್ಕೃತಿಯ ಹಿರಿಮೆಯನ್ನು ತೋರಿಸಿ ಸಂಸ್ಕೃತ, ತಮಿಳು, ಇಂಗ್ಲೀಷು ಮುಂತಾದ ಅನ್ಯ ಭಾಷಾಸಾಹಿತ್ಯಗಳ ಸಾರಸಂಪತ್ತನ್ನು ಕನ್ನಡದಲ್ಲಿ ಗದ್ಯವಾಗಿ, ಪದ್ಯವಾಗಿ, ನಾಟಕವಾಗಿ ತಂದು ತುಂಬಿಕೊಟ್ಟಿದ್ದೀರಿ; ತನುಮನಗಳಿಗೆ ಆದ ಆಯಾಸವನ್ನು ಲಕ್ಷಿಸದೆ ಕನ್ನಡನಾಡನ್ನು ಸುತ್ತಿ ಜನರಲ್ಲಿ ದೇಶಭಕ್ತಿ ಭಾಷಾಪ್ರೇಮ ಗಳನ್ನು ಬೆಳಸಿ ಬೆಳಗಿಸಿ ಕರ್ಣಾಟಕವನ್ನು ಕಟ್ಟಲು ವಿಶ್ವಪ್ರಯತ್ನ ಮಾಡಿದಿರಿ, ಮಾಡುತ್ತಿದ್ದೀರಿ. ಬರವಣಿಗೆಯಿಂದಲೂ ಉಪನ್ಯಾಸಗಳಿಂ ದಲೂ, ಸಹೃದಯತೆಯಿಂದಲೂ ಸ್ನೇಹದಿಂದಲೂ, ಕನ್ನಡ ಜನತೆಯ ಹೃತ್ಕುಮುದಕೋರಕವು ಅರಳಿ ಪರಿಮಳಿಸುವಂತೆ ಜೀವಮಾನವೆಲ್ಲಾ ದುಡಿದು ವ್ಯವಸಾಯ ಮಾಡಿದ್ದೀರಿ; ಅದರ ಫಲವಾಗಿ ರಾಜಮಾನ್ಯರೂ ಪ್ರಜಾಪೂಜಿತರೂ ಆಗಿದ್ದೀರಿ. ತಾವು ಇಡಿಯ ಕನ್ನಡನಾಡಿನ ಸಂಸ್ಕೃತಿಗೆ ಏಕಮಾತ್ರ ಕೇಂದ್ರಸಂಸ್ಥೆಯೆನಿಸಿಕೊಂಡ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಅದರ ಮೂಲಕ ಸಲ್ಲಿಸಿದ ಸೇವೆ ಅಪಾರ ವಾದುದು. ತಮ್ಮ ಅಧಿಕಾರಗಳಲ್ಲಿ ಅದು ಗರಿಗಟ್ಟಿಕೊಂಡು ಹಾರಾಡಿ ಕರ್ಣಾಟಕದ ಎಲ್ಲಾ ಪ್ರಾಂತಗಳಲ್ಲಿಯೂ, ಗ್ರಾಮಗ್ರಾಮಾಂತರ ಗಳಲ್ಲಿಯೂ ಗೋಚರವಾಗುವಂತಾಗಿದೆ; ಕನ್ನಡದ ಅಭಿಮಾನವು ಎಲ್ಲರ ಹೃದಯದಲ್ಲಿಯೂ ಮಿಡಿಯುವಂತಾಗಿದೆ."

**[ಮೈಸೂರು ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘವು ಅದರ ಬೆಳ್ಳಿಯ ಹಬ್ಬದ ಉತ್ಸವಸಮಾರಂಭದಲ್ಲಿ (೧೬–೧೨–೧೯೪೪) ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಮತ್ತು ರಾಜಸೇವಾ ಪ್ರಸಕ್ತ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಈ ವಿದ್ವಾಂಸ ರಿಗೆ ಸಮರ್ಪಿಸಿದ ಬಿನ್ನವತ್ತಳೆಯಿಂದ]**

# ಪ್ರಬುದ್ಧ ಕರ್ಣಾಟಕದ ಹುಟ್ಟು ಮತ್ತು ಬೆಳೆವಣಿಗೆ

" ಅಹಂ ಕರೋಮೀತಿ ವೃಥಾಭಿಮಾನಃ "—ಅಧ್ಯಾತ್ಮ ರಾಮಾಯಣ

---

" ಪ್ರಬುದ್ಧ ಕರ್ಣಾಟಕ " ವು ಹುಟ್ಟಿದ್ದು ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಆಶ್ರಯದಲ್ಲಿ ಮತ್ತು ಅದರ ಅಂಗವಾಗಿ; ಆದ್ದರಿಂದ ಆ ಕರ್ಣಾಟಕ ಸಂಘ ಹುಟ್ಟಿದ ಸಂದರ್ಭವನ್ನು ಇಲ್ಲಿ ಸಂಗ್ರಹವಾಗಿ ತಿಳಿಸುವುದು ಆವಶ್ಯಕ. ನಾನು ವಿದ್ಯಾರ್ಥಿಯಾಗಿದ್ದಾಗ ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ಇದ್ದದ್ದು ಎರಡು ಸಂಘಗಳು—(೧) ೧೮೯೪ ರಲ್ಲಿ ಹುಟ್ಟಿ ಥಾಮಸ್ ಡೆನ್ಹಾಂ ಅವರ ಅಧ್ಯಕ್ಷತೆಯಲ್ಲಿ ನಡೆಯುತ್ತಿದ್ದ ಚರಿತ್ರಸಂಘ. (೨) ಸುಮಾರು ೧೯೧೩ ರಲ್ಲಿ ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಂದ ಸ್ಥಾಪಿತವಾದ ಇಂಗ್ಲಿಷ್ ಸಾಹಿತ್ಯಸಂಘ. ಕನ್ನಡಕ್ಕೆ ಯಾವ ಸಂಘವೂ ಇರಲಿಲ್ಲ. ೧೯೧೫ ರಲ್ಲಿ ನಾನು ಬೆಂಗಳೂರಿಗೆ ವೇ|| ಗರಣಿ ಕೃಷ್ಣಾಚಾರ್ಯರಿಗೆ ಬದಲಾಗಿ ಕನ್ನಡದ ಉಪಾಧ್ಯಾಯನಾಗಿ ಹೋದಾಗ ಅಲ್ಲಿಯೂ ಕನ್ನಡಕ್ಕೆ ಯಾವ ಸಂಘವೂ ಇರಲಿಲ್ಲ. ಒಂದು ಸಂಘವನ್ನು ಸ್ಥಾಪಿಸಬೇಕೆಂಬ ಯೋಚನೆಯೂ ಹೋದ ಕೂಡಲೆ ಬರಲಿಲ್ಲ. ಕನ್ನಡ " ಮುನುಷಿ " ಎಂದು ವಿದ್ಯಾರ್ಥಿಗಳ ಅನಾದರಣೆ ತಿರಸ್ಕಾರ ಹಾಸ್ಯಗಳಿಗೆ ಗುರಿಯಾಗದಂತೆ, ಅವರಿಗೆ ಉಪಯೋಗವಾಗುವ ರೀತಿಯಲ್ಲಿ ಪಾಠ ಹೇಳಿ ಕನ್ನಡಕ್ಕೂ ಅದರ ಉಪಾಧ್ಯಾಯನಿಗೂ ಒಂದು ಗೌರವವನ್ನು ಸಂಪಾದಿಸಿಕೊಳ್ಳುವುದಕ್ಕೇ ಕೆಲವು ಕಾಲ ಹಿಡಿಯಿತು. ಕನ್ನಡದಲ್ಲಿಯೂ ಕಲಿಯುವುದು ಇದೆ, ಇಂಗ್ಲಿಷಿನಂತೆಯೇ ಕಲಿಯುವುದು ಇದೆ, ಎಂದು ತೋರಿಸಿ, ಕನ್ನಡದ ಸ್ಥಿತಿಯನ್ನು ಬಂಗಾಳಿ ಮರಾಠಿಗಳ ಸ್ಥಿತಿಯೊಡನೆ ಹೋಲಿಸಿ ಕನ್ನಡದಲ್ಲಿ ಒಂದು ಅಭಿಮಾನ ಹುಟ್ಟಿಸಿ ವಿದ್ಯಾರ್ಥಿಗಳ ಸಹಾನುಭೂತಿ ಸ್ನೇಹ ಗೌರವಗಳನ್ನು ಗಳಿಸಲು ಒಂದೆರಡು ವರ್ಷ ಬೇಕಾಯಿತು. ಅಂದಿನ ಸ್ಥಿತಿಯನ್ನು ಪ್ರಬುದ್ಧ ಕರ್ಣಾಟಕದ ಮೊಟ್ಟ

ಮೊದಲ ಸಂಚಿಕೆಯ ಮೊದಲನೆಯ ಲೇಖನದ ಈ ವಾಕ್ಯಗಳಲ್ಲಿ ಸೂಚಿಸಿದೆ :—

" ಬೆಳಗಾಯಿತು. ಕೂಡಲೆ ಮಲಗಿದ್ದವರೆಲ್ಲರೂ ಎದ್ದು ಅವರವರ ಕೆಲಸಗಳಿಗೆ ಹೊರಟರು. ಮನೆಯಲ್ಲಿ ಎಲ್ಲೆಲ್ಲಿ ನೋಡಿದರೂ ಗದ್ದಲ; ಆದರೂ ಇನ್ನೂ ಕೆಲವು ಹುಡುಗರು ಮಲಗಿ ನಿದ್ದೆ ಹೋಗುತ್ತಿದ್ದರು. ಅದನ್ನು ನೋಡಿ ಅವರ ತಾಯಿಯು 'ಇನ್ನೂ ಏಳುವುದಿಲ್ಲವೇನ್ರೋ! ಓದುವ ಹುಡುಗರು ಇಷ್ಟು ಹೊತ್ತು ಮಲಗಿದರೆ ಹ್ಯಾಗೆ?' ಎಂದು ಗದರಿಸಿದಳು.

ಕೂಡಲೆ ಹುಡುಗರು ಎದ್ದು ಸರಸರನೆ ಕೈಯಲ್ಲಿ ಒಂದೊಂದು ಕನ್ನಡ ಪುಸ್ತಕವನ್ನು ಹಿಡಿದು ಕುಳಿತುಕೊಂಡರು. ಸ್ವಲ್ಪ ಹೊತ್ತಿನ ಮೇಲೆ ಅವರ ಉಪಾಧ್ಯಾಯರು ಬಂದು ನೋಡುತ್ತಾರೆ! ಕೆಲವು ಹುಡುಗರು ಇನ್ನೂ ತೂಕಡಿಸುತ್ತಿದ್ದಾರೆ! ಕೆಲವರು ಪುಸ್ತಕವನ್ನು ತಲೆಕೆಳಗಾಗಿ ಹಿಡಿದುಕೊಂಡಿದ್ದಾರೆ! ಒಬ್ಬನಾದರೂ ಮುಖ ತೊಳೆದಿಲ್ಲ! ಉಪಾಧ್ಯಾಯರು ಅವರೆಲ್ಲರನ್ನೂ ಮೊದಲು ಚೊಕ್ಕಟವಾಗಿ ಕೈಕಾಲು ಮುಖಗಳನ್ನು ತೊಳೆದುಕೊಂಡು ಬರುವಂತೆ ಹೇಳಿದರು. ಬಳಿಕ ಎಲ್ಲರಲ್ಲಿಯೂ ಲವಲವಿಕೆ ಹುಟ್ಟಿತು.

ಹುಡುಗರು ಬುದ್ಧಿವಂತರು. ಆದರೂ ವ್ಯೈಬಗ್ಗಿ ಕೆಲಸ ಮಾಡುತ್ತಿರಲಿಲ್ಲ. ಆದ್ದರಿಂದ ಇವರ ಕೈಯಲ್ಲಿ ಕೆಲಸ ಮಾಡಿಸುವುದಕ್ಕೆ ಪಾಪ ಆ ಉಪಾಧ್ಯಾಯನು ಸ್ವಲ್ಪ ಕಷ್ಟಪಡಬೇಕಾಯಿತು. ಕೊನೆಗೆ ಹುಡುಗರು ಅವನ ದಾರಿಗೆ ಬಂದು ಚೆನ್ನಾಗಿ ವ್ಯಾಸಂಗಮಾಡುತ್ತ ಯೋಗ್ಯರೆನಿಸಿಕೊಂಡರು. ಉಪಾಧ್ಯಾಯನಿಗೂ ಸಂತೋಷವಾಗಿ ಕಾಳಿದಾಸನ ಕುಮಾರಸಂಭವದ 'ಕ್ಲೇಶಃ ಫಲೇನ ಹಿ ಪುನರ್ನವತಾಂ ವಿಧತ್ತೇ' (ತಕ್ಕ ಫಲವುಂಟಾದರೆ ಪಟ್ಟ ಕಷ್ಟಗಳೆಲ್ಲ ಮರೆತು ಹೋಗಿ ಹೊಸ ಉತ್ಸಾಹ ಉಂಟಾಗುತ್ತದೆ ಎಂಬ ತಾತ್ಪರ್ಯವುಳ್ಳ) ಶ್ಲೋಕವು ಜ್ಞಾಪಕಕ್ಕೆ ಬಂತು."

ಆಗ ಮೈಸೂರು ವಿಶ್ವವಿದ್ಯಾನಿಲಯವು ಹುಟ್ಟಿದ ಹೊಸದು. ಹುಡುಗರು ಅದರ ಪರೀಕ್ಷೆಗಳಿಗೆ ಕೂರುವ ಕಾಲ ಇನ್ನೂ ಬಂದಿರಲಿಲ್ಲ. ಮದರಾಸ್ ವಿಶ್ವವಿದ್ಯಾನಿಲಯದ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕನ್ನಡದ ಪ್ರಬಂಧ ಪತ್ರಿಕೆಯಲ್ಲಿ ಇಂಗ್ಲಿಷ್ ಪಠ್ಯಪುಸ್ತಕದ ಮೇಲೆ ಒಂದು ಪ್ರಶ್ನೆ ಬರುತ್ತಿತ್ತು. ಅದನ್ನು ಅದುವರೆಗೆ ಇಂಗ್ಲಿಷಿನ ಉಪಾ

ಧ್ಯಾಯರು ತೆಗೆದುಕೊಳ್ಳುತ್ತಿರಲಿಲ್ಲ. ಕನ್ನಡದ ಉಪಾಧ್ಯಾಯರಿಗೆ ಸಾಧ್ಯವಿರಲಿಲ್ಲ. ಎರಡನ್ನೂ ಬಲ್ಲ ನಾನು ಅದನ್ನು ಇಂಗ್ಲಿಷ್ ಉಪಾಧ್ಯಾಯನಂತೆ ವಿದ್ಯಾರ್ಥಿಯಂತೆ ವ್ಯಾಸಂಗಮಾಡಿ, ಅದರ ಸಾರಾಂಶವನ್ನು ಬರೆದುಕೊಟ್ಟು ಕನ್ನಡದಲ್ಲಿ ಪ್ರಬಂಧವನ್ನು ಬರೆದು ಓದಿ ಹೇಳಿದೆ. ಪರೀಕ್ಷೆಗೆ ಉಪಯುಕ್ತವಾಗಿದ್ದದ್ದರಿಂದ ಅದನ್ನು ಹುಡುಗರು ಎಲ್ಲರೂ ಅಪೇಕ್ಷಿಸಿದರು. ಈ ಮಧ್ಯೆ ಕೆಲವು ವಿದ್ಯಾರ್ಥಿಗಳು ಅತ್ಯುತ್ತಮವಾದ ಪ್ರಬಂಧಗಳನ್ನು ಬರೆದಿದ್ದರು. ಶ್ರೀಮರ್ನ್ ಸಿ. ಕೆ. ವೆಂಕಟರಾಮಯ್ಯನವರು ನಳಚರಿತ್ರೆಯ ಮೇಲಣ ಒಂದು ಪ್ರಶ್ನೆಗೆ ಒಂದು ಅಭ್ಯಾಸ ಪುಸ್ತಕದ ತುಂಬ ಬರೆದಿದ್ದರು. ಹುಡುಗರು ಅಭ್ಯಾಸ ಪ್ರಬಂಧವನ್ನು ಬರೆಯುವುದಕ್ಕೇ ಕಳ್ಳತಪ್ಪಿಸಿಕೊಳ್ಳುವಾಗ, ಬರೆದರೂ ಒಂದೆರಡು ಪುಟಗಳನ್ನು ಕಾಟಕ್ಕೆ ತಪ್ಪೋ ನೆಪ್ಪೋ ಬರೆದುಹಾಕುವಾಗ, ಈ ವಿದ್ಯಾರ್ಥಿ ನಿರರ್ಗಳವಾಗಿ ಒಂದು ತಪ್ಪಿಲ್ಲದೆ ಮುತ್ತಿನಂಥ ಬಿಡಿಬಿಡಿಯಾದ ಅಕ್ಷರದಲ್ಲಿ ಅನಾಯಾಸವಾಗಿ ಒಂದು ಪುಸ್ತಕ ಬರೆದುಬಿಟ್ಟಿದ್ದನು. ಇದರಂತೆ ಶ್ರೀ ಎಸ್. ವಿ. ರಂಗಣ್ಣನವರು, ಎನ್. ನೀಲಕಂಠಪ್ಪನವರು ಮುಂತಾದ ಮೇಧಾವಿಗಳಾದ ವಿದ್ಯಾರ್ಥಿಗಳು ತಮ್ಮ ಬರವಣಿಗೆಯಲ್ಲಿ ಒಂದೊಂದು ವಿಧವಾದ ಅಪೂರ್ವ ಸಾಮರ್ಥ್ಯವನ್ನು ವ್ಯಕ್ತಪಡಿಸಿದ್ದರು. ಇವರ ಬರವಣಿಗೆಯೆಲ್ಲಾ ವ್ಯರ್ಥವಾಗಿ ಹೋಗಿಬಿಡುವುದಲ್ಲಾ ಎಂದು ನನಗೆ ಒಂದು ಬಗೆಯ ಕೊರಗಾಗಿತ್ತು. ಆಗ ನಾನು ಇವೆಲ್ಲವನ್ನೂ ಒಂದು ಪ್ರಕಟನೆಯಾಗಿ ಅಚ್ಚು ಮಾಡಿಸಬಹುದೆಂದೂ, ವಿದ್ಯಾರ್ಥಿಗಳು ವೆಚ್ಚವಹಿಸುವುದಾದರೆ ನಾನು ಆ ಕೆಲಸವನ್ನು ಕೈಕೊಳ್ಳುವೆನೆಂದೂ ಹೇಳಿದೆ. ಅದಕ್ಕೆ ಬಹುಮಂದಿ ಉತ್ಸಾಹಶಾಲಿಗಳಾಗಿ ಮುಂದೆ ಬಂದರು. ಅದರ ಜೊತೆಯಲ್ಲಿಯೇ ಸಂಘದ ಯೋಚನೆಯೂ ಹುಟ್ಟಿತು. ವಿದ್ಯಾರ್ಥಿಗಳು ಕೊಡುವ ಹಣವನ್ನು ಸಂಘದ ಚಂದಾ ಎಂದು ಭಾವಿಸಿ ಪತ್ರಿಕೆಯನ್ನು ಉಚಿತವಾಗಿ ಕೊಡಬಹುದು ಎಂದೆ. ಅದಕ್ಕೂ ವಿದ್ಯಾರ್ಥಿಗಳು ಒಪ್ಪಿದರು. ಇಷ್ಟು ಹೊತ್ತಿಗೆ ಶ್ರೀಮರ್ನ್ ಎಚ್. ಸುಬ್ಬಜೋಯಿಸ್, ಎಲ್. ನಾರಾಯಣರಾವ್, ಸಿ. ಎನ್. ಶ್ರೀನಿವಾಸಯ್ಯಂಗಾರ್, ಬಿ. ಎಸ್. ಮಾಧವರಾವ್, ಪಿ. ಕೃಷ್ಣರಾವ್,

ಎಂ. ಸಿದ್ದಲಿಂಗಯ್ಯ ಮುಂತಾದ ಹಲವು ಅಭಿಮಾನಶಾಲಿಗಳಾದ ವಿದ್ಯಾರ್ಥಿಗಳು ನನ್ನ ಸುತ್ತ ಮುತ್ತಿಕೊಂಡು ನಾನು ಹೇಳಿದ್ದನ್ನು ನಡಸುವುದಕ್ಕೆ ಸಿದ್ಧರಾದರು.* ಮೊದಲು ಸಂಘದ ಏರ್ಪಾಡು. ಈಗ 'ಕರ್ಣಾಟಕ ಸಂಘ' ವೆಂಬುದು ಸುಪರಿಚಿತವಾದ ಹೆಸರು. ಆಗ ಈ ಸಂಸ್ಥೆಗೆ ಏನು ಹೆಸರು ಇಡಬೇಕೆಂದೇ ನಾನು ಬಹುದಿನ ಯೋಚಿಸಿದೆ—ಸಾಹಿತ್ಯ ಸಮಾಜವೇ, ಕನ್ನಡಸಮಾಜವೇ, ಕರ್ಣಾಟಕ ಸಮಾಜವೇ, ಇತ್ಯಾದಿ. ಆಗ್ಗೆ ಇಂಗ್ಲಿಷಿನಲ್ಲಿ ರೂಢಿಯಾಗಿದ್ದ "ಸೊಸೈಟಿ" ಎಂಬ ಪದಕ್ಕೆ ಸಮಾನ ಪದವಾಗಿ "ಸಮಾಜ" ವೇ ಮುಂದೆ ಬರುತ್ತಿತ್ತು. ಆದರೆ ಏಕೋ ಅದರಲ್ಲಿ ಸತ್ವವಿಲ್ಲವೆಂದು ಭಾಸವಾಗಿ ಕೊನೆಗೆ ಬಾಯಿತುಂಬ ಬರುವ, ಗಂಭೀರವಾಗಿ ಕೇಳುವ, "ಕರ್ಣಾಟಕ ಸಂಘ" ಎಂಬುದನ್ನು ನಿಷ್ಕರ್ಷೆಮಾಡಿಯಾಯಿತು. ಈಗ ನಾನು ಬಿಟ್ಟರೂ ನನ್ನ ಕಂಬಳಿ ಬಿಡುವಂತಿರಲಿಲ್ಲ. ಸಂಘವು ಆರಂಭವಾಗಲೇಬೇಕಾಯಿತು. (ಆಗಸ್ಟ್, ೧೯೧೮.) ಆಗ ಶ್ರೀಮಾನ್ ಬಿ. ವೆಂಕಟನಾರಣಪ್ಪನವರು ಕಾಲೇಜಿನಲ್ಲಿ ಭೌತಶಾಸ್ತ್ರದ ಅಧ್ಯಾಪಕರಾಗಿದ್ದರು. ೧೯೧೫ ರಲ್ಲಿ ಆರಂಭವಾಗಿದ್ದ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕೆಲಸಮಾಡಿ ಗೌರವವನ್ನು ಗಳಿಸಿದ್ದ ವ್ಯಕ್ತಿಗಳಾಗಿದ್ದರು. ಈ "ಜ್ಞಾನವೃದ್ಧರೂ ವಯೋವೃದ್ಧರೂ" ಆದ ಮಹನೀಯರು ನಮ್ಮ ಸಂಘದ ಮೊದಲನೆಯ ಅಧ್ಯಕ್ಷರಾಗಬೇಕೆಂದು ನಾನು ಸೂಚಿಸಿದೆ. ನಾನೇ ಅಧ್ಯಕ್ಷನಾಗಬೇಕೆಂದು ಸೂಚನೆ ಬಂತು; ಆದರೆ ನಾನು ದೊಡ್ಡವರನ್ನು ಮುಂದಿಟ್ಟುಕೊಂಡು ಕೆಲಸಮಾಡಬೇಕೆಂದೂ, "ಕೆಲಸ ಮಾಡುವುದಕ್ಕೆ ಹಿಂದೇನು ಮುಂದೇನು?" ಎಂದೂ, ನಾನು ಉಪಾಧ್ಯಕ್ಷನಾಗಿರುತ್ತೇನೆಂದೂ ಹೇಳಿ ಎಲ್ಲರನ್ನೂ ಒಪ್ಪಿಸಿದೆ; ಜೊತೆಗೆ ಕಾರ್ಯದರ್ಶಿ ಮಾತ್ರ ವಿದ್ಯಾರ್ಥಿಯೇ ಆಗಿರಬೇಕೆಂದೂ ಸಂಘವು

* ಇವರಲ್ಲಿ ಅನೇಕರು ಈಗ ದೊಡ್ಡ ದೊಡ್ಡ 'ಡಾಕ್ಟರು'ಗಳೂ ಪ್ರೊಫೆಸರುಗಳೂ ಇಂಜಿನಿಯರುಗಳೂ ಆಗಿದ್ದಾರೆ. ಅವರಿಗೆ ಈಗಲೂ ಕನ್ನಡದಲ್ಲಿ ಅದೇ ಅಭಿಮಾನವಿದೆ.

ವಿದ್ಯಾರ್ಥಿಗಳಿಗೆ ಒಂದು ಶಿಕ್ಷಣ ಕ್ಷೇತ್ರವಾಗಬೇಕೆಂದೂ ಖಂಡಿತವಾಗಿ ಹೇಳಿದೆ. ಅದಕ್ಕೂ ಒಪ್ಪಿಗೆ ದೊರೆಯಿತು. ಹೀಗೆ ಮೊದಲನೆಯ ಕಾರ್ಯದರ್ಶಿಗಳಾಗಿ ನಿಯಮಿತರಾದ—ಚುನಾಯಿತರಲ್ಲ—ಶ್ರೀಮಾನ್ ಡಿ. ಗುರುರಾಯರು ಈಗಲೂ ನನ್ನಂತೆ ಉಪಾಧ್ಯಾಯರಾಗಿರುತ್ತ ಮೇಲೆ ನಾನು ಬರೆದಿರುವುದರ ಸತ್ಯತೆಯನ್ನು ಸಮರ್ಥಿಸಲು ಸಿದ್ಧರಾಗಿರುತ್ತಾರೆ. ರಾವ್‌ಬಹದ್ದೂರ್ ರಾ. ನರಸಿಂಹಾಚಾರ್ಯರು ಮೊದಲನೆಯ ವರ್ಷದ ಆರಂಭಭಾಷಣ ಮಾಡಿದರು. ಇಂಥ ಹಿರಿಯರಾದ ವಿದ್ವಾಂಸರೂ, ಮೇಧಾವಿಗಳಾದ ಉತ್ಸಾಹಿ ತರುಣರೂ ಸೇರಿದರೆ ಆಗದ ಕೆಲಸವೂ ಒಂದು ಉಂಟೆ? ಅದು ಆಗದೆ ಇರುತ್ತದೆಯೋ?—"ಅಹಂ ಕರೋಮೀತಿ ವೃಥಾಭಿಮಾನಃ!"

## ಹೆಸರು

ನಾನು ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗ ನನ್ನ ಸ್ನೇಹಿತರೊಬ್ಬರು ಕೊಟ್ಟ, ಸ್ವಾಮಿ ವಿವೇಕಾನಂದರ "ಕೊಲಂಬೋದಿಂದ ಆಲ್ಮೋರಾವರೆಗೆ" ಎಂಬ ಇಂಗ್ಲಿಷ್ ಉಪನ್ಯಾಸ ಗ್ರಂಥವನ್ನು ಓದಿ, ವಿವೇಕಾನಂದರಲ್ಲಿ ನನಗೆ ಒಂದು ಗೌರವ ಬಂದಿತ್ತು. ಒಂದೆರಡು ವರ್ಷಗಳಲ್ಲಿ ಸ್ವಾಮಿ ಅಭೇದಾನಂದರು ಮೈಸೂರು ಟವನ್ ಹಾಲಿನಲ್ಲಿ ಕಿಕ್ಕಿರಿದ ಜನಸಂದಣಿಯ ಮಧ್ಯದಲ್ಲಿ ಹರಿಸಿದ ವಾಗ್ಝರಿಯನ್ನು ಕೇಳಿ ಆ ಗೌರವವು ಭಕ್ತಿಯಾಗಿ ಪರಿಣಮಿಸಿತ್ತು. ೧೯೧೫ ರಲ್ಲಿ ಬೆಂಗಳೂರಿಗೆ ಬರುವ ಹೊತ್ತಿಗೆ ರಾಮಕೃಷ್ಣ ಮಠವನ್ನು ಕಂಡೇನೇ ಎಂಬ ತವಕ ಹುಟ್ಟಿತ್ತು. ಅಷ್ಟು ಹೊತ್ತಿಗೆ ಶ್ರೀಮಾನ್ ವೆಂಕಣ್ಣಯ್ಯನವರೂ ಬೆಂಗಳೂರಿಗೆ ಬಂದು ನಾವಿಬ್ಬರೂ ಶ್ರೀ ರಾಮಕೃಷ್ಣ ಮಠಕ್ಕೆ ಹೋಗಿ ಬರಲು ಮೊದಲು ಮಾಡಿದೆವು. ಆಗ ಆ ಮಠದ ಅಧ್ಯಕ್ಷರಾಗಿದ್ದ ಶ್ರೀ ನಿರ್ಮಲಾನಂದಸ್ವಾಮಿಗಳು ಶ್ರೀ ರಾಮಕೃಷ್ಣ ಪರಮಹಂಸರ ಮೇಲೆ ನಾವು ಕನ್ನಡದಲ್ಲಿ ಒಂದು ಚಿಕ್ಕ ಪುಸ್ತಕವನ್ನು ಬರೆಯಬೇಕೆಂದು ಸೂಚಿಸಿ ಅದಕ್ಕೆ ಬೇಕಾದ ಸಾಹಿತ್ಯವನ್ನೂ ಅದೇ ಮಠದಲ್ಲಿದ್ದ ಸ್ವಾಮಿ ವಿದೇಹಾನಂದರ ಸಹಾಯವನ್ನೂ ಒದಗಿಸಿ ಕೊಟ್ಟರು. ನಾವು ಆ ಕೆಲಸದಲ್ಲಿ ತೊಡಗಿದ್ದಾಗ ನಮಗೆ ಪರಸ್ಪರ ಗೌರವ ವಿಶ್ವಾಸಗಳು ಬೆಳೆದು,

ಸ್ವಾಮಿಗಳು ಒಂದು ದಿನ "ನೀವು ಧಾರ್ಮಿಕ ವಿಚಾರಗಳನ್ನು ನಿಮ್ಮ ಜನಕ್ಕೆ ತಿಳಿಸಲು ಪ್ರಬುದ್ಧ ಕರ್ಣಾಟಕವೆಂಬ ಒಂದು ಪತ್ರಿಕೆಯನ್ನು ಏಕೆ ಹೊರಡಿಸಬಾರದು? ಪ್ರಬುದ್ಧ ಭಾರತವು ಇಂಗ್ಲಿಷಿನಲ್ಲಿದೆ. ಆದರೆ ಆಯಾ ಪ್ರಾಂತದವರು ಆಯಾ ದೇಶಭಾಷೆಯಲ್ಲಿ ಬರೆಯದೆ ಹೋದರೆ ಅದು ಹೆಚ್ಚು ಜನಕ್ಕೆ ತಿಳಿಯುವುದಿಲ್ಲ. ಈಗಾಗಲೇ 'ಪ್ರಬುದ್ಧ ಕೇರಳಂ' ಎಂಬ ಪತ್ರಿಕೆ ಹೊರಟು ನಡೆಯುತ್ತಿದೆ. ಮೈಸೂರು ಕೇರಳಕ್ಕಿಂತ ದೊಡ್ಡದು" ಎಂದಿದ್ದರು. ಅಂಥ ಪತ್ರಿಕೆ ಹೊರಡಿಸುವುದು ನಮ್ಮಿಂದ ಆಗದ್ದರಿಂದ ಆ ಮಾತು ಅಲ್ಲಿಗೆ ನಿಂತುಹೋಗಿತ್ತು. ಆದರೆ "ಪ್ರಬುದ್ಧ ಕರ್ಣಾಟಕ" ಎಂಬ ಹೆಸರು ಮಾತ್ರ ಮರೆತುಹೋಗಲಿಲ್ಲ; ಮನಸ್ಸಿನಲ್ಲಿ ತಾಡಿತವಾಗುತ್ತಲೇ ಇತ್ತು. ೧೯೧೮ ರಲ್ಲಿ ಕರ್ಣಾಟಕ ಸಂಘದ ಅಂಗವಾಗಿ ಒಂದು ಪತ್ರಿಕೆಯನ್ನು ಹೊರಡಿಸಬೇಕೆಂದು ನಿರ್ಧರವಾದಾಗ, ಅದು ವಿದ್ಯಾರ್ಥಿಗಳು ನಡಸುವ ಪತ್ರಿಕೆಯಾದ್ದರಿಂದ "ವಿದ್ಯಾರ್ಥಿ" ಎಂದು ಹೆಸರಿರಲೆಂದು ನಾನು ಸೂಚಿಸಿದೆ; ಅದಕ್ಕೆ ಎಲ್ಲರೂ ಒಪ್ಪಿದ್ದರು. ಆದರೆ ಅಷ್ಟು ಹೊತ್ತಿಗೆ ಮಂಗಳೂರು ಪ್ರಾಂತದಲ್ಲಿ "ವಿದ್ಯಾರ್ಥಿ" ಎಂಬ ಹೆಸರಿನ ಪತ್ರಿಕೆಯೊಂದು ಆಗಲೇ ನಡೆಯುತ್ತಿತ್ತೆಂದು ತಿಳಿದುಬಂದದ್ದರಿಂದ ಬೇರೆ ಹೆಸರನ್ನು ಯೋಚಿಸಲು ತೊಡಗಿದೆ; ಆಗ ಮೊಟ್ಟಮೊದಲು ತೋರಿದ್ದು "ಪ್ರಬುದ್ಧ ಕರ್ಣಾಟಕ". ಅದನ್ನು ರಾಮಕೃಷ್ಣ ಮಠದಿಂದ ಹೊರಡಬಹುದಾದ ಧಾರ್ಮಿಕ ಪತ್ರಿಕೆಗೆ ಉಪಯೋಗಿಸದೆ, ಸೆಂಟ್ರಲ್ ಕಾಲೇಜಿನಿಂದ ಹೊರಡುವ ಸಾಹಿತ್ಯ ಪತ್ರಿಕೆಗೆ ಉಪಯೋಗಿಸಿಕೊಳ್ಳಬಹುದೇ. ಎಂದು ಮೊದಲು ಸ್ವಲ್ಪ ಶಂಕೆಯುಂಟಾದರೂ, ಅದು ಹೆಚ್ಚು ಹೊತ್ತು ಇರಲಿಲ್ಲ; ಬೇರೆ ಹೆಸರೂ ಸೂಚಿತವಾಗಲಿಲ್ಲ; ಹೊಳೆಯಲಿಲ್ಲ; ಆದ್ದರಿಂದ ಅದೇ ನಿಂತಿತು. ಕನ್ನಡ ನಾಡು ಎಚ್ಚತ್ತಿದೆ, ಯುವಕ ವಿದ್ಯಾರ್ಥಿಗಳ ಮನಸ್ಸು ವಿಕಸಿತವಾಗುತ್ತಿದೆ ಎಂಬ ಭಾವನೆ ಇದ್ದದ್ದರಿಂದ, ಆಮೇಲೆ ಅದೇ ಸರಿ ಎನ್ನಿಸಿತು. ನಮ್ಮ ಪತ್ರಿಕೆಯ ಮುಖಪತ್ರದ ಮೇಲೆ ಇಂದಿಗೂ ಇರುವ ಚಿತ್ರವೂ ಶ್ರೀ ರಾಮಕೃಷ್ಣ ಮಠದಿಂದಲೇ ಪ್ರೇರಿತವಾದದ್ದು; ಅವರ ಸಾಹಿತ್ಯದ ಪ್ರತೀಕವಾಗಿ, ರಾಜಯೋಗ ಜ್ಞಾನಯೋಗ ಕರ್ಮಯೋಗ ಭಕ್ತಿಯೋಗಗಳನ್ನು ಸೂಚಿಸುವ ಮುದ್ರೆಯನ್ನು

ಮನಸ್ಸಿನಲ್ಲಿಟ್ಟುಕೊಂಡು ಕನ್ನಡ ನಾಡಿನ ಸೂರ್ಯದೇವನ ಸನ್ನಿಧಿಯಲ್ಲಿ ಆಗಲೆ ಅರಳಿರುವ ಮತ್ತು ಇಂದು ಮೊಗ್ಗಾಗಿ ಮುಂದೆ ಅರಳಬೇಕಾಗಿರುವ ಹೃತ್ಕಮಲಗಳನ್ನು ಸೂಚಿಸಿ, ಒಂದು ಚಿತ್ರವನ್ನು ಬರೆದು ವಿದ್ಯಾರ್ಥಿಗಳಿಗೆ ತೋರಿಸಿದೆ. ಅದು ಸರ್ವಾನುಮತದಿಂದ ಒಪ್ಪಿಗೆಯನ್ನು ಪಡೆಯಿತು; ಸಂಘದ ಅಧ್ಯಕ್ಷರಾದ ಶ್ರೀವರ್ಮಾ ವೆಂಕಟನಾರಣಪ್ಪನವರೂ ಒಪ್ಪಿ, ಅದನ್ನು ಒಬ್ಬ ನಕ್ಷೆಗಾರನ ಕೈಯಿಂದ ಬರೆಸಿ ತಂದು ಕೊಟ್ಟರು. ಅದು ಪಡಿಯಚ್ಚಾಗಿ ಇಂದಿಗೂ ಉಪಯೋಗದಲ್ಲಿದೆ.* ಸೂರ್ಯನು ಉದಯಿಸುತ್ತಿದ್ದಾನೆ, ಕಮಲಗಳು ಅರಳುತ್ತಿವೆ. ಮುಂದಿನ ಪುಟದಲ್ಲಿ ಮೊದಲನೆಯ ಸಂಚಿಕೆಯ ಮುಖಪತ್ರವನ್ನು ಕೊಟ್ಟಿದೆ.

## ಲೇಖನಗಳು

ಪ್ರಬುದ್ಧ ಕರ್ಣಾಟಕವು ಹುಟ್ಟಿದಾಗ ಅದು ಸಾಹಿತ್ಯ ಪತ್ರಿಕೆಯಾಗಿರಬೇಕೆಂದೂ ಮುಖ್ಯವಾಗಿ ವಿಮರ್ಶಾತ್ಮಕವಾಗಿರಬೇಕೆಂದೂ ನಿರ್ಧರವಾಗಿತ್ತು. ಇದನ್ನು ಮೊದಲನೆಯ ಸಂಚಿಕೆಯ ಆರಂಭ ಲೇಖನದಿಂದ ತೆಗೆದ ಮುಂದಿನ ವಾಕ್ಯಗಳು ತೋರಿಸುತ್ತವೆ :—

"ಸಾಹಿತ್ಯವು ಜನಗಳಿಗೆ ಬೇಕಿಲ್ಲವೆಂದು ನಾವು ನಂಬಲಾರೆವು ; ಇದರಲ್ಲಿ ಅವರಿಗೆ ಇರುವ ಆಸಕ್ತಿಯಿಂದಲೇ ಉತ್ತಮವಾದ ಸಾಹಿತ್ಯಕ್ಕೆ ಶಾಶ್ವತವಾಗಿ ನಿಲ್ಲುವ ಸಾಮರ್ಥ್ಯ ಬಂದಿದೆ . . . ನಮ್ಮ ಮುಖ್ಯ ಕೆಲಸವೆಂದರೆ ಕಾವ್ಯಸೃಷ್ಟಿಗೆ ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಡುವುದು . . . ಸಾಹಿತ್ಯವನ್ನೆಲ್ಲ ತುಲನಪೂರ್ವಕವಾಗಿ ವಿಮರ್ಶೆಮಾಡಿ, ನಮ್ಮ ಕವಿಗಳಲ್ಲಿರುವ ಗುಣದೋಷಗಳೇನು ಸತ್‌ಕಾವ್ಯದ ಲಕ್ಷಣಗಳೇನು ಎಂಬುದನ್ನು ನಿಷ್ಪಕ್ಷಪಾತ ಬುದ್ಧಿಯಿಂದ ವಿಚಾರಮಾಡಿ . . . ಒಟ್ಟಿನಲ್ಲಿ ಯಾವುದರಿಂದ ನಮ್ಮ ದೇಶವು ಉತ್ಸಾಹಗೊಂಡು ಜೀವಕಳೆಯಿಂದ ತುಂಬಬಹುದೋ, ಯಾವುದರಿಂದ ಗ್ರಂಥಗಳ ರಸಾಸ್ವಾದನೆ ಮಾಡಿ ಆನಂದವನ್ನು ಪಡೆಯಬಹುದೋ, ಯಾವುದರಿಂದ ಕನ್ನಡ ಕಾವ್ಯಮಾಲೆಯು ಶ್ರೇಷ್ಠವಾದ ರೀತಿಯಲ್ಲಿ ಬೆಳೆಯಬಹುದೆಂದು ನಮಗೆ ದೃಢವಾದ ನಂಬಿಕೆಯಿದೆಯೋ ಅಂಥ ವಿಷಯಗಳನ್ನೇ ಕನ್ನಡಿಗರಿಗೆ ಕಾಣಿಕೆಯಾಗಿ ತಂದು ಒಪ್ಪಿಸುವ ಕೆಲಸವನ್ನು "ಪ್ರಬುದ್ಧ ಕರ್ಣಾಟಕ" ಕ್ಕೆ ಒಪ್ಪಿಸಿದ್ದೇವೆ."

---

* ಪ್ರಬುದ್ಧ ಕರ್ಣಾಟಕದ ರಕ್ಷಾಪತ್ರದ ಮೇಲೆ ಈ ಪಡಿಯಚ್ಚೂ ಒಳಗೆ ಮೊದಲನೆಯ ಪುಟದಲ್ಲಿ ಸೆಂಟ್ರಲ್ ಕಾಲೇಜಿನ ಚಿತ್ರವೂ ೧೯೩೭ ವರೆಗೆ ಮುದ್ರಿತವಾಗುತ್ತಿದ್ದುವು. ಪತ್ರಿಕೆ ವಿಶ್ವವಿದ್ಯಾನಿಲಯಕ್ಕೆ ಬಂದಾಗ, ಮೇಲೂ ಮತ್ತೂ ಒಳಗೂ ಈ ಪಡಿಯಚ್ಚೇ ಅಚ್ಚಾಗುತ್ತಿತ್ತು. ಸರ್ವಜಿತ್ ಸಂವತ್ಸರದಿಂದ ಅದು ಅಚ್ಚಾಗುವುದು ನಿಂತಿತು.




ಸಿದ್ಧಾರ್ಥಿ ಸಂವತ್ಸರ ಯುಗಾದಿಯ ಸಂಚಿಕೆ

## ವಿಷಯಸೂಚಿಕೆ



---

ಬೆಂಗಳೂರು:
ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ
ಪ್ರಕಟಿಸಲ್ಪಟ್ಟಿದೆ
೧೯೧೯

ಈ ಲೇಖನಗಳು ಮುಖ್ಯವಾಗಿ ಮೂರು ಬಗೆಯುವಾಗಿರಬೇಕೆಂದೂ, ಹಾಗಾದರೆ ಕಾಲಕಾಲಕ್ಕೆ ಸರಿಯಾದ ಸಾಮಗ್ರಿ ಒದಗುವುದೆಂದೂ ನಾನು ನಿರ್ಧರಿಸಿದೆ: (೧) ನಾನು ಗ್ರಂಥಗಳನ್ನು ಪಾಠ ಹೇಳಿ ಮುಗಿಸಿದ ಮೇಲೆ ಮಾಡುವ ವಿಮರ್ಶಾತ್ಮಕವಾದ ಉಪನ್ಯಾಸಗಳು. (೨) ನನ್ನ ವಿದ್ಯಾರ್ಥಿಗಳು ಬರೆಯುವ ಉತ್ತಮವಾದ ಪ್ರಬಂಧಗಳು-ಆವಶ್ಯಕವಿದ್ದರೆ ಬದಲಾವಣೆ ವಿಸ್ತರಣೆಗಳೊಡನೆ. (೩) ವಿದ್ವಾಂಸರನ್ನು ಕರೆಸಿ ಸಂಘದಲ್ಲಿ ಮಾಡಿಸುವ ಆರಂಭೋಪಸಂಹಾರಾದಿ ಭಾಷಣಗಳು. ನಾನು ಇಂಟರ್‌ಮೀಡಿಯೆಟ್ ಮತ್ತು ಬಿ.ಎ. ತರಗತಿಗಳಲ್ಲಿದ್ದಾಗ ಕನ್ನಡ ಪ್ರಬಂಧ, ಕನ್ನಡ ಸಾಹಿತ್ಯ ಇಂಗ್ಲಿಷ್ ಸಾಹಿತ್ಯಗಳಲ್ಲಿ ನನಗೆ ಆಚಾರ್ಯರಾಗಿದ್ದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ನಾನು ವಿದ್ಯಾರ್ಥಿಯಾಗಿ ಬರೆಯುತ್ತಿದ್ದ ಲೇಖನಗಳನ್ನೂ ಅವುಗಳ ಭಾವಗಳನ್ನೂ ಒಪ್ಪಿ, ಹೊಗಳಿ, ಕೈತುಂಬ ಅಂಕಗಳನ್ನು ಕೊಟ್ಟು ನನ್ನನ್ನು ಪ್ರೋತ್ಸಾಹಿಸಿದ್ದದ್ದರಿಂದ ನನಗೆ ಒಂದು ಧೈರ್ಯ ಬಂದುಬಿಟ್ಟಿತ್ತು. ನಾನೂ ಏನಾದರೂ ಬರೆಯಬಲ್ಲೆನೆಂದೂ ಅದು ಅವಿವೇಕವಾಗಿರುವುದಿಲ್ಲವೆಂದೂ, ಹತ್ತು ಜನ ಒಪ್ಪುವಂತಿರಬಹುದೆಂದೂ ನಂಬಿಕೆ ಬಂದಿತ್ತು. ನನಗೆ ಜ್ಞಾಪಕವಿರುವ ಮಟ್ಟಿಗೆ, ಪ್ರಬುದ್ಧಕರ್ಣಾಟಕದಲ್ಲಿ ನಾನು ಬರೆದ ಲೇಖನದ ವಿಚಾರವಾಗಿ ಮೊಟ್ಟಮೊದಲನೆಯ ಮೆಚ್ಚುಗೆಯ ಮಾತು ಬಂದದ್ದು—ಬರೆದು ಬಂದದ್ದು—ಶ್ರೀಮಾನ್ ಶ್ರೀಕಂಠಯ್ಯನವರಿಂದಲೇ. ತರುಣ ಸಂಪಾದಕನಾಗಿದ್ದಾಗ ಸಾವಿರ ರೂಪಾಯಿ ಸಂಬಳ ಕೊಟ್ಟಿದ್ದರೂ ಇಷ್ಟು ಧೈರ್ಯ ಪ್ರೋತ್ಸಾಹಗಳು ನನಗೆ ಬರುತ್ತಿರಲಿಲ್ಲ. ಹೀಗೆ ಮೊದಲನೆಯ ಸಂಚಿಕೆಯಲ್ಲಿ ಕಂಡುಬರುವವು ನನ್ನ ಅಗ್ರಲೇಖನ, ನನ್ನ ವಿದ್ಯಾರ್ಥಿಗಳಾಗಿದ್ದ ಶ್ರೀಮಾನ್ ಎಸ್. ವಿ. ರಂಗಣ್ಣ, ಎನ್. ನೀಲಕಂಠಪ್ಪ ಮತ್ತು ಸಿ. ಕೆ. ವೆಂಕಟರಾಮಯ್ಯನವರ "ಕನ್ನಡ ಸಾಹಿತ್ಯದ ಗುಣದೋಷಗಳು" "ರವಿ ಕಾಣದುದನ್ನು ಕವಿ ಕಂಡ" ಎಂಬ ಪ್ರಬಂಧಗಳು, "ಸಂಯುಕ್ತಾಪಹರಣ" ದ ಒಂದು ಭಾಗ, ನಾನು "ಪೂರ್ಣಕಲಾ" ಕಾದಂಬರಿಯ ಮೇಲೆ ಬರೆದ ವಿಮರ್ಶೆ, ಮತ್ತು "ವಸ್ತುಕೋಶ" (ಸಂಪಾದಕೀಯ). "ಕಾದಂಬರಿ"

ಭಾಗವನ್ನು ಆರಂಭಿಸಿ, ಅದರಲ್ಲಿ 'ಸಂಯುಕ್ತಾಪಹರಣ'ವನ್ನು ಪ್ರಕಟಿಸಲು ಮೊದಲುಮಾಡುವುದರ ಉದ್ದೇಶ ಇದು—ಅದುವರೆಗೆ ಪ್ರಕಟವಾದ ಕನ್ನಡ ಕಾದಂಬರಿಗಳು "ಕರ್ಣಾಟಕ ಗ್ರಂಥಮಾಲೆ" ಯಲ್ಲಿ ಬಂದು ಆ ಪತ್ರಿಕೆ ನಿಂತುಹೋದ ಪ್ರಾಯವಾಗಿತ್ತು. ಕಥೆ ಎಲ್ಲಾ ಕಾಲದಲ್ಲೂ ಎಲ್ಲರಿಗೂ ಪ್ರಿಯವಾದದ್ದು. (ಅದು ಇದ್ದರೆ ಪುಟ ತುಂಬುವುದಕ್ಕೂ ಅನುಕೂಲ!) ಎಲ್ಲಕ್ಕೂ ಮೇಲಾಗಿ ಒಬ್ಬ ಕಾಲೇಜು ವಿದ್ಯಾರ್ಥಿ ಒಂದು ಸ್ವತಂತ್ರ ಕಾದಂಬರಿಯನ್ನು ಚೆನ್ನಾಗಿ ಬರೆದಿರುವಾಗ ಅದನ್ನು ಪ್ರಕಾಶಕ್ಕೆ ತರುವುದು ನಮ್ಮ ಕರ್ತವ್ಯ. *

ಪತ್ರಿಕೆಗಳಿಗೆ ಲೇಖನವನ್ನು ಒದಗಿಸಿಕೊಳ್ಳುವುದು ಬಹು ಕಷ್ಟ; ಆ ಕಷ್ಟವನ್ನು ಬಲ್ಲವರೇ ಬಲ್ಲರು. ಮದುವೆ ಮಾಡಿನೋಡು, ಮನೆ ಕಟ್ಟಿನೋಡು ಎಂಬ ಗಾದೆಗೆ ಪತ್ರಿಕೆ ನಡಸಿ ನೋಡು ಎಂದು ಮೂರನೆಯ ವಾಕ್ಯವೊಂದನ್ನು ಸೇರಿಸಬೇಕೆಂದು ತೋರುತ್ತದೆ; ಆದ್ದರಿಂದ ನಾನು ಇಂಥ ಒಂದು ಪತ್ರಿಕೆಯನ್ನು ಆರಂಭಿಸಬೇಕೆಂದಿದ್ದೇನೆ ಎಂದು ಶ್ರೀಮಾನ್ ಮಾಸ್ತಿವೆಂಕಟೇಶಯ್ಯಂಗಾರ್ಯರೊಡನೆ ಪ್ರಸ್ತಾಪಿಸಿದಾಗ, ಅದರ ಕಷ್ಟ ನಿಷ್ಠುರಗಳನ್ನು ಬಲ್ಲ ಅವರು, "ಸ್ವಲ್ಪ ನಿಧಾನವಾಗಿ ಯೋಚಿಸಿ ಮಾಡುವುದು ಒಳ್ಳೆಯದು" ಎಂದರು. ಆದರೆ ಅಷ್ಟು ಹೊತ್ತಿಗಾಗಲೇ ನಾನು ಹಿಮ್ಮೆಟ್ಟಲಾರದಷ್ಟು ಮುಂದುವರಿದಿದ್ದೆ. ಅವರಿಗೂ ಸೆಂಟ್ರಲ್ ಕಾಲೇಜಿನಲ್ಲಿ ಅದುವರೆಗೆ ಸಿದ್ಧವಾಗಿದ್ದ ಪಾಕದ ಪರಿಚಯವಿರಲಿಲ್ಲ. ಅಂತು ಪತ್ರಿಕೆಯೇನೋ ಹೊರಟು ಬಿಟ್ಟಿತು.

---

* "ಸಂಯುಕ್ತಾಪಹರಣ" ವು ಬಹು ದೊಡ್ಡ ಕಾದಂಬರಿಯಾಗುವಂತೆ ತೋರಿದ್ದರಿಂದ ಅದನ್ನು ೯ ನೆಯ ಪ್ರಕರಣಕ್ಕೇ ನಿಲ್ಲಿಸಿ, ಮೂರನೆಯ ಸಂಪುಟದ ೨ ನೆಯ ಸಂಚಿಕೆಯಿಂದ ಪ್ರತಿ ಸಂಚಿಕೆಯಲ್ಲಿಯೂ ಒಂದೊಂದು ಸಣ್ಣ ಕಥೆಯನ್ನು ಪ್ರಕಟಿಸುತ್ತ ಬಂದೆವು. ಇದು ಸ್ವತಂತ್ರವಾಗಿರಬೇಕೆಂದೂ, ಕೈಲಾದಮಟ್ಟಿಗೆ ಅನುವಾದವಾಗಲಿ ಭಾಷಾಂತರವಾಗಲಿ ಆಗಿರಬಾರದೆಂದೂ, ಇರುವುದರಲ್ಲಿ ಉತ್ತಮವಾದದ್ದನ್ನೇ ಆರಿಸಿಕೊಂಡು ಹಾಕಬೇಕೆಂದೂ ಸಂಘವು ನಿರ್ಧರಿಸಿತ್ತು. ಇದೇ ನೀತಿಯನ್ನೇ ಇಂದಿಗೂ ಅನುಸರಿಸುತ್ತ ಬಂದಿದೆ.

ಮೈಸೂರಿಗೆ ಅದರ ಮೊದಲನೆಯ ಸಂಚಿಕೆಯನ್ನು ತಂದು ನನ್ನ ಗುರುಗಳೂ ಆಗ ಕಾಲೇಜಿನ ಮುಖ್ಯೋಪಾಧ್ಯಾಯರೂ ಆಗಿದ್ದ ಶ್ರೀಮಾರ್ ಎಂ. ಎಸ್. ಸುಬ್ಬರಾಯರಿಗೆ ಅದರ ಒಂದು ಪ್ರತಿಯನ್ನು ಕೊಟ್ಟು ಅವರ ಆಶೀರ್ವಾದ ಬೇಡಿದೆ. ಅವರು ತಟ್ಟನೆ "ಏನು ಕೃಷ್ಣಶಾಸ್ತ್ರಿ! ಸಾಹಿತ್ಯ ಪರಿಷತ್ತಿನ ಕೈಯಲ್ಲಿ ಒಂದು ಒಳ್ಳೆಯ ಪತ್ರಿಕೆಯನ್ನು ನಡಸುವುದಕ್ಕಾಗಿಲ್ಲ, ನಿನ್ನ ಕೈಯಲ್ಲಾಗುತ್ತದೆಯೆ?" ಎಂದರು. ನನಗೆ ನಿರುತ್ಸಾಹವೇನೋ ಆಯಿತು. ಆದರೆ ಅದನ್ನು ತೋರ್ಪಡಿಸಿಕೊಳ್ಳದೆ "ಏನೋ ಸ್ವಾಮಿ ಆರಂಭ ಮಾಡಿಬಿಟ್ಟಿದ್ದೇನೆ, ನನ್ನ ಕೈಲಾದ ಮಟ್ಟಿಗೆ ಚೆನ್ನಾಗಿ ನಡಸಿಕೊಂಡು ಹೋಗಬೇಕೆಂದಿದ್ದೇನೆ." ಎಂದು ವಿನಯದಿಂದ ಉತ್ತರ ಕೊಟ್ಟೆ. ಇದಕ್ಕೆಲ್ಲಾ ಹಿಂದೆ ಇದ್ದದ್ದು ಒಂದು ಒರಟು ಧೈರ್ಯ—ನನ್ನ ವಿದ್ಯಾರ್ಥಿಗಳು ನನಗೆ ನೆರವಾಗುವರು, ಮೊದಲಿಂದ ಕೊನೆಯವರೆಗೆ ನಲವತ್ತು ಪುಟದಷ್ಟನ್ನು ಬರೆದು ಮುದ್ರಿಸಿ, ಚಂದಾದಾರರನ್ನು ಸಂಪಾದಿಸಿ ಅದರ ಖರ್ಚನ್ನು ಎಬ್ಬಿಸುವುದು ಸಾಧ್ಯ ಎಂಬ ಧೈರ್ಯ; ನಿರ್ವಂಚನೆಯಿಂದ ಮಾಡಿದ ಒಳ್ಳೆಯ ಕೆಲಸಕ್ಕೆ ಬೆಂಬಲ ದೊರೆತೇ ದೊರಕುವುದೆಂಬ ಧೈರ್ಯ. ಅದನ್ನು ಮೊದಲನೆಯ ಲೇಖನದ ಕೊನೆಯಲ್ಲಿ ಕಂಡುಬರುವ ಈ ವಾಕ್ಯಗಳಲ್ಲಿ ನೋಡಬಹುದು :—

"ನಮ್ಮಲ್ಲಿ ಬೆಳ್ಳಿಯಿಲ್ಲ, ಬಂಗಾರವಿಲ್ಲ; ಆದರೆ ಯಾವುದು ಇದೆಯೋ ಅದನ್ನು ನಿರ್ವಂಚನೆಯಾಗಿ ಕೊಡುತ್ತೇವೆ. ನಾವು ಮಾಡತಕ್ಕ ಕೆಲಸವನ್ನು ನಾವು ದೃಢದಿಂದಲೂ ನಿರ್ವಂಚನೆಯಿಂದಲೂ ಮಾಡಿದರೆ ಸರಸ್ವತಿಯೂ ಲಕ್ಷ್ಮಿಯೂ ತಾವಾಗಿ ಸಹಾಯಕ್ಕೆ ಬಂದು ನಿಲ್ಲುವರೆಂದು ನಮಗೆ ಧೈರ್ಯವಿದೆ."

ಇಂದಿಗೂ "ಪ್ರಬುದ್ಧ ಕರ್ಣಾಟಕ"ಕ್ಕೆ ಬೆಳ್ಳಿ ಇಲ್ಲ ಬಂಗಾರವಿಲ್ಲ. ಅದರ ಲೇಖಕರಿಗೆ ಅದು ಇಷ್ಟು ದಿನವಾದರೂ ಒಂದು ಬಿಡಿಗಾಸನ್ನೂ ಸಂಭಾವನೆಯಾಗಿ ಕೊಟ್ಟಿಲ್ಲ. ಸಂಭಾವನೆಯನ್ನು ಕೊಟ್ಟು ನೋಡೋಣವೆಂಬ ಸಲಹೆ ಒಂದೆರಡು ಸಲ ಬಂದಿತ್ತು; ಇದರಿಂದ ಪರಿಸ್ಥಿತಿ ಉತ್ತಮವಾಗದೆ ಬೇಡವಾದ ಲೇಖನಗಳು ಬಂದು ತುಂಬಿಕೊಂಡು ಅನಾವಶ್ಯಕವಾದ ವೈಮನಸ್ಯಗಳು ಉಂಟಾಗುವುದೇ ಸಂಭವವಾಗಿದ್ದದ್ದರಿಂದ ಆ ಯೋಚನೆಯನ್ನು ಬಿಟ್ಟಿದ್ದಾಯಿತು. ನಾವು ಕೊಟ್ಟರೆ

ತಾನೇ ಅವರಿಗೆ ಎಷ್ಟು ಕೊಟ್ಟೇವು? ಅಭಿಮಾನದಿಂದ ಬರೆಯುವವರು ದುಡ್ಡಿಗೆ ಬರೆದಾರೆ? ಅದರಿಂದ ಅವರ ಹೊಟ್ಟೆ ತುಂಬೀತೆ? ನಮ್ಮ ದೇಶದಲ್ಲಿ ಆ ಕಾಲ ಎಂದಿಗೆ ಬಂದೀತೋ! ಪ್ರಬುದ್ಧ ಕರ್ಣಾಟಕಕ್ಕೆ ಲೇಖನಗಳನ್ನು ಬರೆದುಕೊಟ್ಟ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ ನವರು, ಮಾಸ್ತಿ ವೆಂಕಟೇಶಯ್ಯಂಗಾರ್ಯರು, ಡಿ. ವಿ. ಗುಂಡಪ್ಪನ ವರು ಇಂಥವರು ಅಭಿಮಾನದಿಂದ ಬರೆದಿರುವ ಲೇಖನಗಳನ್ನೂ ಕೊಟ್ಟಿ ರುವ ಗ್ರಂಥಗಳನ್ನೂ ಎಷ್ಟು ದುಡ್ಡು ಕೊಟ್ಟರೆ ತಾನೇ ಬರೆದು ಕೊಡು ತ್ತಿದ್ದರು? ದುಡ್ಡಿಗೆ ದೊರಕುವುದು "ಬಜಾರಿ ಮಾಲು!". ಈ ಅಭಿಮಾನಕ್ಕೆ ಸರಿದೂಗುತ್ತಿದ್ದ ಮತ್ತೊಂದು ಶಕ್ತಿ ಎಂದರೆ ಶ್ರೀಮಾನ್ ವೆಂಕಣ್ಣಯ್ಯನವರ ಸ್ನೇಹ ಮತ್ತು ಕಾರ್ಯಸಾಧನಶಕ್ತಿ. ಅವರು ಒಂದೊಂದು ಲೇಖನಕ್ಕೆ, ಆವಶ್ಯಕತೆ ಬಿದ್ದರೆ, ತಿಂಗಳುಗಟ್ಟಲೆ ಒಬ್ಬೊ ಬ್ಬರನ್ನು ವ್ಯವಸಾಯಮಾಡಿ, ಅವರಲ್ಲಿ ಕಾಫಿ ಕುಡಿದು, ತಿಂಡಿ ತಿಂದು, ಊಟ ಮಾಡಿ, ನಕ್ಷತ್ರಿಕನಂತೆ ಬೆನ್ನುಹತ್ತಿ ಆದರೆ ಅವನಂತೆ ಕಾಡಿಸದೆ, ಭಗೀರಥನಂತೆ ಹಟತೊಟ್ಟು ಮೆಚ್ಚಿಸಿ ಗಂಗೆಯನ್ನು ಸಾಧಿಸುತ್ತಿದ್ದರು. ಈ ಸಂದರ್ಭದಲ್ಲಿ ವಿನೋದಕರವಾದ ಒಂದು ಸಣ್ಣ ಅಂಶ ಜ್ಞಾಪಕಕ್ಕೆ ಬರುತ್ತದೆ. ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರು ತಮ್ಮ "ರಂಗಪ್ಪನ ಮದುವೆ" ಯನ್ನು "ಮಧುರವಾಣಿ" ಪತ್ರಿಕೆಯಲ್ಲಿ ಅಚ್ಚು ಹಾಕಿಸಿದ್ದರು. ಅದರ ಸಂಪಾದಕರಾದ ಶ್ರೀಮಾನ್ ಹನುಮಾನದಾಸರು ನನಗೂ ತುಂಬ ಬೇಕಾದವರು. ಆದ್ದರಿಂದ ಅವರ ಮಧುರವಾಣಿ ನನಗೆ ಬರುತ್ತಿತ್ತು; ನಾನು ಮೈಸೂರಿಗೆ ವರ್ಗವಾಗಿ ಬಂದ ಕೂಡಲೆ "ರಂಗಪ್ಪನ ಮದುವೆ" ಯನ್ನು ಓದಿ, ಅದರಲ್ಲಿದ್ದ ಅಪೂರ್ವವಾದ ನವೀನತೆಯನ್ನು ನೋಡಿ, ಕುತೂಹಲವನ್ನು ತಡೆಯಲಾರದೆ ಅದರ ಲೇಖಕರು ಯಾರೆಂದು ಹೋಗಿ ಕೇಳಿದೆ. ಅವರು "ಇದು ಗುಟ್ಟು; ಯಾರಿಗೂ ಹೇಳುವುದಿಲ್ಲವೆಂದು ಮಾತುಕೊಟ್ಟಿದ್ದೇನೆ; ಆದರೆ ನಿಮಗೆ ಹೇಳಿಬಿಡುತ್ತೇನೆ; ಅದರಲ್ಲಿ ಬಾಧಕವಿಲ್ಲ; ನೀವು ಯಾರಿಗೂ ಹೇಳ ಬೇಡಿ!" ಎಂದು ಗುಟ್ಟನ್ನು ಬಿಟ್ಟುಕೊಟ್ಟರು. ನಾನು ಯಾವ ಗುಟ್ಟನ್ನೂ ವೆಂಕಣ್ಣಯ್ಯನವರಿಂದ ಮುಚ್ಚಿಟ್ಟುಕೊಳ್ಳುತ್ತಿರಲಿಲ್ಲ; ಅಲ್ಲದೆ

ಪತ್ರಿಕೆಯ ಯೋಗಕ್ಷೇಮ ಇಬ್ಬರದೂ ಆಗಿತ್ತು; ಆದ್ದರಿಂದ ಅವರಿಗೆ ಈ ವಿಷಯ ತಿಳಿಸಿ, ಹೇಗಾದರೂ ಮಾಡಿ ವೆಂಕಟೇಶಯ್ಯಂಗಾರ್ಯರಿಂದ ಒಂದು ಕಥೆ ಸಂಪಾದಿಸಬೇಕೆಂದು ಹೇಳಿದೆ. ವೆಂಕಣ್ಣಯ್ಯನವರಿಗೂ ವೆಂಕಟೇಶಯ್ಯಂಗಾರ್ಯರಿಗೂ ಆಗತಾನೇ ಪರಿಚಯವಾಗಿತ್ತೋ ಇನ್ನೂ ಇಲ್ಲವೋ! ನನಗೆ ಹಳೆಯ ಪರಿಚಯವಾಗಿದ್ದರೂ ಗುಟ್ಟು ರಟ್ಟುಮಾಡಿದ ಅಪರಾಧಕ್ಕೆ ಹನುಮಾನದಾಸರನ್ನು ಗುರಿಮಾಡುತ್ತಿದ್ದದ್ದರಿಂದ ನಾನು ಪ್ರವೇಶಿಸದೆ ವೆಂಕಣ್ಣಯ್ಯನವರನ್ನು ಮುಂದೆ ಬಿಟ್ಟೆ; ಅವರು, ಆಗ ಪ್ರಾಯಶಃ ಚಿಕ್ಕಮಗಳೂರಿನಲ್ಲಿ ಸಬ್‌ಡಿವಿಷನ್ ಆಫೀಸರಾಗಿದ್ದ ವೆಂಕಟೇಶಯ್ಯಂಗಾರ್ಯರಿಗೆ ಒಂದು ಕಥೆ ಕೊಡಬೇಕೆಂದು ಬರೆದರು; ಅದು ತಮಗೆ ಆಗದ ಕೆಲಸವೆಂದು ಉತ್ತರ ಬಂದುಬಿಟ್ಟಿತು. ಆದರೂ ಅದು ವೆಂಕಟೇಶಯ್ಯಂಗಾರ್ಯರಿಗೆ ತಪ್ಪಲಿಲ್ಲ; ವೆಂಕಣ್ಣಯ್ಯನವರು ಅವರನ್ನು ಬಿಡಲಿಲ್ಲ. ಅವರಿಂದ ಮುಂದೆ "ಬಾದಷಹನ ದಂಡನೆ" ಬಂತು (III—೪), ಸಾಹಿತ್ಯೋಪನ್ಯಾಸಗಳು ನಡೆದುವು. ಅವರು ಸಂಘದಲ್ಲಿ ಸೇರಿಹೋದರು. ಪ್ರಾಯಶಃ "ತಾವರೆ" ಒಂದು ಹೊರತು ಶ್ರೀವರ್ಮಾ ವೆಂಕಟೇಶಯ್ಯಂಗಾರ್ಯರು ಪ್ರಬುದ್ಧ ಕರ್ಣಾಟಕಕ್ಕೆ ಬರೆದಿರುವ ಲೇಖನಗಳೆಲ್ಲಾ ವೆಂಕಣ್ಣಯ್ಯನವರ ಪ್ರಯತ್ನದಿಂದಲೇ ಸಂಪಾದಿಸಿ ಬಂದುವು! ಇಂಥ ಜನ, ಇಂಥ ಲೇಖನ, ದುಡ್ಡಿಗೆ ದೊರೆತೀತೇ?

"ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಳ್ಪಂ।
ಬೆಲೆಗೊಟ್ಟು ತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ ॥"

—ನೇಮಿಚಂದ್ರ

(ಇಂಗ್ಲಿಷ್ ಗೀತೆಗಳು,) ಗದಾಯುದ್ಧ ನಾಟಕ, ಅಶ್ವತ್ಥಾಮನ್, ಪಾರಸಿಕರು, (ವಸಂತ ಕುಸುಮಾಂಜಲಿ, ನಿವೇದನ,) ಉಮರನ ಒಸಗೆ, (ತಾವರೆ,) ಸುಬ್ಬಣ್ಣ, ಮೈಸೂರು ದೇಶದ ವಾಸ್ತುಶಿಲ್ಪ, ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ, ನಾಗರಿಕ ಮುಂತಾದ ಗ್ರಂಥ

ಗಳೆಲ್ಲಾ ಹೀಗೆಯೇ ಬಂದು ಪ್ರಬುದ್ಧ ಕರ್ಣಾಟಕವನ್ನು ಪುಷ್ಟಿಗೊಳಿಸಿ, ಕರ್ಣಾಟಕ ಸಂಘದ ಭಂಡಾರವನ್ನು ಬೆಳಿಸಿದುವು. ಬರೆವಣಿಗೆ ಬರೆಯ ಬಲ್ಲ ಕೀರ್ತಿಕಾಮಿಗಳಾದ ಕೆಲವರು, ಕನ್ನಡದಲ್ಲಿ ಏಕೆ ಬರೆಯಬೇಕು, ಬರೆದರೆ ಯಾರು ನೋಡುತ್ತಾರೆ, ನಮಗೆ ಏನು ಬರುತ್ತದೆ ಎಂದು ಇಂದಿಗೂ ಮೂಗು ಮುರಿಯುತ್ತಾರೆ. ಇದು "ನಮ್ಮ ಬಡ ತಾಯಿ ತಂದೆಗಳ, ಮಕ್ಕಳುಮರಿಗಳ ಹೊಟ್ಟೆ ತುಂಬಿಸುವುದರಲ್ಲೇ ನಮ್ಮ ಐಶ್ವರ್ಯವನ್ನು ಕಳೆದರೆ ನಮಗೆ ಬಿರುದುಬಾವಲಿಗಳು ಬರುವುದು ಹೇಗೆ?'' ಎಂದು ಕೇಳಿದಂತಾಗುತ್ತದೆ. ಅಂಥವರ ಮಾತು ಬೇಡ. * ಬಂಗಾಳಿ ಮರಾಠಿ ಮುಂತಾದ ಭಾಷೆಗಳು ಇಂಥವರಿಂದಲ್ಲ ಮುಂದೆ ಬಂದಿರುವುದು.

ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವು, ಕೇವಲ ಆ ಕಾಲೇಜಿನ ವಿದ್ಯಾರ್ಥಿಗಳದೇ ಎಂಬ ಭಾವನೆ ಮೊದಲಿನಿಂದಲೂ ಬರಲಿಲ್ಲ. ಇದಕ್ಕೆ ಬಹಳ ಮಟ್ಟಿಗೆ ವೆಂಕಣ್ಣಯ್ಯನವರ ಸ್ನೇಹಪೂರ್ಣವಾದ, ಉದಾರವಾದ ನೀತಿಯೇ ಕಾರಣ; ಮುಂದಕ್ಕೂ ಈ ಸಂಪ್ರದಾಯವೇ ನಡೆದುಕೊಂಡು ಬಂತು; ಸಂಘದ ಉಪನ್ಯಾಸ ಉತ್ಸವಗಳೆಂದರೆ ಬೆಂಗಳೂರಿನ ಮಹಾಜನ ಪ್ರಮುಖರನೇಕರಿಗೆ ಆಹ್ವಾನ ಹೋಗುತ್ತಿತ್ತು; ಅವರೂ ಅವುಗಳಲ್ಲಿ ಭಾಗಿಗಳಾಗುತ್ತಿದ್ದರು. ಹೀಗೆ ಪ್ರಬುದ್ಧ ಕರ್ಣಾಟಕವೂ ಬಹುಬೇಗ ಮೈಸೂರಿನ ಮಹಾಜನಗಳದ್ದಾಯಿತು; ಅನಂತರ

---

* ಈ ಸಂದರ್ಭದಲ್ಲಿ ಪ್ರಸಿದ್ಧ ಬಂಗಾಳಿ ಲೇಖಕರಾದ ಬಂಕಿಂಚಂದ್ರರು ಬರೆದ ಎರಡು ವಾಕ್ಯಗಳು ಜ್ಞಾಪಕಕ್ಕೆ ಬರುತ್ತವೆ:—

೧. "ಯಶಸ್ಸಿಗೋಸ್ಕರ ಬರೆಯಬೇಡಿ. ಹಾಗಾದರೆ ಯಶಸ್ಸೂ ಬರುವುದಿಲ್ಲ, ಲೇಖನವೂ ಚೆನ್ನಾಗುವುದಿಲ್ಲ. ಲೇಖನ ಚೆನ್ನಾಗಿದ್ದರೆ ಯಶಸ್ಸು ತಾನಾಗಿ ಬರುತ್ತದೆ."—ಬಂಗಾಳದ ಹೊಸ ಲೇಖಕರಲ್ಲಿ ಬಿನ್ನಹ (೧೮೮೫).

೨. "ಎಷ್ಟು ದಿನದ ವರೆಗೆ ವಿದ್ಯಾವಂತರೂ ಜ್ಞಾನವಂತರೂ ಆದ ಬಂಗಾಳಿಗಳು ತಾವು ಹೇಳಬೇಕಾದದ್ದನ್ನು ಬಂಗಾಳಿ ಭಾಷೆಯಲ್ಲಿ ಹೇಳುವುದಿಲ್ಲವೋ ಅಷ್ಟು ದಿನದ ವರೆಗೆ ಬಂಗಾಳಿಗಳ ಉನ್ನತಿಯು ಎಷ್ಟು ಮಾತ್ರವೂ ಸಂಭವವಲ್ಲ." —ವಂಗದರ್ಶನ ಪತ್ರಿಕೆಯ 'ಸೂಚನೆ' (೧೮೭೨).

ಕರ್ಣಾಟಕದ ಮಹಾಜನಗಳದ್ದಾಯಿತು. ಈಗ ಅದಕ್ಕೆ ಎಲ್ಲಾ ಕಡೆಯಿಂದಲೂ ಲೇಖನಗಳು ಬರುತ್ತಿವೆ; ವಿದ್ಯಾರ್ಥಿಗಳ ಲೇಖನಗಳಿಗಿಂತ ವಿದ್ವಾಂಸರ ಲೇಖನಗಳೇ ಹೆಚ್ಚಾಗಿ ಪ್ರಕಟವಾಗುತ್ತಿವೆ.

ಮೊದಲಿನ ಎರಡು ವರ್ಷ "ನಾನು ಮತ್ತು ನನ್ನ ಕಣ್ಣಿನ ಬೊಂಬೆ" ಎಂಬಂತೆ ಪತ್ರಿಕೆಯಲ್ಲಿ ನನ್ನ ಮತ್ತು ನನ್ನ ಶಿಷ್ಯರ ಲೇಖನಗಳೇ ಬಂದುವು; ಬರಿಯ ಗದ್ಯ ಲೇಖನಗಳೇ ಬಂದುವು. ಆಮೇಲೆ ಗದ್ಯ ಬಂತು, ನಾಟಕ ಬಂತು, ಸಣ್ಣ ಕಥೆ ಬಂತು; ಪ್ರಚಲಿತ ರಾಜಕೀಯ ವಿಚಾರ ಒಂದು ಹೊರತು ಮಿಕ್ಕ ವಿಷಯಗಳ ಮೇಲಣ ಲೇಖನಗಳೆಲ್ಲವೂ ಬಂದುವು.* ಅವುಗಳ ವಿವರವನ್ನು ಈ ಸಂಚಿಕೆಯ ಕೊನೆಯಲ್ಲಿರುವ ಅಕಾರಾದಿಗಳಲ್ಲಿ ನೋಡಬಹುದು.

ಪ್ರಬುದ್ಧಕರ್ಣಾಟಕದ ಲೇಖನಗಳು ಪುಡಿಪುಡಿಯಾಗಿರಬಾರದೆಂದೂ, ಸಾರವತ್ತಾಗಿ ನಾಲ್ಕುಕಾಲ ನಿಲ್ಲುವಂತಿರಬೇಕೆಂದೂ, ಸಾಧ್ಯವಾದರೆ ಕೆಲವು ಸಂಚಿಕೆಗಳಲ್ಲಿ ಬಂದ ಲೇಖನಗಳನ್ನು ಸೇರಿಸಿ ಅಚ್ಚುಕಟ್ಟಾದ ಒಂದು ಪುಸ್ತಕ ಮಾಡುವಂತಿರಬೇಕೆಂದೂ ನಿರ್ಧರಿಸಿದ್ದೆವು. ಕರ್ಣಾಟಕ ಸಂಘವು ಪ್ರಕಟಿಸಿದ ಅನೇಕ ಗ್ರಂಥಗಳು ಇಂಥವು. ಇವಲ್ಲದೆ, ಆಗಾಗ್ಗೆ ಸಂಘವು ಉಳಿತಾಯದ ಹಣದಿಂದ ಸ್ವತಂತ್ರ ಗ್ರಂಥಗಳನ್ನು ಪ್ರಕಟಿಸಿ ಅವನ್ನು ಪ್ರಬುದ್ಧಕರ್ಣಾಟಕದ ಚಂದಾದಾರರಿಗೆ ಉಚಿತವಾಗಿ ಹಂಚಿತು. ಇವುಗಳನ್ನು ಈ ಲೇಖನದ ಕೊನೆಯಲ್ಲಿ ಅನುಬಂಧವಾಗಿ ತೋರಿಸಿದೆ.†

ಪತ್ರಿಕೆ ಆರಂಭವಾದಾಗ ಅದರಲ್ಲಿ ಚಿತ್ರಗಳನ್ನು ಹಾಕುವ

---

* "ಸರ್ ಎಂ. ವಿಶ್ವೇಶ್ವರಯ್ಯನವರ ಅರವತ್ತನೆಯ ವರ್ಷ ವರ್ಧಂತ್ಯುತ್ಸವದಲ್ಲಿ ಓದಿದ ಪದ್ಯಗಳು" .... .... ಮೊದಲನೆಯ ಕವಿತೆ (III. ೪)
"ಪ್ರತಿಮಾ ನಾಟಕವು" .... ಮೊದಲನೆಯ ನಾಟಕ (IV)
"ಶಾರದೆ" .... .... ಮೊದಲನೆಯ ಸಣ್ಣ ಕಥೆ (III, ೨)
"ಸರ್ ಎಂ. ವಿಶ್ವೇಶ್ವರಯ್ಯನವರು" ಮೊದಲನೆಯ ಚಿತ್ರ (III, ೪)

† ಆ ಅನುಬಂಧವನ್ನು ಇಲ್ಲಿ ಬಿಟ್ಟಿದೆ.

ಯೋಚನೆಯಿರಲಿಲ್ಲ. ಆ ಭಾಗ ಹುಟ್ಟಿದ್ದು ಮೈಸೂರು ಶಾಸನದ ಇಲಾಖೆಯಲ್ಲಿ ಶಿಲ್ಪವಿದ್ಯಾಸಹಾಯಕರಾಗಿ ಈಗ ವಿಶ್ರಾಂತರಾಗಿರುವ ನನ್ನ ಮಿತ್ರರು ಶ್ರೀಮಾನ್ ಬಿ. ವೆಂಕೋಬರಾವ್, ಬಿ.ಎ. ಅವರ "ವಾಸ್ತುಶಿಲ್ಪ"ದಿಂದ. ಅನಂತರ ಅದು ಶಾಖೋಪಶಾಖೆಗಳಾಗಿ ಬೆಳೆಯಿತು.

ಈ ವಿಭಾಗವನ್ನು ಮುಗಿಸುವುದಕ್ಕಿಂತ ಮುಂಚೆ, ಸಂಪಾದಕನಾಗಿ ನಾನು ಲೇಖನಗಳನ್ನು ಆರಿಸಿಕೊಳ್ಳುವುದರಲ್ಲಿಯೂ ಅವುಗಳಿಗೆ ರೂಪುಗೊಡುವುದರಲ್ಲಿಯೂ ನಿಷ್ಠುರವಾಗಿ ವ್ಯವಹರಿಸಿದ ಬಗ್ಗೆ ಒಂದು ಮಾತು ಬರೆಯುವುದು ಆವಶ್ಯಕ. ಈ ನಿಷ್ಠುರತೆಗಾಗಿ ನಾನು ಎಷ್ಟೋ ದುರ್ಜನನಾಗಿದ್ದೇನೆ; ದೂರಿಗೆ ಒಳಗಾಗಿದ್ದೇನೆ; ಆದರೆ ಎಂದೂ, ಇಂದಿಗೂ ಕೂಡ, ಪಶ್ಚಾತ್ತಾಪಪಟ್ಟಿಲ್ಲ. ಹುರುಳಿಲ್ಲದ ಲೇಖನಗಳನ್ನು ತಿರಸ್ಕರಿಸಿ ಹಿಂದಕ್ಕೆ ಕಳುಹಿಸುವ ಅಪ್ರಿಯವಾದ ಕೆಲಸವನ್ನು ನಾನು ನಿರ್ದಾಕ್ಷಿಣ್ಯವಾಗಿ ಮಾಡಿದ್ದೇನೆ. "ಕಾವ್ಯಗಳನ್ನು ನಮ್ಮದು ತಮ್ಮದೆಂಬ ಒಂದು ಸುಳ್ಳು ಅಭಿಮಾನವನ್ನಾಗಲಿ, 'ಕನ್ನಡ, ಕಾಡುಭಾಷೆ' ಎಂಬ ಒಂದು ಕೀಳುಬುದ್ಧಿಯನ್ನಾಗಲಿ ಇಟ್ಟುಕೊಳ್ಳದೆ, ನಿರ್ದಾಕ್ಷಿಣ್ಯವಾಗಿಯೂ ನಿಷ್ಪಕ್ಷಪಾತವಾಗಿಯೂ ವಿಚಾರಮಾಡಿ, ದೋಷಗಳನ್ನು ಕಿತ್ತು ಒಗೆದು ಗುಣಗಳನ್ನು ಗ್ರಹಿಸಿ, ಒಂದು ಕಡೆ ವಿಮರ್ಶೆಯನ್ನೂ ಮತ್ತೊಂದು ಕಡೆ ರಚನೆಯನ್ನೂ ಮಾಡಬೇಕೆಂಬುದು ನಮ್ಮ ಉದ್ದೇಶ" (ಸಂಚಿಕೆ ೭, ಪುಟ ೪.) ಹಳೆಯದಕ್ಕೂ ಅದೇ ಸೂತ್ರ, ಹೊಸದಕ್ಕೂ ಅದೇ ಸೂತ್ರ. ಸಾಹಿತ್ಯದ ಮಟ್ಟ ಏರಬೇಕು, ಅಭಿರುಚಿಯ ಗುಣ ಉತ್ತಮಗೊಳ್ಳಬೇಕು, ಪತ್ರಿಕೆಗೆ ಗೌರವ ಬರಬೇಕು—ಇದು ನನ್ನ ಉದ್ದೇಶ. ಆದ್ದರಿಂದ, ಹುಡುಗರ ಮಾತು ಹಾಗಿರಲಿ, ದೊಡ್ಡವರಿಂದ ಬಂದ ಲೇಖನಗಳನ್ನೂ ಎಷ್ಟೋಸಾರಿ ಹಿಂತಿರುಗಿಸಿ, ತಿದ್ದಿ, ತಿದ್ದಹೋಗಿ, ಬೈಗಳನ್ನು ತಿಂದಿದ್ದೇನೆ. ಇದರ ವಿವೇಕವನ್ನು ಒಪ್ಪಿದ ಒಬ್ಬ ಹಿರಿಯ ಮಿತ್ರರು (ನಾನು ಅವರಿಗೆ ಮಾಡಿದ ಈ ವಿಧವಾದ ತೇಜೋವಧೆಗಾಗಿ) ಇಂದಿಗೂ ನನ್ನನ್ನು ಪ್ರಶಂಸಿಸುತ್ತಿದ್ದಾರೆ. ಒಂದು ಸಾರಿ, ಮೊದಲನೆಯ ಪುಟದಲ್ಲಿ ಹಾಕುತ್ತಿದ್ದ "ಪ್ರಾರ್ಥನೆ"ಯ ಪದ್ಯ ಬೇಕಾಯಿತು. ಅವರನ್ನು ಕೇಳಿಕೊಂಡೆ. ನನಗೆ ಇಲ್ಲವೆನ್ನಲಾರದೆ, ಇದ್ದಷ್ಟು ಕಾವಿನಲ್ಲೇ—

ಪ್ರಾಯಶಃ ಇಲ್ಲದ ಸ್ಫೂರ್ತಿಯನ್ನು ಒದಗಿಸಿಕೊಂಡು—ಒಂದು ಪದ್ಯ ಬರೆದುಕೊಟ್ಟರು. ಅದು ಎಂದಿನಂತೆ ಸರಳವಾಗಿ ಬರಲಿಲ್ಲ. ಅದನ್ನು ಅವರೇ ಅರಿತು ಕೆಲವು ಮಾತುಗಳಿಗೆ ಅಡಿ ಟಿಪ್ಪಣಿಯಲ್ಲಿ ಅರ್ಥ ಬರೆದಿದ್ದರು. ನನಗೆ ಅದು ಒಪ್ಪಿಗೆಯಾಗದೆ, ಪದ್ಯವನ್ನು ತೆಗೆದುಕೊಂಡು ಹೋಗಿ ಹಿಂತಿರುಗಿ ಕೊಟ್ಟು, "ಏನು ಸ್ವಾಮಿ, ನಿಮ್ಮಂಥವರೂ ಟೀಕೆ ಟಿಪ್ಪಣಿಗಳಿಂದ ಅರ್ಥಮಾಡಿಕೊಳ್ಳಬೇಕಾದ ಪದ್ಯವನ್ನು ಬರೆದುಬಿಟ್ಟರೆ ಗತಿ!" ಎಂದೆ. ಆ ಕ್ಷಣದಲ್ಲಿ ಅವರಿಗೆ ಸ್ವಲ್ಪ—ಪ್ರಾಯಶಃ ತುಂಬ—ಅಸಮಾಧಾನವಾಯಿತು. ಆದರೆ ಒಂದೆರಡು ದಿನ ಬಿಟ್ಟುಕೊಂಡು ಬಂದು, ಅವರು, ನಾನು ಮಾಡಿದ್ದೇ ಸರಿ ಎಂದರು. ಈಚೆಗೂ ಎಷ್ಟೋ ಸಲ ಅದೇ ಮಾತನ್ನೇ ಹೇಳಿದ್ದಾರೆ. ಹೆತ್ತವರಿಗೆ ಅವರ ಮಕ್ಕಳು ಹೇಗಿದ್ದರೂ ಮುದ್ದು. ಆದರೆ ಸೃಷ್ಟಿಯಲ್ಲಿ ಕಳಪೆಗಳೂ ಜಳ್ಳುಗಳೂ ತೂರಿಹೋಗುತ್ತವೆ. ರಂಗಕ್ಕೆ ಬರಬೇಕಾದರೆ—ಯುದ್ಧರಂಗವಾಗಲಿ, ನಾಟಕ ರಂಗವಾಗಲಿ—ನಿಷ್ಠುರವಾದ ಆಯ್ಕೆ ನಡೆಯುತ್ತದೆ. ಆದ್ದರಿಂದ ನಾನು ಲೇಖನಗಳನ್ನು ಆಯ್ದು ಆಯ್ದು ಹಾಕುತ್ತಿದ್ದೆ. 'ಪ್ರಥಮ ಪ್ರಯತ್ನ' 'ವಿದ್ಯಾರ್ಥಿಯ ಅಭ್ಯಾಸ' ಎಂಬ ಮಾತುಗಳಿಗೆ ಕಿವಿಗೊಡುತ್ತಿರಲಿಲ್ಲ. ಇಂಥವರಲ್ಲಿ ಯಾರಲ್ಲಾದರೂ ಯೋಗ್ಯತೆ ಇದೆ ಎಂದು ತೋರಿದರೆ, ಅವರನ್ನು ಒಂದಕ್ಕೆ ಬದಲಾಗಿ ನಾಲ್ಕು ಲೇಖನಗಳನ್ನು—ಇರುವವುಗಳಲ್ಲಿ ಉತ್ತಮವಾದವುಗಳನ್ನು—ಕಳುಹಿಸಿಕೊಡಿ ಎಂದು ಪ್ರಾರ್ಥಿಸುತ್ತಿದ್ದೆ. ಬಂದವುಗಳಲ್ಲಿ ಉತ್ತಮವಾದದ್ದನ್ನು ಆರಿಸಿಕೊಂಡು ಪ್ರಕಟಿಸುತ್ತಿದ್ದೆ. ನನ್ನ ವಿಮರ್ಶಬುದ್ಧಿ ಅಷ್ಟು ಉತ್ತಮವಲ್ಲದ್ದಿರಬಹುದು, ಅಭಿರುಚಿ ಉದಾರವಲ್ಲದ್ದಿರಬಹುದು. ಆದರೆ ಜವಾಬುದಾರಿ ನನ್ನದಾಗಿತ್ತು; ಮತ್ತು ಅನೇಕವೇಳೆ ಇತರರ ವಿಮರ್ಶೆ ವಿವೇಚನೆಗಳು ನನ್ನವಕ್ಕಿಂತ ಉತ್ತಮವಾಗಿದ್ದುವೆನ್ನಿಸುತ್ತಿರಲಿಲ್ಲ. ಒಟ್ಟಿನ ಮೇಲೆ ಲೇಖಕರು ಯಾರೂ, ನನ್ನ ಉಳಿಯ ಏಟುಗಳಿಂದ, ಕತ್ತರಿಯ ಪ್ರಯೋಗಗಳಿಂದ, ತಮ್ಮ ಲೇಖನಗಳು ವಿರೂಪಗೊಂಡುವು ಎಂದು ಇಂದಿಗೂ ಆಕ್ಷೇಪಿಸಿಲ್ಲ. ಯಾವ ಯಾವ ಲೇಖನಗಳು ಎಷ್ಟೆಷ್ಟು ಪೆಟ್ಟು ತಿಂದುವು, ಎಷ್ಟೆಷ್ಟು ನೊಂದುವು, ಎಂಬುದು ನನಗೆ ಮಾತ್ರ

ಗೊತ್ತು. (ಅಂಥ ಕೆಲವು ಹಸ್ತಪ್ರತಿಗಳನ್ನು ಕರ್ಣಾಟಕ ಸಂಘದಲ್ಲಿ ಮಾದರಿಗಾಗಿ ಇಟ್ಟಿದ್ದೆ. ಪತ್ರಿಕಾಪ್ರಪಂಚಕ್ಕೆ ಸಂಬಂಧಪಟ್ಟಂತೆ ಒಂದು ವಿಚಿತ್ರ ವಸ್ತುಸಂಗ್ರಹ ಶಾಲೆಯನ್ನು ಏರ್ಪಡಿಸುವುದಾದರೆ ಅವನ್ನು ಅಲ್ಲಿ ಇಡಬಹುದು!) ಕಾಲಕ್ರಮದಲ್ಲಿ ತರುಣ ಲೇಖಕರು ಪ್ರಬುದ್ಧ ಕರ್ಣಾಟಕದಲ್ಲಿ ತಮ್ಮ ಲೇಖನವನ್ನು ಪ್ರಕಾಶಪಡಿಸಬೇಕೆಂದು ಅಪೇಕ್ಷಿಸುವುದೂ, ಅದರ ಸಂಪಾದಕರು ಹಾಕುತ್ತಾರೋ ಇಲ್ಲವೋ ಎಂದು ಶಂಕಿಸುವುದೂ, ಹಾಕಿದರೆ ಹೆಮ್ಮೆ ಪಡುವುದೂ ಸಾಮಾನ್ಯ ವಾಯಿತು; ಮತ್ತು ಉಚ್ಚ ತರಗತಿಯ ಲೇಖನಗಳೇ ಅಭ್ಯಾಸವಾಗಿ, ಪ್ರಬುದ್ಧ ಕರ್ಣಾಟಕದ "ದೊಡ್ಡಸ್ತಿಕೆ"ಯನ್ನು ದೂರುತ್ತಿದ್ದ ಜನರೇ, ಅದು ಸ್ವಲ್ಪ ಕೀಳುಮಟ್ಟಕ್ಕೆ ಇಳಿದರೆ ಸಪ್ಪೆಯಾಯಿತೆಂದು ಆಕ್ಷೇಪಿಸು ವಂತಾದರು. ಈಗ ಇಪ್ಪತ್ತೈದು ವರ್ಷಗಳಿಂದ ಹೊಸಗನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಎಷ್ಟೋ ಉತ್ತಮವಾದ ವ್ಯವಸಾಯ ನಡೆದಿದೆ. ಪ್ರಬುದ್ಧ ಕರ್ಣಾಟಕವು, ಅದು ನಡೆಯುವಂತೆ ಸ್ವಲ್ಪವಾದರೂ ಸಾಧನವಾಗಿ, ಕಾಡು ಕಡಿದು, ಭೂಮಿಯನ್ನು ಉತ್ತು, ನೆಲ ಹದಮಾಡಿ, ಬೇಲಿಹಾಕಿ, ಅಷ್ಟೋ ಇಷ್ಟೋ ನೀರು ಬೀಜ ಗೊಬ್ಬರಗಳನ್ನು ಒದಗಿಸಿಕೊಟ್ಟಿದೆ, ಎಂದು ನಾನು ನಂಬಿದ್ದೇನೆ. ಆದರೆ ಬರಿಯ ನೆಲ ನೇಗಿಲುಗಳಿಂದ ಆಗುವುದು ಏನು? ಫಲ ತೆಗೆಯಲು "ನೇಗಿಲ ಯೋಗಿ"ಗಳು ಬೇಕು. ಅವರನ್ನು ಆರಿಸಿ ಕಳುಹಿಸಿಕೊಡುವುದು ಭಗವಂತನ ದಯೆ, ನಾಡಿನ ಪುಣ್ಯ!

## ಸಂಚಿಕೆಗಳ ಸಂಖ್ಯೆ—ಗಾತ್ರ

"ಪ್ರಬುದ್ಧ ಕರ್ಣಾಟಕ"ವು ಹೆಸರಿಗೆ ತಕ್ಕಂತೆ ಎಚ್ಚತ್ತ ರೀತಿಯಲ್ಲಿ, ಒಂದು ಹೊಸ ಬೆಳಕಿನಲ್ಲಿ, ಕೆಲಸಮಾಡಬೇಕೆಂದು ನಿರ್ಧರಿಸಿತ್ತು. ವಿದ್ಯಾರ್ಥಿಗಳ ಪತ್ರಿಕೆ, ಆದರ ದೃಷ್ಟಿ ಹೊಸದು ಎನ್ನುವುದಿರಲಿ, ಅದು ಬರುವ ಕಾಲನಿಯಮ ಕೂಡ ಹೊಸ ರೀತಿಯದಾಗಿತ್ತು. ಯುಗಾದಿಯ ಹಬ್ಬ, ವಿನಾಯಕನ ಹಬ್ಬ, ದೀಪಾವಳಿಯ ಹಬ್ಬ, ವರ್ಷದ ಈ ಮೂರು ದೊಡ್ಡ ಹಬ್ಬಗಳಲ್ಲಿ ಅದು ಬರಬೇಕೆಂದು ಮೊದಲು ನಿಶ್ಚಿತ ವಾಗಿತ್ತು. ಮೂರನೆಯ ವರ್ಷದಿಂದ ಸಂಪುಟಕ್ಕೆ ನಾಲ್ಕು ಸಂಚಿಕೆ

ಗಳಾಗಿ, ವರ್ಷವು ವಿನಾಯಕನ ಸಂಚಿಕೆಯಿಂದ ಆರಂಭವಾಗಿ, ಈಗಿನಂತೆ ದೀಪಾವಳಿ ಸಂಕ್ರಾಂತಿ ಕಾಮನ ಹಬ್ಬಗಳಲ್ಲಿ ಬಂದರೂ ಹಬ್ಬಗಳ ಹೆಸರು ತಪ್ಪಲಿಲ್ಲ. ಮಧ್ಯೆ ಒಂದೆರಡು ಸಲ ಈ ಪತ್ರಿಕೆಯನ್ನು ಮಾಸ ಪತ್ರಿಕೆಯಾಗಿ ಮಾಡಬೇಕೆಂದೂ ನಾಲ್ಕು ಸಂಚಿಕೆಗಳೇ ಬಂದರೂ ಅವು ಇಂಗ್ಲಿಷ್ ತಿಂಗಳುಗಳನ್ನು ಅನುಸರಿಸಿ ಮೂರು ತಿಂಗಳಿಗೊಂದು ಸಾರಿ ಬರಬೇಕೆಂದೂ ಮುಂತಾಗಿ ಸಲಹೆಗಳು ಬರುತ್ತಿದ್ದುವು. ಹಬ್ಬಗಳ ಹೆಸರುಳ್ಳ ಈ ನವೀನತೆ ಹೋಗಬಾರದೆಂದೂ, ಮೂರು ಮೂರು ತಿಂಗಳಿಗೊಂದು ಸಾರಿಯಂತೆಯೇ ಬರಬೇಕೆಂದರೆ ಬೇಸಗೆಯ ರಜದಲ್ಲಿ ವಿದ್ಯಾರ್ಥಿಗಳ ಸಹಕಾರ ದೊರೆಯದೆ ಹೋಗುವುದೆಂದೂ, ಹೀಗೆಯೇ ಇದ್ದರೆ ಸಂಪಾದಕನಿಗೆ ಸ್ವಲ್ಪ ಉಸಿರಾಡುವುದಕ್ಕೆ ಅವಕಾಶವಾಗುವುದೆಂದೂ, ಆದ್ದರಿಂದ ಸುಮಾರು ಎಂಟು ತಿಂಗಳಲ್ಲಿ ನಾಲ್ಕು ಸಂಚಿಕೆಗಳು ಬರುವುದೇ ಉತ್ತಮವೆಂದೂ ನಿರ್ಧರವಾಯಿತು. ಈಗಲೂ ಹಾಗೆಯೇ ಇದೆ. ಮಾಸಪತ್ರಿಕೆಯಾಗಿ ಮಾಡಲು ಇದ್ದ ಮುಖ್ಯ ಅಡಚಣೆ—ಸಾಮಗ್ರಿಗಳನ್ನು ಕಾಲಕಾಲಕ್ಕೆ ಒದಗಿಸಿಕೊಂಡು, ಪತ್ರಿಕೆಗಳನ್ನು ಸಕಾಲಕ್ಕೆ ಹೊರಡಿಸುವುದು. ಅದಕ್ಕೆ ತಕ್ಕ ಸಿಬ್ಬಂದಿ ಎಂದೂ ಇರಲಿಲ್ಲ. ಎಷ್ಟು ಸ್ವಲ್ಪ ಪುಟಗಳನ್ನು ಕೊಟ್ಟರೂ ಉಪಯುಕ್ತವಾದ ಲೇಖನಗಳೂ ವಿಭಾಗಗಳೂ ಪೂರ್ಣವಾಗಿದ್ದು ಹನ್ನೆರಡು ಸಂಚಿಕೆಗಳನ್ನು ಕೊಡಬೇಕೆಂದರೆ ಸುಮಾರು ೧,೦೦೦ ಪುಟಗಳಾಗಬೇಕು. ಅದಕ್ಕೆ ಬೇಕಾಗುವ ದುಡ್ಡನ್ನು ನಾವು ತೆರುವ ಹಾಗಿರಲಿಲ್ಲ, ಜನ ಕೊಡುವ ಹಾಗಿರಲಿಲ್ಲ ಆದ್ದರಿಂದ ಸಾಲಕ್ಕೆ ಸಿಕ್ಕದೆ ಬಹು ಎಚ್ಚರಿಕೆಯಿಂದ ಪತ್ರಿಕೆಯನ್ನು ಬೆಳಸಿಕೊಂಡು ಬಂದದ್ದಾಯಿತು; ಕ್ರಾಂತಿಗಿಂತ ವಿಕಾಸದಲ್ಲಿ ನನಗೆ ಹೆಚ್ಚು ನಂಬಿಕೆ; ಈ ಮಾತನ್ನೇ ನಾನು ವೆಂಕಣ್ಣಯ್ಯನವರಿಗೆ ಹೇಳಿ, ಹನ್ನೆರಡು ಸಂಚಿಕೆಗಳನ್ನು ಮಾಡಿದರೆ ಮಿಕ್ಕ ಕೆಲಸಗಳುಳ್ಳ ಸಂಪಾದಕನಿಗೆ ತುಂಬ ಕಷ್ಟವಾಗುವುದೆಂದು ವಿವರಿಸಿದೆ; ಆಮೇಲೆ ಅವರು ಅದನ್ನು ಒತ್ತಲಿಲ್ಲ. ಹೀಗೆ ಗಾಳಿ ಬಂದಾಗ ತೂರಿಕೊಂಡು ಸಾಮಗ್ರಿ ಒದಗಿದಾಗ ಹೆಚ್ಚು ಪುಟಗಳನ್ನು ಕೊಟ್ಟು, ಅನುಬಂಧಗಳನ್ನು ಸೇರಿಸಿ, ಗ್ರಂಥಗಳನ್ನು ಉಚಿತವಾಗಿ ಹಂಚಿ, ಪ್ರಬುದ್ಧಕರ್ಣಾ

ಟಿಕವನ್ನು ಒಂದು ಮರಕ್ಕಿಂತ ಮೆಳೆಯ ಹಾಗೆ ಬೆಳೆಸಿಕೊಂಡು ಬಂದದ್ದಾಯಿತು.

ಮುಂದೆ ೧ನೆಯ ಸಂಪುಟದಿಂದ ೨೫ನೆಯ ಸಂಪುಟದ ಪೂರ್ತಿ, ಒಂದೊಂದು ಸಂಪುಟದಲ್ಲಿಯೂ ಇರುವ ಪುಟಸಂಖ್ಯೆಗಳನ್ನು ಕೊಟ್ಟಿದೆ:-

| ಸಂ. ಪುಟ | ಸಂ. ಪುಟ | ಸಂ. ಪುಟ | ಸಂ. ಪುಟ | ಸಂ. ಪುಟ |
|---|---|---|---|---|
| ೧-೧೨೦ | ೬-೩೬೨ | ೧೧-೫೭೪ | ೧೬-೫೪೬ | ೨೧-೫೮೪ |
| ೨-೧೨೦ | ೭-೪೨೫ | ೧೨-೫೨೨ | ೧೭-೪೫೮ | ೨೨-೬೪೦ |
| ೩-೨೭೧ | ೮-೩೯೬ | ೧೩-೫೭೪ | ೧೮-೫೬೮ | ೨೩-೭೯೨ |
| ೪-೩೪೬ | ೯-೪೫೧ | ೧೪-೬೧೬ | ೧೯-೪೮೨ | ೨೪-೬೬೮ |
| ೫-೩೪೦ | ೧೦-೫೦೮ | ೧೫-೫೫೨ | ೨೦-೫೪೮ | ೨೫-೬೪೭ |

## ಚಂದಾದಾರರು

ಹೀಗೆ ಪ್ರಬುದ್ಧಕರ್ಣಾಟಕವು ಅಂದಚಂದ ಗಾತ್ರಗಳಲ್ಲಿ ಸಂತತವಾಗಿ ಬೆಳೆದು ಬಂದರೂ ಚಂದಾದಾರರ ಸಂಖ್ಯೆ ಅದಕ್ಕೆ ತಕ್ಕಷ್ಟು ಬೆಳೆದಿಲ್ಲ—ಒಂದು ಸಾವಿರದ ತನಕ ಕೂಡ ಬಂದಿಲ್ಲ. ಇದು ಕಳೆದ ಹನ್ನೆರಡು ವರ್ಷಗಳ ಸಂಖ್ಯೆ :—

| ವರ್ಷ | ಸಂಖ್ಯೆ | ವರ್ಷ | ಸಂಖ್ಯೆ |
|---|---|---|---|
| ೧೯೩೨-೩೩ | .... ೭೭೬ | ೧೯೩೮-೩೯ | .... ೬೭೩ |
| ೧೯೩೩-೩೪ | .... ೭೮೯ | ೧೯೩೯-೪೦ | .... ೬೭೧ |
| ೧೯೩೪-೩೫ | .... ೮೩೬ | ೧೯೪೦-೪೧ | .... ೬೨೭ |
| ೧೯೩೫-೩೬ | .... ೭೫೯ | ೧೯೪೧-೪೨ | .... ೬೬೮ |
| ೧೯೩೬-೩೭ | .... ೭೬೦ | ೧೯೪೨-೪೩ | .... ೭೦೬ |
| ೧೯೩೭-೩೮ | .... ೭೧೯ | ೧೯೪೩-೪೪ | .... ೭೮೯ |

## ಪ್ರಬುದ್ಧ ಕರ್ಣಾಟಕದ ಬೆಳವಣಿಗೆ

(ರೇಖಾರೂಪದಲ್ಲಿ)




[ಪುಟ ೨೨

## ಆದಾಯ—ವೆಚ್ಚ

ಪ್ರಬುದ್ಧ ಕರ್ಣಾಟಕವು ಕರ್ಣಾಟಕಸಂಘದ ಆಶ್ರಯದಲ್ಲಿ ನಡೆದಷ್ಟು ದಿವಸವೂ ಹಾಸಿಗೆ ಇದ್ದಷ್ಟು ಕಾಲುಚಾಚಿಕೊಂಡೇ ಬೆಳೆದುಬಂತು. ಆದರೆ ಅದು, ಹೀಗೆಯೇ ಮುಂದೂ, ಅದರ ಖರ್ಚನ್ನು ಅದು ಹುಟ್ಟಿಸಿಕೊಂಡೇ ಜೀವಿಸಬೇಕೆಂಬ ನೀತಿಯನ್ನು ವಿಶ್ವವಿದ್ಯಾನಿಲಯವು ಅನುಸರಿಸಿದ್ದರೆ ಪ್ರಬುದ್ಧ ಕರ್ಣಾಟಕವು ಇಂದು ಈ ಬೆಳವಣಿಗೆಯ ರೂಪದಲ್ಲಿರುತ್ತಿರಲಿಲ್ಲ. ಇವೊತ್ತಿಗೂ, ಒಬ್ಬ ಗುಮಾಸ್ತರಿಗೆ ತುಟ್ಟಿಭತ್ಯ ಸೇರಿ ೨೫ ರೂಪಾಯಿ ಸಂಬಳ, ಒಬ್ಬ ಆಳಿಗೆ ೧೧ ರೂಪಾಯಿ ಸಂಬಳ ಇಷ್ಟು ಹೊರತು ಪ್ರಬುದ್ಧ ಕರ್ಣಾಟಕದ ಕೆಲಸಕ್ಕೆ ಯಾರೂ ಒಂದು ಕಾಸನ್ನು ಸಂಬಳವಾಗಿಯಾಗಲಿ ಸಂಭಾವನೆಯಾಗಿಯಾಗಲಿ ಪಡೆಯುತ್ತಿಲ್ಲ. ಆದರೂ ಪ್ರಬುದ್ಧ ಕರ್ಣಾಟಕವು ಒಟ್ಟಿನ ಮೇಲೆ ವಿಶ್ವವಿದ್ಯಾನಿಲಯಕ್ಕೆ ಈಚಿನ ವರ್ಷಗಳಲ್ಲಿ ಒಂದು ಖರ್ಚಿನ ಬಾಬೇ ಆಗಿದೆ. ಇಂಥ ಯಾವುದೊಂದು ಪತ್ರಿಕೆಯೂ ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ತನ್ನ ಸಂಪಾದನೆಯ ಮೇಲೆಯೇ ತಾನು ನಡೆದಿಲ್ಲವೆಂಬುದು ನಿಜವಾದರೂ, ಕನ್ನಡಿಗರು ಈ ಅಂಕಿ ಅಂಶಗಳನ್ನು ನೋಡಿ ತಲೆತಗ್ಗಿಸಬೇಕೆಂದು ತೋರುತ್ತದೆ. ಇದು ಕಳೆದ ಹನ್ನೆರಡು ವರ್ಷಗಳ ಪ್ರಬುದ್ಧಕರ್ಣಾಟಕದ ಆದಾಯ ವೆಚ್ಚಗಳ ಪಟ್ಟಿ. (ಆಣೆ ಕಾಸುಗಳನ್ನು ಬಿಟ್ಟಿದೆ.)—

| ವರ್ಷ | ಆದಾಯ | ವೆಚ್ಚ | ವರ್ಷ | ಆದಾಯ | ವೆಚ್ಚ |
|---|---|---|---|---|---|
| ೧೯೩೨-೩೩ | ರೂ. ೧೯೫೨ | ೧೭೩೨ | ೧೯೩೮-೩೯ | ರೂ. ೧೭೦೮ | ೨೧೨೨ |
| ೧೯೩೩-೩೪ | ,, ೧೯೨೮ | ೧೯೫೪ | ೧೯೩೯-೪೦ | ,, ೨೧೦೭ | ೨೬೫೨ |
| ೧೯೩೪-೩೫ | ,, ೨೦೧೧ | ೧೯೧೦ | ೧೯೪೦-೪೧ | ,, ೧೭೧೧ | ೨೭೬೫ |
| ೧೯೩೫-೩೬ | ,, ೧೮೨೮ | ೧೭೨೨ | ೧೯೪೧-೪೨ | ,, ೧೭೩೨ | ೩೫೬೦ |
| ೧೯೩೬-೩೭ | ,, ೧೯೪೮ | ೧೯೬೨ | ೧೯೪೨-೪೩ | ,, ೧೯೩೭ | ೩೦೭೪ |
| ೧೯೩೭-೩೮ | ,, ೧೬೯೯ | ೧೭೫೪ | ೧೯೪೩-೪೪ | ,, ೨೫೯೭ | ೩೬೩೨* |

---

* ಎಂದರೆ, ಸರಾಸರಿ ಒಂದು ಸಂಚಿಕೆಗೆ ೯೦೮ ರೂಪಾಯಿ ಆಯಿತು. ಮೊಟ್ಟಮೊದಲನೆಯ ಸಂಚಿಕೆಗೆ ಖರ್ಚು ೯೧ ರೂಪಾಯಿ.

ಇದನ್ನು ನೋಡಿ, ಕನ್ನಡ ಬೇಡದವರು ವಿಶ್ವವಿದ್ಯಾನಿಲಯಕ್ಕೆ ಈ ಅಲ್ಪ ಖರ್ಚು ತಾನೇ ಏಕೆ ಎಂದು ಕೇಳಿರುವುದೂ, ಬೇಕಾದವರು 'ಇಂಗ್ಲೀಷ್ ಪತ್ರಿಕೆಯ ಪಾಡೇನು? ಅದರ ಸಂಪಾದನೆ ಏನು? ವೆಚ್ಚವೇನು? ಉಪಯುಕ್ತತೆ ಏನು? ಚಂದಾದಾರರ ಸಂಖ್ಯೆಯೆಷ್ಟು?' ಎಂದು ಪ್ರತಿಪ್ರಶ್ನೆ ಹಾಕಿರುವುದೂ ಸ್ವಾಭಾವಿಕ. ಆದರೆ ಕನ್ನಡಿಗರು, ಅದರಲ್ಲಿಯೂ ವಿಶ್ವವಿದ್ಯಾನಿಲಯದ ಸುಮಾರು ೪,೦೦೦ ಕನ್ನಡ ವಿದ್ಯಾರ್ಥಿಗಳು ಇದನ್ನು ಕುರಿತು ಯೋಚಿಸಬೇಕು. ವಿದ್ಯಾರ್ಥಿಗಳ ಸಾಹಸದಿಂದ ಆರಂಭವಾಗಿ ತಕ್ಕಮಟ್ಟಿಗೆ ಒಳ್ಳೆಯ ಕೆಲಸಮಾಡಿ, ತಮಗೆ ಶಿಕ್ಷಣಕ್ಷೇತ್ರವಾಗಿ, ಜನಕ್ಕೆ ಉಪಯುಕ್ತ ವಸ್ತುವಾಗಿ ೨೫ ವರ್ಷ ಉಳಿದು ಬೆಳೆದಿರುವ ಈ ಪತ್ರಿಕೆ ಇನ್ನೂ ಉಳಿದು ಬೆಳೆಯಬೇಕೇ ಬೇಡವೇ? ವಿದ್ಯಾರ್ಥಿಗಳಿಗೆ ಕಡಮೆ ದರದಲ್ಲಿ ಕೊಟ್ಟರೂ ಇದಕ್ಕೆ ಒಂದುನೂರು ವಿದ್ಯಾರ್ಥಿಗಳೂ ಚಂದಾದಾರರಿಲ್ಲವೆಂದು ಬಹು ವ್ಯಥೆಯಿಂದ ಇಲ್ಲಿ ಹೇಳಬೇಕಾಗಿದೆ.

## ವ್ಯಾಪಾರದ ಪ್ರಕಟನೆಗಳು

ಸಾಧಾರಣವಾಗಿ ಪತ್ರಿಕೆಗಳಿಗೆ ಹಣಕಾಸಿನ ಬೆಂಬಲ ಚಂದಾ ಹಣಕ್ಕಿಂತಲೂ ವ್ಯಾಪಾರದ ಪ್ರಕಟನೆಗಳಿಂದಲೇ ಹೆಚ್ಚು. ಆದರೆ ಪ್ರಕಟನೆಗಳು ಬರುವುದು ಪತ್ರಿಕೆಯ ಸಂಚಿಕೆಗಳು ಹೊರಬೀಳುವ ಅಂತರ, ಅದರ ಸಂಖ್ಯೆ, ದರದ ಮಟ್ಟ, ಇವುಗಳ ಮೇಲೆ ಹೋಗುತ್ತದೆ. ಆದ್ದರಿಂದ, ವರ್ಷಕ್ಕೆ ನಾಲ್ಕು ಸಂಚಿಕೆಗಳು ಮಾತ್ರ ಹೊರಡುತ್ತ ಒಂದು ಸಾವಿರ ಚಂದಾದಾರರೂ ಇಲ್ಲದ ಪ್ರಬುದ್ಧ ಕರ್ಣಾಟಕಕ್ಕೆ ಪ್ರಕಟನೆಗಳು ತಾವಾಗಿ ಬರುತ್ತಿರಲಿಲ್ಲ; ಬಂದವುಗಳು ಸಂಕೋಚ ತರುವಂತೆ ಇರುತ್ತಿದ್ದದ್ದರಿಂದಲೋ, ಬಹು ಕಡಮೆ ದರಗಳನ್ನು ಕೊಡುವುದಕ್ಕೆ ಇಚ್ಛೆಸುತ್ತಿದ್ದದ್ದರಿಂದಲೋ ನಾವೂ ಒಪ್ಪುತ್ತಿರಲಿಲ್ಲ. ಇಲ್ಲ, ವ್ರತ ನಡೆಯಬೇಕು, ಇಲ್ಲ ಸುಖ ದೊರೆಯಬೇಕು ಎಂಬುದು ನಮ್ಮ ಆಶಯ. ಒಂದು ಸಾರಿ, ಕನ್ನಡದ ಅಭಿಮಾನಿಗಳೆಂದು ಇಂದಿಗೂ ಪ್ರಖ್ಯಾತರಾಗಿರುವ ಶ್ರೀಮರ್ಾ ಎಸ್. ಜಿ. ಶಾಸ್ತ್ರಿಗಳನ್ನು ನಾನು ಹೋಗಿ ಕೇಳಿದೆ. ಮೂರು ಅಂಕಿಗಳಿಗೆ ಕಡಮೆಯಾದ ಹಣವನ್ನು ಕೊಟ್ಟರೆ ಅವರ

ಪ್ರಕಟನೆ ಬೇಡವೆಂದೂ ಹೇಳಿದೆ. ಅವರೂ ಅದಕ್ಕೆ ಒಪ್ಪಿ ನಾಲ್ಕು ಸಂಚಿಕೆಗಳಿಗೆ ಒಟ್ಟು ೧೦೦ ರೂಪಾಯಿಗಳನ್ನು ಕೊಡುವುದಾಗಿ ಹೇಳಿದರು. ಮೈಸೂರು ಶ್ರೀಗಂಧದ ಸಾಬೂನಿನ ಪ್ರಕಟನೆ ರಕ್ಷಾಪತ್ರದ ನಾಲ್ಕನೆಯ ಪುಟದಲ್ಲಿ ಮೂರುಸಾರಿ ಬಂದು, ೭೫ ರೂಪಾಯಿ ಸಂಪಾದನೆ ಮಾಡಿಕೊಟ್ಟಿತು. ನಾಲ್ಕನೆಯ ಸಂಚಿಕೆ ಬರುವ ಹೊತ್ತಿಗೆ ಪ್ರಬುದ್ಧ ಕರ್ಣಾಟಕವು ವಿಶ್ವವಿದ್ಯಾನಿಲಯದ ಪತ್ರಿಕೆಯಾದ್ದರಿಂದ, ಕೆರೆಯ ನೀರನ್ನು ಕೆರೆಗೆ ಚೆಲ್ಲಿದಂತೆ ಸರ್ಕಾರದ ದುಡ್ಡನ್ನು ಸರ್ಕಾರಕ್ಕೇ ಕೊಡುವುದರಲ್ಲಿ ಅರ್ಥವಿಲ್ಲವೆಂದು ಅವರು ಅದನ್ನು ನಿಲ್ಲಿಸಿದರು; ನಾವೂ ಒತ್ತಾಯಪಡಿಸಲಿಲ್ಲ. ಕೆಲವು ವರ್ಷಗಳು ವಿನಿಮಯವಾಗಿ ಪತ್ರಿಕೆಗಳ ಪ್ರಕಟನೆಗಳು ಬಂದವು. ಇವು ದಿನ ದಿನಕ್ಕೆ ಹೆಚ್ಚಾದ್ದರಿಂದಲೂ, ಶ್ರಮಕ್ಕೆ ತಕ್ಕ ಪ್ರಯೋಜನವೇನೂ ಕಂಡುಬಾರದ್ದರಿಂದಲೂ ಸ್ವಲ್ಪ ಕಾಲದ ಮೇಲೆ ಅವನ್ನು ನಿಲ್ಲಿಸಲಾಯಿತು.

### ಸಂಪಾದಕತ್ವ

ಪತ್ರಿಕೆಯು ಆರಂಭವಾದಂದಿನಿಂದ ಹದಿಮೂರು ವರ್ಷ ನಾನೇ ಸಂಪಾದಕನಾಗಿದ್ದೆ. ಆದರೆ ಮೊದಲು ಒಂದೆರಡು ಸಂಪುಟಗಳಲ್ಲಿ ಹೊರತು ನನ್ನ ಹೆಸರು ಸಂಪಾದಕನೆಂದು ಎಲ್ಲಿಯೂ ಕಂಡುಬರುವುದಿಲ್ಲ. ನಾನು ಸಂಪಾದಕನೆಂದು ಮ್ಯಾಜಿಸ್ಟ್ರೇಟರ ಮುಂದೆ ಹೇಳಿಕೆ ಕೊಟ್ಟಿದ್ದರೂ, ಸಂಪಾದಕರ ಮತ್ತು ಪ್ರಕಾಶಕರ ಹೆಸರನ್ನು ಹಾಕಿಯೇ ಹಾಕಬೇಕೆಂಬ ನಿರ್ಬಂಧವಿಲ್ಲದ್ದರಿಂದಲೂ ನನ್ನ ಹೆಸರಿಗಿಂತಲೂ ಸಂಘದ ಹೆಸರು ಮುಂದಕ್ಕೆ ಬರಬೇಕೆಂಬುದು ನನ್ನ ಉದ್ದೇಶವಾಗಿದ್ದದ್ದರಿಂದಲೂ, ಲೇಖನದಲ್ಲಿ ತಿರುಳಿದ್ದರೆ ಅದರಿಂದ ಪತ್ರಿಕೆಗೆ ಹೆಸರು ಬರುತ್ತದೆಯೇ ಹೊರತು ಸಂಪಾದಕನ ಹೆಸರು ಅಧಿಕಾರ ಶ್ರೀಮಂತಿಕೆಗಳಿಂದಲ್ಲವೆಂಬ ಒಂದು ದೃಢವಿಶ್ವಾಸವಿದ್ದದ್ದರಿಂದಲೂ ನನ್ನ ಹೆಸರನ್ನು ನಾನು ಪ್ರಕಟಿಸುತ್ತಿರಲಿಲ್ಲ. ಹೆಸರಿಲ್ಲದೆ, ಅಥವಾ ಬೇರೆಬೇರೆ ಹೆಸರಿನಿಂದ, ನಾನು ಪ್ರಬುದ್ಧ ಕರ್ಣಾಟಕಕ್ಕೆ ಎಷ್ಟೋ ಸಣ್ಣ ದೊಡ್ಡ ಲೇಖನಗಳನ್ನು ಬರೆದಿದ್ದೇನೆ; ಆದರೆ ಜವಾಬುದಾರಿ ಹೊರಬೇಕಾದಾಗ ನನ್ನ ಹೆಸರನ್ನು ಹಾಕುವುದಕ್ಕೆ ಎಂದೂ ಹಿಂತೆಗೆದಿಲ್ಲ.

ಪ್ರಬುದ್ಧ ಕರ್ಣಾಟಕವು ಹೊರಟಾಗ ಸುಮಾರು ಒಂದುನೂರು ವಿದ್ಯಾರ್ಥಿಗಳಿಂದ ತಲಾ ಒಂದೊಂದು ರೂಪಾಯಿನಂತೆ ಚಂದಾ ಮುಂಗಡವಾಗಿ ತೆಗೆದುಕೊಂಡು ಪತ್ರಿಕೆಯನ್ನು ಅಚ್ಚಿಗೆ ಕೊಟ್ಟಾಯಿತು; ಆಗ ನನಗೆ ಮೈಸೂರು ಓರಿಯಂಟಲ್ ಲೈಬ್ರರಿಗೆ ವರ್ಗವಾಯಿತು; ಶ್ರೀಮಾನ್ ವೆಂಕಣ್ಣಯ್ಯನವರು ಬೆಂಗಳೂರು ಗಾ|| ಹೈ ಸ್ಕೂಲಿನಿಂದ ಸೆಂಟ್ರಲ್ ಕಾಲೇಜಿಗೆ ನನ್ನ ಸ್ಥಾನಕ್ಕೆ ವರ್ಗವಾಗಿ ಬಂದರು; ಆಗ ಅವರು, ನಾನೇ ಸಂಪಾದಕನಾಗಿದ್ದುಕೊಂಡು ಮೈಸೂರಿನಿಂದಲೇ ಪತ್ರಿಕೆಯನ್ನು ಅಚ್ಚುಮಾಡಿಸಿ ಕಳುಹಿಸಬೇಕೆಂದೂ ತಾವು ಅದರ ಆಡಳಿತವನ್ನೂ ಸಂಘದ ಕಾರ್ಯಗಳನ್ನೂ ನೋಡಿಕೊಳ್ಳುವರೆಂದೂ ನನಗೆ ಖಂಡಿತವಾಗಿ ಹೇಳಿಬಿಟ್ಟರು. ನನ್ನ ವಿದ್ಯಾರ್ಥಿಗಳಿಂದ ಮುಂಗಡವಾಗಿ ಚಂದಾ ಹಣ ತೆಗೆದುಕೊಂಡು ಒಂದು ಸಂಚಿಕೆಯನ್ನು ಮಾತ್ರ ಕೊಟ್ಟಿದ್ದರಿಂದ ಮಿಕ್ಕ ಎರಡು ಸಂಚಿಕೆಗಳನ್ನು ನಾನು ಎಲ್ಲಿದ್ದರೂ ಪ್ರಕಟಿಸಿ ಕಳುಹಿಸುವೆನೆಂದೂ ಮುಂದಿನ ವರ್ಷದ ವಿಚಾರವನ್ನು ನಿಧಾನವಾಗಿ ಯೋಚಿಸಬಹುದೆಂದೂ ಹೇಳಿ ಮೂರು ತಿಂಗಳಿನ ಪ್ರಬುದ್ಧ ಕರ್ಣಾಟಕವನ್ನು ಮೈಸೂರಿಗೆ ಎತ್ತಿಕೊಂಡು ಬಂದೆ. ಮೊದಲನೆಯ ಸಂಚಿಕೆ, ಆಗ ತಾನೇ ಸ್ಥಾಪಿತವಾಗಿದ್ದ ಬೆಂಗಳೂರು ಪ್ರೆಸ್ಸಿನಲ್ಲಿ ಅಚ್ಚಾಯಿತು (೧೯೧೯); ಎರಡನೆಯ ಸಂಚಿಕೆಯಿಂದ ೩೫ನೆಯ ಸಂಚಿಕೆಯವರೆಗೆ ಮೈಸೂರಿನಲ್ಲಿ ಕ್ರಾನ್ ಪ್ರೆಸ್ಸಿನಲ್ಲಿ ಅಚ್ಚಾಗುತ್ತಿತ್ತು.

ಮೊದಲು ಕೆಲವು ವರ್ಷ ಪತ್ರಿಕೆ ನಡೆಯಲು ಮೈಸೂರಿನಲ್ಲಿ ನಾನೂ ಬೆಂಗಳೂರಿನಲ್ಲಿ ವೆಂಕಣ್ಣಯ್ಯನವರೂ ತುಂಬ ಶ್ರಮಪಡಬೇಕಾಯಿತು- ಸಂಚಿಕೆಗಳನ್ನು ಮನೆಮನೆಗೆ ತೆಗೆದುಕೊಂಡು ಹೋಗಿ ಕೊಟ್ಟು ವರ್ಷವೆಲ್ಲಾ ಕಾದು ಕೊನೆಗೆ ಚಂದಾ ಕೇಳಿ, ಆಗ ಬಾ ಈಗ ಬಾ ಎನ್ನಿಸಿಕೊಂಡು, ಮಾರವಾರಿ ನಕ್ಷತ್ರಿಕ ಎನ್ನಿಸಿಕೊಂಡು ದುಡ್ಡು ಸಂಪಾದನೆಮಾಡಿಯಾಯಿತು. ಉತ್ಸಾಹಕ್ಕೆ ತಕ್ಕಷ್ಟು ಅನುಭವವಿರಲಿಲ್ಲ; ಅಭಿಮಾನವೇನೋ ಬೇಕಾದಷ್ಟಿತ್ತು. ಈ ಅಭಿಮಾನದಿಂದಲೇ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು ನಮ್ಮ ಜೊತೆಗೂ ದುಡಿದು, ದುಡ್ಡು ತಂದು, ಕೊಟ್ಟು, ಪತ್ರಿಕೆಯನ್ನು ಬದುಕಿಸಿದರು. ಆಗ್ಗೆ ಕನ್ನ

ಡದ ಅಭಿಮಾನ ಇನ್ನೂ ಹೊಸದು ; ಬೇರೆ ಪ್ರಬಲ ಭಾಷೆಗಳೊಡನೆ ಅದಕ್ಕೆ ಸ್ಪರ್ಧೆ ಇರಲಿಲ್ಲ. ರಾಜಕೀಯ ಚಳುವಳಿ ಇರಲಿಲ್ಲ. ಜನರೂ ಇದೊಂದು ವಿದ್ಯಾರ್ಥಿಗಳ ಸಾಹಸ ಎಂದು ಮೆಚ್ಚಿಗೆಯಿಂದಲೂ ಸಂತೋಷದಿಂದಲೂ ಪ್ರೋತ್ಸಾಹಿಸುತ್ತಿದ್ದರು. ಹೀಗೆ ಸಂಘವೂ ಪತ್ರಿಕೆಯೂ ದಿನದಿನಕ್ಕೆ ಪ್ರವರ್ಧಮಾನವಾಗುತ್ತ ಬಂದುವು.

ಎಂಟು ವರ್ಷಗಳನಂತರ ವೆಂಕಣ್ಣಯ್ಯನವರು ಕನ್ನಡದ ಪ್ರೊಫೆಸರಾಗಿ ಮೈಸೂರಿಗೆ ವರ್ಗವಾದರು. ೧೯೨೭ ರಲ್ಲಿ ಮತ್ತೆ ನಾನು ಸೆಂಟ್ರಲ್ ಕಾಲೇಜಿಗೆ ಹೋದೆ. ಪ್ರಬುದ್ಧ ಕರ್ಣಾಟಕವೂ ಬೆನ್ನು ಹತ್ತಿತು; ಆದರೆ ಈಗ ಅದು ತನ್ನ ಮನೆಗೆ ತಾನು ಬಂದಂತಾಯಿತು. ಸಂಘದ ಆಡಳಿತ, ಪತ್ರಿಕೆಯ ಸಂಪಾದಕತ್ವ, ಎರಡೂ ನನ್ನ ಹೆಗಲಿಗೇ ಬಂದುವು ; ಅವನ್ನು ಯಥಾಶಕ್ತಿಯಾಗಿ ನಿರ್ವಹಿಸಿ ಬೆಳೆಸಿದ್ದಾಯಿತು. ಪತ್ರಿಕೆ ಸಕಾಲಕ್ಕೆ ಹೊರಡಬೇಕೆಂದು, ಸ್ವಂತವಾಗಿ ಅಚ್ಚುಕೂಟಗಳಿಗೆ ಅಲೆದು ಅಲೆದು, ಆವಶ್ಯಕವಿದ್ದರೆ ಒಂದೊಂದು ಸಂಚಿಕೆಯನ್ನು ಎರಡು ಅಥವಾ ಮೂರು ಅಚ್ಚು ಕೂಟಗಳಲ್ಲಿ ಅಚ್ಚುಮಾಡಿಸಿ, ಮಿಕ್ಕ ಕೆಲಸವನ್ನು ಬದಿಗಿಟ್ಟು, ದೇಹವನ್ನು ತೆಯ್ದಾಯಿತು. ಆದರೆ ಇಷ್ಟು ವರ್ಷವಾದರೂ, ಪತ್ರಿಕೆಯನ್ನು ಎಷ್ಟೆಷ್ಟು ಪುಷ್ಟಿಗೊಳಿಸಿ, ಸುಂದರಗೊಳಿಸಿದರೂ ಅದರ ಚಂದಾದಾರರು ಸುಮಾರು ೭೦೦ ಅಥವಾ ೮೦೦ ಕ್ಕೆ ಹೆಚ್ಚಲಿಲ್ಲ. ಪತ್ರಿಕೆಯನ್ನು ಆದಷ್ಟು ಅಗ್ಗವಾದ ಅಚ್ಚು ಕೂಟದಲ್ಲಿ ಅಚ್ಚು ಮಾಡಿಸುತ್ತಿತ್ತು. (ಆದ್ದರಿಂದ ತುಂಬ ದೇಹಶ್ರಮ ಬುದ್ಧಿಶ್ರಮಗಳನ್ನು ವಹಿಸಬೇಕಾಗುತ್ತಿತ್ತು); ಇದರಿಂದಲೂ, ತಿಂಗಳಿಗೆ ನಾಲ್ಕು ರೂಪಾಯಿ ಸಂಬಳದ ಮೇಲೆ ಒಪ್ಪತ್ತು ಕೆಲಸಮಾಡುವ—ಆದರೆ ಅಷ್ಟೇನೂ ಪ್ರಾಮಾಣಿಕನಾಗಲಿ ಉಪಯುಕ್ತನಾಗಲಿ ಅಲ್ಲದ—ಒಬ್ಬ ಆಳು ಹೊರತು ಮತ್ತಾವ ಸಿಬ್ಬಂದಿಯೂ ಇಲ್ಲದೆ ಕೆಲಸಮಾಡುತ್ತಿದ್ದದ್ದರಿಂದಲೂ, ಕೆಲಕೆಲವು ವರ್ಷ ವಿಶ್ವವಿದ್ಯಾನಿಲಯದ ಮತ್ತು ವಿದ್ಯಾ ಇಲಾಖೆಯ ಸಹಾಯ ಒದಗುತ್ತಿದ್ದದ್ದರಿಂದಲೂ, ಚಂದಾದಾರರಲ್ಲಿ 'ಪೋಷಕ' ರೆಂಬ ಒಂದು ವರ್ಗವಿದ್ದು ಅವರು ಮೂರು ರೂಪಾಯಿ–ಎಂದರೆ ಒಂದುವರೆಯಷ್ಟು—ಚಂದಾವನ್ನು ಕೊಡುತ್ತಿದ್ದದ್ದರಿಂದಲೂ,

ವೇತನ ಪಡೆಯುತ್ತಿದ್ದ ವಿದ್ಯಾರ್ಥಿಗಳು ಅಲ್ಪ ಸ್ವಲ್ಪ ಸಹಾಯಮಾಡು ತ್ತಿದ್ದದ್ದರಿಂದಲೂ, ಬೆಂಗಳೂರಿನ ವಿಶ್ವವಿದ್ಯಾನಿಲಯ ಸಂಘವು ನಮ್ಮ ವಿನಿಮಯ ಪತ್ರಿಕೆಗಳನ್ನೆಲ್ಲಾ ತೆಗೆದುಕೊಂಡು ಅವಕ್ಕೆ ಒಟ್ಟು ವರ್ಷಕ್ಕೆ ೫೦ ರೂಪಾಯಿ ಕೊಡುತ್ತಿದ್ದದ್ದರಿಂದಲೂ, ಹಾಗೂ ಹೀಗೂ ಪತ್ರಿಕೆಯು ಸಾಲಮಾಡದೆ ಜೀವಿಸಿಕೊಂಡಿತ್ತು. ಪುಟಗಳನ್ನು ಹೆಚ್ಚು ಮಾಡಿದ್ದ ರಿಂದ ಅಂಚೆ ವೆಚ್ಚ ಹೆಚ್ಚಾಯಿತು. (೧೯೩೦-೩೧ನೆಯ ವರ್ಷದಲ್ಲಿ ಸಂಘದ ಅಂಚೆಯ ವೆಚ್ಚ ರೂ. ೫೨೩) ಚಂದಾ ಹೆಚ್ಚುಮಾಡಿದ್ದರೆ, ಚಂದಾದಾರರು ಇನ್ನೂ ಕಡಮೆಯಾಗುತ್ತಿದ್ದರೇ ಹೊರತು ಉತ್ಪತ್ತಿ ಹೆಚ್ಚಾಗುತ್ತಿರಲಿಲ್ಲ. ಆದಷ್ಟು ಸುಲಭ ಬೆಲೆಯಲ್ಲಿ ಉತ್ತಮವಾದ ವಸ್ತು ವನ್ನು ಕೊಟ್ಟು ಜನಕ್ಕೆ ಓದಿನಲ್ಲಿ ಅಭಿರುಚಿಯುಂಟುಮಾಡಬೇಕೆಂಬ ನಮ್ಮ ಉದ್ದೇಶಕ್ಕೂ ಭಂಗಬರುತ್ತಿತ್ತು. ಆದ್ದರಿಂದ, ನಮ್ಮ ಜನದಲ್ಲಿ ಇಂಥ ವಸ್ತುವನ್ನು ಉಪಯೋಗಿಸಿಕೊಳ್ಳುವವರ ಪ್ರಮಾಣವೇ ಇಷ್ಟು; ಅಗ್ಗವಾಗಿ ಕೊಟ್ಟರೂ ಇಷ್ಟೇ, ಬಿಟ್ಟಿ ಕೊಟ್ಟರೂ ಇಷ್ಟೇ ಎಂದು ಒಂದು ವಿಧವಾದ ಸಮಾಧಾನವನ್ನು ತಂದುಕೊಂಡೆ. ಆದರೂ ಮನಸ್ಸಿಗೆ ನಿರು ತ್ಸಾಹವೇನೋ ತುಂಬ ಇತ್ತು. ಇನ್ನೊಂದು ವರ್ಷ ಆದಷ್ಟು ಚೆನ್ನಾಗಿ ನಡಸಿ, ಸಾಕಾದಷ್ಟು ಪ್ರೋತ್ಸಾಹ ದೊರೆಯದ್ದರಿಂದ ಇದನ್ನು ನಿಲ್ಲಿಸಿ ದ್ದೇನೆಂದು ಪ್ರಕಟಿಸಿ, ಪತ್ರಿಕೆಯನ್ನು ಕೈಬಿಡೋಣವೆಂದುಕೊಂಡಿದ್ದೆ. ಆದರೂ ಅಭಿಮಾನ ಹೋಗಿರಲಿಲ್ಲ: ಪತ್ರಿಕೆಯ ಆಯುಸ್ಸು ಇನ್ನೂ ತುಂಬ ಇತ್ತು! ಆದ್ದರಿಂದ ಒಂದುದಿನ, ಆಗತಾನೆ ಸಂಘದ ಅಧ್ಯಕ್ಷ ರಾಗಿದ್ದ ಶ್ರೀಮಾನ್ ಬಿ.ಎಂ. ಶ್ರೀಕಂಠಯ್ಯನವರಲ್ಲಿ ಪತ್ರಿಕೆಯ ಪ್ರಸ್ತಾಪ ವನ್ನೆತ್ತಿ, ಇದನ್ನು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿ ಸರ್ಕಾರದ ಪತ್ರಿಕೆ ಯಾಗಿ ಮಾಡಿದರೆ ಅಂಚೆ ವೆಚ್ಚ ಉಳಿಯುವುದು; ಅದನ್ನು ಪತ್ರಿಕೆಯ ಖರ್ಚಿಗೆ ಹಾಕಿಕೊಳ್ಳಬಹುದು ಎಂದು ಸೂಚಿಸಿದೆ. ಅವರು ಇನ್ನು ಮೇಲೆ ಮೈಸೂರು ಬೆಂಗಳೂರುಗಳ ಸಂಘಗಳೆರಡೂ ಇದರ ಜವಾಬ್ದಾರಿ ವಹಿಸಿಕೊಂಡು, ಸಹಕರಿಸಿ, ನಡಸಬೇಕೆಂದು ಸಲಹೆಕೊಟ್ಟು, ನನ್ನನ್ನೂ ಮೈಸೂರಿನ ಸಂಘದ ಮುಖ್ಯಾಧಿಕಾರಿಗಳಾಗಿದ್ದ ವೆಂಕಣ್ಣಯ್ಯನವರನ್ನೂ ಕೂರಿಸಿಕೊಂಡು ಒಂದು ಕಾಗದ ಬರೆಸಿ ಆಗ ಸ್ಥಾನಪತಿಗಳಾಗಿದ್ದ

ಡಾ|| ಮೆಟ್ಕಾಫರ ಮುಂದಿಟ್ಟರು. ಸರ್ಕಾರದವರು ಹೊಸ ಕೆಲಸಗಳಲ್ಲಿ ತಟ್ಟನೆ ಕೈಹಾಕುವುದಿಲ್ಲ. ಅವು ಅಷ್ಟೇನೂ ಇಷ್ಟವಲ್ಲದ, ಮತ್ತು ಹೊರೆ ಎಂಬ ಭಾವವುಳ್ಳ, ಜನರಾರಾದರೂ ಹತ್ತಿರವಿದ್ದರಂತೂ ಹೇಳಬೇಕಾಗಿಲ್ಲ. ಹೀಗಾಗಿ ಅವರು ಸಂಘದ ವಿಚಾರವಾಗಿಯೂ ಪತ್ರಿಕೆಯ ವಿಚಾರವಾಗಿಯೂ ನಾನಾ ಪ್ರಶ್ನೆಗಳನ್ನು ಕೇಳಿ, ಅಂಕಿ ಅಂಶಗಳನ್ನು ತರಿಸಿಕೊಂಡು ಕೊನೆಗೆ ಅದನ್ನು ವಿಶ್ವವಿದ್ಯಾನಿಲಯವು ನಡಸುವುದೆಂದು ತೀರ್ಮಾನಿಸಿದರು. (೧೯೩೨). ಹೀಗೆ ಪ್ರಬುದ್ಧ ಕರ್ಣಾಟಕವುಗಳ ನೆಯ ಸಂಪುಟದಿಂದ ವಿಶ್ವವಿದ್ಯಾನಿಲಯದ ಪೋಷಣೆಯಲ್ಲಿ ಬೆಳೆಯುವಂತಾಯಿತು. ಆದರೆ ಸಂಘಕ್ಕೆ ಅದುವರೆಗೆ ಕೊಡುತ್ತಿದ್ದ ವರ್ಷಾಶನವಾದ ೨೦೦ ರೂಪಾಯಿಯು ನಿಂತುಹೋಯಿತು. "ಅದನ್ನು ಕೊಡುತ್ತಿದ್ದದ್ದು ಪ್ರಬುದ್ಧ ಕರ್ಣಾಟಕವನ್ನು ನಡಸುತ್ತಿದ್ದದ್ದಕ್ಕೆ; ಪ್ರಬುದ್ಧ ಕರ್ಣಾಟಕವನ್ನು ವಿಶ್ವವಿದ್ಯಾಲಯವು ಕೈಗೆ ತೆಗೆದುಕೊಂಡದ್ದರಿಂದ ಅದು ಬೇಕಿಲ್ಲ" ಎಂದು ಅಧಿಕಾರಿಗಳು ತೀರ್ಮಾನಿಸಿದರು! (ದುಡಿಯುತ್ತಿದ್ದ ಮಗನನ್ನು ದತ್ತು ಕೊಟ್ಟಂತಾಯಿತು!) ಇತ್ತಲಾಗಿ ಪ್ರಬುದ್ಧ ಕರ್ಣಾಟಕವೂ ತನ್ನ ಕಾಲುಮೇಲೆ ತಾನು ನಿಂತು ತನ್ನ ಅನ್ನವನ್ನು ತಾನು ಗಳಿಸಿಕೊಂಡು ಜೀವಿಸಬೇಕೆಂದು ಅಪ್ಪಣೆಮಾಡಿದರು. ಸರ್ಕಾರದ ಇಲಾಖೆಗೆ ಸೇರಿದ್ದರಿಂದ ನಾನಾ ನಿಯಮಗಳಿಗೆ ಬದ್ಧರಾಗಿ, ಹತ್ತಾರು ಜನಗಳಿಗೆ ಉತ್ತರವಿತ್ತು, ಸ್ವತಂತ್ರವಾಗಿ ಯಾವ ಪ್ರಯೋಗಗಳನ್ನೂ ಮಾಡಲಾರದೆ, ಕೊಲ್ಲಲಾರದೆ ಕಾಪಾಡಲಾರದೆ, ಕೆಲವು ಕಾಲ ಪತ್ರಿಕೆಯನ್ನು ಒಂದು ನಿರ್ಬಂಧದಲ್ಲಿ ನಡಸಿಕೊಂಡು ಬರಬೇಕಾಯಿತು; ಇದರ ಪೂರ್ಣ ಅನುಭವ ಬಂದದ್ದು ಕೆಲವು ವರ್ಷಗಳ ಮೇಲೆ.

ವಿಶ್ವವಿದ್ಯಾನಿಲಯವು ೧೯೩೨ ರಲ್ಲಿ ಪತ್ರಿಕೆಯನ್ನು ತನ್ನ ಆಡಳಿತಕ್ಕೆ ತೆಗೆದುಕೊಂಡಾಗ ಅದು ಕನ್ನಡ ಗ್ರಂಥಪ್ರಕಾಶನ ಸಮಿತಿಯ ಮೇಲ್ವಿಚಾರಣೆಯಲ್ಲಿ ನಡೆಯಬೇಕೆಂದೂ, ಶ್ರೀಮಾನ್ ಬಿ.ಎಂ. ಶ್ರೀಕಂಠಯ್ಯನವರು ಮುಖ್ಯ ಸಂಪಾದಕರು, ಶ್ರೀಮಾನ್ ಟಿ.ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರೀ ಇವರು ಸಂಪಾದಕರು,

ಶ್ರೀಮರ್ಾ ತೀ. ನಂ. ಶ್ರೀಕಂಠಯ್ಯ, ಕೆ. ವಿ. ಪುಟ್ಟಪ್ಪ, ವಿ. ಸೀತಾ ರಾಮಯ್ಯ ಇವರು ಸಂಪಾದಕ ಸಮಿತಿಯ ಇತರ ಸದಸ್ಯರು ಎಂದೂ ನಿಯಮಿಸಿತ್ತು. ಸಂಪಾದಕ ಸಮಿತಿಯಲ್ಲಿ ಎಷ್ಟು ಜನವೇ ಇರಲಿ, ಅದರ ಅಧ್ಯಕ್ಷರು ಯಾರೇ ಆಗಿರಲಿ, ಪತ್ರಿಕೆಯ ಜವಾಬ್ದಾರಿ ಸಂಪಾದಕನದು; ಅದಕ್ಕೆ ಸಂಪಾದಕನು ತನ್ನ ದೇಹವನ್ನು, ಜೀವವನ್ನು, ತೆಯ್ಯಬೇಕು. ಇಲ್ಲದಿದ್ದರೆ ಅದು ಸೊರಗಿ ಹೋಗುವುದು. ಇದು ನನ್ನ ಕಟುವಾದ ಅನುಭವ. ಆದರೆ ಶ್ರೀಮರ್ಾ ವೆಂಕಣ್ಣಯ್ಯನವರ ಮಾತು ಬೇರೆ; ವೆಂಕಣ್ಣಯ್ಯನವರೆಂದರೆ ಬೆಲ್ಲದ ಉಂಡೆ! ಅವರಿಗೆ ಗೊದ್ದಗಳೂ ಇರುವೆಗಳೂ ಸದಾ ಮುತ್ತಿಕೊಂಡಿರುತ್ತಿದ್ದುವು. ಅವರೂ ಆ ಪಿಪೀಲಿಕಾ ಪಂಕ್ತಿಗಳಿಂದ ಬೇಕಾದಷ್ಟು ಕೆಲಸ ಮಾಡಿಸುತ್ತಿದ್ದರು; ಅವೂ ಸಂತೋಷವಾಗಿಯೇ ಮಾಡುತ್ತಿದ್ದುವು; ಇದು ಅವರ ಜಾತಕದ ಸ್ವರೂಪ. ಇದನ್ನು ನಾನು ಒಂದುಸಾರಿ ಅವರು ಶಂಕರಪುರದಲ್ಲಿ ವಾಸಮಾಡುತ್ತಿದ್ದಾಗ ಅವರ ಮನೆಗೆ ಹೋಗಿ ನೋಡಿದೆ. ಅದು ಪ್ರಬುದ್ಧ ಕರ್ಣಾಟಕದ ಕಚೇರಿಯಾಗಿಬಿಟ್ಟಿತ್ತು; ಅದಕ್ಕೆ ಸ್ವಲ್ಪ ದಿನಗಳ ಹಿಂದೆ ನಾನು ಮೈಸೂರಿಂದ ಒಂದು ಸಂಚಿಕೆಯನ್ನು ಅಚ್ಚುಮಾಡಿಸಿ ಕಳುಹಿಸಿದ್ದೆ; ಅದನ್ನು ಕಾಗದದಲ್ಲಿ ಸುತ್ತುವವರು ಎಷ್ಟು ಜನ, ಸ್ಟಾಂಪು ಅಂಟಿಸುವವರು ಎಷ್ಟುಜನ, ಬರೆದುಕೊಳ್ಳುವವರು ಎಷ್ಟು ಜನ, ಜೋಡಿಸುವವರು ಎಷ್ಟು ಜನ! ಅಷ್ಟು ಜನ ಆವಶ್ಯಕವೋ ಅಲ್ಲವೋ, ಅಂತೂ ಆ ಮನೆ ಒಂದು ಇರುವೆಯ ಗೂಡಿನಂತಿತ್ತು. ಇಂಥವರ ಕೈಗೆ ಸಂಪಾದಕತ್ವದ ಮುಖ್ಯ ಜವಾಬ್ದಾರಿ ಬಂದಾಗ ಕೆಲಸವು ಸುಸೂತ್ರವಾಗಿ, ಸರಿಯಾಗಿ, ನಡೆಯಬೇಕಾಗಿತ್ತು. ಆದರೆ ಬರವಣಿಗೆಯ ಕೆಲಸ, ಓಡಾಟದ ಕೆಲಸ, ಕೂಡಲೆ ತಡವಿಲ್ಲದೆ ಮಾಡಬೇಕಾದ ಕೆಲಸ ಒದಗಿದರೆ, ಅದರಲ್ಲಿಯೂ ಅಷ್ಟೇನೂ ದೇಹ ದಾರ್ಢ್ಯವಿಲ್ಲದೆ, ವಾಹನ ಸೌಕರ್ಯಗಳಿಲ್ಲದೆ, ಹಟವಾದಿಯಲ್ಲದೆ, ಪ್ರತಿಯೊಂದಕ್ಕೂ ಪರಾವಲಂಬನವೇ ಅಭ್ಯಾಸವಾಗಿ ಹೋಗಿರತಕ್ಕವರಿಗೆ ಒದಗಿದರೆ, ಕೆಲಸ ಸುಕರವಲ್ಲ. ಆದ್ದರಿಂದ ವೆಂಕಣ್ಣಯ್ಯನವರು ಸ್ವಲ್ಪ ಕಿರುಕುಳ ಪಡುತ್ತಿದ್ದದ್ದನ್ನು ನಾನು ನೋಡುತ್ತಿದ್ದೆ, ಕೇಳುತ್ತಿದ್ದೆ.

ಆದರೆ, ಅವರ ಸುತ್ತ ಉತ್ಸಾಹಿಗಳೂ ಸಮರ್ಥರೂ ಆದ ತರುಣರು ಸಹಾಯಕ್ಕೆ ಇದ್ದರೆಂಬ ಧೈರ್ಯದಿಂದಲೂ, 'ಸಂಸ್ಕೃತ ನಾಟಕ'ವನ್ನು ಬರೆಯುವ ಕೆಲಸ ವಹಿಸಿಕೊಂಡಿದ್ದದ್ದರಿಂದಲೂ, ಪತ್ರಿಕೆಯ ಕೆಲಸವನ್ನು ಒಂದೇ ಸಮನಾಗಿ ಹದಿಮೂರು ವರ್ಷ ನಡಸಿ ತಲೆ ಚಿಟ್ಟು ಹಿಡಿದು ಹೋಗಿದ್ದದ್ದರಿಂದಲೂ, ಮಾನವ ಸಹಜವಾದ ಸೋಮಾರಿತನದಿಂದಲೂ ಈ ಕಾಲದಲ್ಲಿ ನಾನು ಸಹಸಂಪಾದಕನಾಗಿ ಅವರಿಗೆ ಎಷ್ಟು ಸಹಕಾರ ಕೊಡಬೇಕಾಗಿತ್ತೋ ಅಷ್ಟನ್ನು ಕೊಡಲಿಲ್ಲ. ಸಂಚಿಕೆಗಳು ಆಗ ಸಕಾಲಕ್ಕೆ ಬರುತ್ತಿರಲಿಲ್ಲವೆಂಬ ಗೊಣಗಾಟ ಕೇಳಿಬರುತ್ತಿತ್ತು; ಆದರೆ ೧೯ನೆಯ ಸಂಪುಟದಲ್ಲಿ ೨ ಸಂಚಿಕೆಗಳು ವಿನಾ ಮಿಕ್ಕ ಯಾವುವೂ ಜೋಡಿ ಸಂಚಿಕೆಯಾಗಿ, ತಿಂಗಳುಗಟ್ಟಲೆ ತಡವಾಗಿ, ಬರಲಿಲ್ಲ.

ದೇವರು ಆ ಕಾಲದಲ್ಲಿ ನನಗೆ ಸ್ವಲ್ಪ ಬಿಡುವುಕೊಟ್ಟು ಬೇರೆ ಕೆಲಸ ಮಾಡಿಸಿದ; ಆದರೆ ಆ ಬಿಡುವು ಇದ್ದದ್ದು ಕೆಲವು ವರ್ಷಮಾತ್ರ: "ಸಂಸ್ಕೃತ ನಾಟಕ" ಬರೆದು ಮುಗಿಯುವವರೆಗೆ. ಈ ಮಧ್ಯೆ ಪರಿಷತ್ಪತ್ರಿಕೆಯ ಸಂಪಾದಕತ್ವ ಒದಗಿತು; ಅದನ್ನು ಉತ್ತಮಗೊಳಿಸಬೇಕೆಂಬ ಆದರ್ಶವಾದಿಗಳ ಮಧ್ಯದಲ್ಲಿ ದುಡಿಯಬೇಕಾಯಿತು; ಇಷ್ಟು ಹೊತ್ತಿಗೆ ಶ್ರೀಮಾನ್ ವೆಂಕಣ್ಣಯ್ಯನವರು ಅನಿರೀಕ್ಷಿತರಾಗಿ ೨೪-೨-೧೯೩೯ ರಲ್ಲಿ ಸ್ವರ್ಗಸ್ಥರಾಗಲು ನನ್ನ ಮಗುವನ್ನು ನಾನು ನೋಡಿಕೊಳ್ಳಬೇಕಾಯಿತು. ಬಳ್ಳಿಗೆ ಕಾಯಿ ಹೊರೆಯೇ? ಆಗಲಿ—ಎಂದು ಅದನ್ನು ಕೈಕೊಂಡೆ. ಶ್ರೀಮಾನ್ ವೆಂಕಣ್ಣಯ್ಯನವರು ದಿವಂಗತರಾದಾಗ ಅವರಿಗೆ ೫೨ ವರ್ಷ ವಯಸ್ಸು; ಅವರು ತಮ್ಮ ಅಧಿಕಾರಾವಧಿ ಮುಗಿಯುವವರೆಗಾದರೂ ಆಯುಸ್ಸು ಹಾಕಿಕೊಂಡು ಬದುಕಿದ್ದಿದ್ದರೆ ನನಗೆ ಇನ್ನಷ್ಟು ದಿನ ಧಾರಾಳವಾಗಿ ಉಸಿರಾಡುತ್ತ ಓಡಾಡಿಕೊಂಡಿರುವುದಕ್ಕೆ ಅವಕಾಶ ಸಿಕ್ಕುತ್ತಿತ್ತು! ಆದರೆ ಭಗವಂತನಿಗೆ ಅದು ಇಷ್ಟವಿರಲಿಲ್ಲ!

ನಾನು ಮೈಸೂರಿಗೆ ಪ್ರೊಫೆಸರಾಗಿ ಮತ್ತು ಪತ್ರಿಕೆಯ ಸಂಪಾದಕನಾಗಿ ವರ್ಗಪಟ್ಟು ಬಂದಕೂಡಲೆ ಆಗ ಸ್ಥಾನಪತಿಗಳಾಗಿದ್ದ ಶ್ರೀಮಾನ್ ಎನ್. ಎಸ್. ಸುಬ್ಬರಾಯರು ನನ್ನನ್ನು ಕರೆದು "ಕೃಷ್ಣ

ಶಾಸ್ತ್ರೀ, ಪ್ರಬುದ್ಧ ಕರ್ಣಾಟಕದ ಸಂಪಾದಕನಾಗಿ ಈಗ ನೀನು ಮೂರು ಕೆಲಸಮಾಡಬೇಕು—೧. ಪತ್ರಿಕೆಯನ್ನು ಕಾಲಕಾಲಕ್ಕೆ ತಡವಿಲ್ಲದೆ ಹೊರಡಿಸುವುದು. ೨. ಅದರಲ್ಲಿ ಸಾಹಿತ್ಯ ಮಾತ್ರವಲ್ಲದೆ ಶಾಸ್ತ್ರವಿಚಾರ ಗಳನ್ನೂ ಪ್ರಕಟಿಸುವುದು. ೩. ಮೈಸೂರಿನಿಂದ ಹೊರಗೆ ಇರುವ ಕರ್ಣಾಟಕರ ಸಹಾಯ ಸಹಾನುಭೂತಿಗಳನ್ನೂ ಹೆಚ್ಚು ಹೆಚ್ಚಾಗಿ ಪಡೆಯುವುದು. ಇವಿಷ್ಟನ್ನೂ ಮನಸ್ಸಿನಲ್ಲಿಟ್ಟುಕೊಂಡು ಪತ್ರಿಕೆಯನ್ನು ಉತ್ತಮಗೊಳಿಸು, ಉತ್ತಮೋತ್ತಮವಾದದ್ದನ್ನಾಗಿ ಮಾಡು; ಅದಕ್ಕೆ ಬೇಕಾದ ದ್ರವ್ಯವನ್ನು ಒದಗಿಸುವುದು ನನ್ನ ಭಾರ!" ಎಂದರು. ಕೈಬಿಡಬೇಕೆಂದಿದ್ದ ಪತ್ರಿಕೆಯನ್ನು ವಿಶ್ವವಿದ್ಯಾನಿಲಯದ ಕೊರಳಿಗೆ ಕಟ್ಟಿ, ಅದು ನರಳುತ್ತಿದ್ದರೂ ನೋಡುತ್ತ ನಿರ್ಮಮತೆಯನ್ನು ಅಭ್ಯಾಸ ಮಾಡುತ್ತಿದ್ದ ನನಗೆ ಈ ಪ್ರಲೋಭನ ಒದಗಿತು. "ಈ ನವೆಯುತ್ತಿರುವ ನಂದಾ ದೀಪಕ್ಕೆ ಎಣ್ಣೆ ಕೊಡುತ್ತಾರಂತೆ ನೋಡೋಣ; ಬತ್ತಿ ಸರಿಮಾಡಿ ದೀಪ ದೊಡ್ಡದು ಮಾಡೋಣ! ಹೆಚ್ಚು ಬೆಳಕು ಬಂದರೆ ಬರಲಿ; ಮೈ ಮಸಿಯಾದರೆ, ಕೈ ಜಿಡ್ಡಾದರೆ, ಚಿಂತೆಯಿಲ್ಲ" ಎಂದು ಮತ್ತೆ ದೀಪದ ಮುಂದೆ ಕುಳಿತೆ. ಆ ಪೂಜಾಫಲವೇ ೨೧ ರಿಂದ ೨೪ ವರ್ಷ ಪೂರ್ತಿಯ ನಾಲ್ಕು ಸಂಪುಟಗಳು. ಇವುಗಳಲ್ಲಿ ಶ್ರೀವರ್ಮ ಸುಬ್ಬರಾಯರ ಆಜ್ಞೆಯನ್ನು, ಶ್ರಮವಾದರೂ, ಶಕ್ತಿಮೀರಿ ಪರಿಪಾಲಿಸಿದ್ದೇನೆ. ಆ ಶ್ರಮ ಸಾರ್ಥಕವೆಂದು ತಿಳಿದಿದ್ದೇನೆ.

ನಾನು ೧೯೩೯ ರಲ್ಲಿ ಮೈಸೂರಿಗೆ ಬಂದು ಸಂಪಾದಕತ್ವವನ್ನು ವಹಿಸಿಕೊಂಡ ಮೇಲೆ ೧೭ ಸಂಚಿಕೆಗಳನ್ನು ಪ್ರಕಟಿಸಿದೆ. ಇವೆಲ್ಲವೂ ಸಕಾಲಕ್ಕೆ ಬಂದುವೆಂದು ನನಗೆ ಒಂದು ಸಂತೋಷವೂ ಸಮಾಧಾನವೂ ಇವೆ. ಇದಕ್ಕೆ ನಾನು ಪಟ್ಟ ಶ್ರಮವೆಷ್ಟು ಕಾರಣವೋ ಅಷ್ಟೇ ವೆಸ್ಲಿ ಪ್ರೆಸ್‌ನ ಸಹಕಾರ ದಕ್ಷತೆಗಳೂ ಕಾರಣ. ಈ ಸಂದರ್ಭದಲ್ಲಿ ನಾನು ವೆಸ್ಲಿ ಪ್ರೆಸ್ಸಿನ ಅಧಿಕಾರಿಗಳಿಗೂ ಅದರಲ್ಲಿಯೂ ಮಿ|| ಟಾಂಕಿರ್ಸ ಅವರಿಗೂ ನನ್ನ ವಿಶೇಷ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಅವರ ಕೆಲಸದಲ್ಲಿ ಏನೂ ಕೊರತೆ ಇಲ್ಲ. ಅವರೊಡನೆ ಕೆಲಸ ಮಾಡುವುದೇ ಒಂದು ಸಂತೋಷ.

೧೯೪೨ ರಲ್ಲಿ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಅಧಿಕಾರ ದಿಂದ ವಿಶ್ರಾಂತರಾದರು. ಆದ್ದರಿಂದ ಕನ್ನಡ ಗ್ರಂಥಪ್ರಕಾಶನ ಸಮಿತಿಯ ಅಧ್ಯಕ್ಷತೆಯೂ ನನ್ನ ಪಾಲಿಗೆ ಬಂತು. ಇದು ಒಂದೇ ಪೂರ್ತಿ ಹೊತ್ತು ಕೆಲಸಮಾಡುವ ಒಬ್ಬ ದಕ್ಷನಿಗೆ ತಕ್ಕ ಕೆಲಸ; ಆದರೂ ಶ್ರೀಮಾನ್ ಶ್ರೀಕಂಠಯ್ಯನವರು ಇದನ್ನು ತಮ್ಮ ಹಲವು ಕೆಲಸಗಳ ಜೊತೆಗೆ ನಿರ್ವಹಿಸಿದರು; ಅವರು ಹಾಗೆ ದುಡಿಯದಿದ್ದಿದ್ದರೆ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಗ್ರಂಥಪ್ರಕಾಶನ ಸಮಿತಿಯ ಯೋಜನೆ ಏರ್ಪಟ್ಟು ಇಷ್ಟು ಉತ್ತಮವಾದ ಗ್ರಂಥಗಳು ಪ್ರಕಾಶಕ್ಕೆ ಬರುತ್ತಿರಲಿಲ್ಲ. ಅದು ಹೇಗಾದರೂ ಇರಲಿ; ಶ್ರೀಮಾನ್ ವೆಂಕಣ್ಣಯ್ಯನವರು ಜೀವಂತರಾಗಿದ್ದು, ಶ್ರೀಮಾನ್ ಶ್ರೀಕಂಠಯ್ಯನವರು ಅಧಿಕಾರದಲ್ಲಿದ್ದಾಗ, ವಿಶ್ವವಿದ್ಯಾನಿಲಯ ಮತ್ತು ವಿದ್ಯಾ ಇಲಾಖೆ ಇವುಗಳಿಗೆ ಸಂಬಂಧಪಟ್ಟ ಹಲವು ಕನ್ನಡ ಕೆಲಸಗಳನ್ನು ನಾವು ಮೂರು ಜನವೂ ಹಂಚಿಕೊಂಡು ಮಾಡುತ್ತಿದ್ದೆವು; ಆದರೆ ಈಗ ಅದೆಲ್ಲವೂ ನನ್ನ ಮೇಲೆ ಬಿತ್ತು; ಅದಷ್ಟೊ ದೊಡ್ಡ ಹೊರೆಯಾದ್ದರಿಂದ ವಿಶ್ವವಿದ್ಯಾನಿಲಯದ ಕೆಲಸವನ್ನು ಮುಖ್ಯವಾಗಿ ಇಟ್ಟುಕೊಂಡು ಮಿಕ್ಕದ್ದನ್ನು ಬಿಡಬೇಕಾಗಿ ಬಂತು; ಅದರಲ್ಲಿಯೂ ಗ್ರಂಥಪ್ರಕಾಶನ ಸಮಿತಿಯ ಅಧ್ಯಕ್ಷತೆ ಬಂದ ಮೇಲೆ, ಅದರ ಜೊತೆಗೆ ಪ್ರಬುದ್ಧ ಕರ್ಣಾಟಕವನ್ನು ನೋಡಿಕೊಳ್ಳುವುದು ಸಾಧ್ಯವಿಲ್ಲವೆಂದೂ ಈ ಕೆಲಸವನ್ನು ಮತ್ತಾರಿಗಾದರೂ ವಹಿಸಿಕೊಡಬೇಕೆಂದೂ ೭-೧೦-೧೯೪೨ ರಿಂದ ವಿಶ್ವವಿದ್ಯಾನಿಲಯದ ಅಧಿಕಾರಿಗಳೊಡನೆ ಪತ್ರವ್ಯವಹಾರ ನಡೆಸುತ್ತಿದ್ದೆ; ಅದು ಒಂದು ರೂಪಕ್ಕೆ ಬಂದು ತೀರ್ಮಾನವಾಗುವ ತನಕ ಎರಡು ಕೆಲಸಗಳನ್ನೂ ಮಿಕ್ಕ ಕಾರ್ಯಗಳ ಜೊತೆಗೆ ನಾನೇ ನಡಸುತ್ತಿದ್ದೆ; ಕೊನೆಗೆ (೨೩-೭-೧೯೪೩) ವಿಶ್ವವಿದ್ಯಾನಿಲಯವು ಮಹಾರಾಜರವರ ಕಾಲೇಜಿನಲ್ಲಿ ಕನ್ನಡದ ಅಸಿಸ್ಟೆಂಟ್ ಪ್ರೊಫೆಸರಾಗಿರುವವರು ಪ್ರಬುದ್ಧ ಕರ್ಣಾಟಕದ ಸಂಪಾದಕರಾಗಿರಬೇಕೆಂದು ಅಪ್ಪಣೆ ಮಾಡಿತು. ಕನ್ನಡ ಅಸಿಸ್ಟೆಂಟ್ ಪ್ರೊಫೆಸರಾಗಿ ಬಡ್ತಿಯಾಗಿ ಆಗತಾನೇ ಬೆಂಗಳೂರಿನಿಂದ ವರ್ಗಪಟ್ಟು ಬಂದಿದ್ದ ಶ್ರೀಮಾನ್ ವಿ. ಸೀತಾರಾಮಯ್ಯ, ಎಂ.ಎ., ಅವರು ಅದನ್ನು ವಹಿಸಿಕೊಳ್ಳಬೇಕಾಯಿತು;

ಅವರ ಸಂಪಾದಕತ್ವದಲ್ಲಿ ೨೫ ನೆಯ ಸಂಪುಟವು ಹಿಂದಿನಂತೆಯೇ ನಡೆದು ಬಂತು.

ಇಪ್ಪತ್ತೈದನೆಯ ವರ್ಷದಲ್ಲಿ ಸಂಪಾದಕ ಮಂಡಲಿ ಈ ರೀತಿ ಇತ್ತು—ಶ್ರೀಮಾನರಾದ ೧. ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ., (ಅಧ್ಯಕ್ಷರು), ೨. ವಿ. ಸೀತಾರಾಮಯ್ಯ, ಎಂ.ಎ., (ಸಂಪಾದಕರು), ೩. ಡಿ.ಎಲ್. ನರಸಿಂಹಾಚಾರ್, ಎಂ.ಎ., ೪. ಟಿ.ಎನ್. ಶ್ರೀಕಂಠಯ್ಯ, ಎಂ.ಎ., ೫. ಕೆ. ವಿ. ಪುಟ್ಟಪ್ಪ, ಎಂ.ಎ., ೬. ಎ. ಎನ್. ನರಸಿಂಹಯ್ಯ, ಎಂ.ಎ., ಪಿಎಚ್.ಡಿ., ೭. ಜಿ. ಹನುಮಂತರಾವ್, ಎಂ.ಎ., (ಕಾರ್ಯದರ್ಶಿಗಳು). ನನ್ನ ಸಂಪಾದಕತ್ವದ ಮತ್ತು ಅಧ್ಯಕ್ಷತೆಯ ಅವಧಿಯಲ್ಲಿ ನನಗೆ ನೆರವಾದ ನನ್ನ ಮಿತ್ರರೆಲ್ಲರಿಗೂ ಈ ಮೂಲಕ ನನ್ನ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಈಗ ಪ್ರಬುದ್ಧ ಕರ್ಣಾಟಕವು ೨೬ ನೆಯ ವರ್ಷವನ್ನೂ ದಾಟಿದೆ. ಆದರೆ ಈ ಸಂಪುಟದ ಪ್ರಸ್ತಾಪವನ್ನು ಪ್ರಬುದ್ಧಕರ್ಣಾಟಕದ ಚಿನ್ನದ ಸಂಚಿಕೆಗೆ ಬರೆಯುವ ಪುಣ್ಯವಂತರ ಪಾಲಿಗೆ ಬಿಟ್ಟು ನನ್ನ ಈ ಲೇಖನವನ್ನು ಇಲ್ಲಿಗೆ ಮುಗಿಸುತ್ತೇನೆ.

೧೯೪೫.

---

# ಕನ್ನಡ ಐತಿಹಾಸಿಕ ಕಾದಂಬರಿಗಳು

ಈಗ ಇಂಡಿಯ ದೇಶದಲ್ಲಿ ಪ್ರಚಲಿತವಾಗಿರುವ ಇಂಗ್ಲಿಷ್ ವಿದ್ಯಾಭ್ಯಾಸದ ಫಲವನ್ನು ಕುರಿತು ಹಲವು ಜನರು ಹಲವು ವಿಧವಾಗಿ ಹೇಳುತ್ತಿರುವರು. ಕೆಲವರು ಐಶ್ವರ್ಯ ಭೋಗಲೋಲುಪರಾದ ಇಂಗ್ಲಿಷರ ಅಭಿಪ್ರಾಯಗಳೇ ಪ್ರಬಲವಾಗಿ, ಅನಾದಿಯಾಗಿ ಬಂದ ಧರ್ಮಮೂಲವಾದ ನಮ್ಮ ಆರ್ಯ ನಾಗರಿಕತೆಯು ಮುರಿದು ಬೀಳುತ್ತಿರುವುದೆನ್ನುವರು. ಮತ್ತೆ ಕೆಲವರು ಜನರಲ್ಲಿದ್ದ ಮೌಢ್ಯಮೂಢಾಚಾರಗಳು ಹೋಗಿ ಅಜ್ಞಾನಾಂಧಕಾರವು ತೊಲಗಿ ಜ್ಞಾನಸೂರ್ಯನು ಉದಯಿಸಿ ದೇಶವು ಬೆಳಗುವಂತಾಯಿತೆನ್ನುವರು. ಇನ್ನು ಕೆಲವರು ಇದರಿಂದ ನಮ್ಮಲ್ಲಿ ಧೈರ್ಯ ಶೌರ್ಯಾದಿಗುಣಗಳು ಅಣಗಿ ಹೋಗಿ ಗುಮಾಸ್ತೆಯ ಕೆಲಸಕ್ಕೆ ಹೊರತು ಮತ್ತಾವುದಕ್ಕೂ ನಮಗೆ ಯೋಗ್ಯತೆ ಇಲ್ಲದಂತಾಯಿತೆನ್ನುವರು. ಇವರ ಅಭಿಪ್ರಾಯಗಳು ಹೇಗೇ ಇರಲಿ ನಿಷ್ಪಕ್ಷಪಾತವಾಗಿ ಸಾಹಿತ್ಯ ದೃಷ್ಟಿಯಿಂದ ನೋಡಿದರೆ ಇಂಗ್ಲಿಷಿನಿಂದ ನಮಗೆ ತುಂಬ ಉಪಕಾರವಾಗಿರುವುದರಲ್ಲಿ ಸಂದೇಹವಿಲ್ಲ. ಈ ಸರ್ವವ್ಯಾಪಿಯಾದ ಇಂಗ್ಲಿಷ್ ಭಾಷೆಯಿಂದ ಪ್ರಪಂಚದಲ್ಲಿರುವ ಸರ್ವೋತ್ತಮವಾದ ಗ್ರಂಥಗಳೂ ಅಭಿಪ್ರಾಯಗಳೂ ("The best that has been thought and said in the world") ನಮಗೆ ಗೋಚರವಾದುವು. ಈ ಇಂಗ್ಲಿಷ್ ಭಾಷೆಯಲ್ಲಿ ಸ್ವಂತವಾಗಿ ಹುಟ್ಟಿದ ಮತ್ತು ಇತರ ಭಾಷೆಗಳಿಂದ ಅನುವಾದಿತಗಳಾದ ಗ್ರಂಥಗಳ ವಿಸ್ತಾರವಾದ ಭಂಡಾರವನ್ನು ನೋಡಿದ ಕೂಡಲೆ ರಮಣೀಯವೂ ಆಶ್ಚರ್ಯಕರವೂ ಆದ ವಿಚಿತ್ರ ವಸ್ತುಸಂಗ್ರಹ ಶಾಲೆಯೊಳಗೆ ಪ್ರವೇಶಮಾಡಿದಂತಾಗುವುದು. ಜ್ಞಾನಾರ್ಜನೆಯಲ್ಲಿ ಇನ್ನೂ ಬಾಲಕರಂತಿರುವ ನಾವು ಈ ಪ್ರಾಸಾದವನ್ನು ಪ್ರವೇಶಿಸಿದ ಒಡನೆಯೇ ಬಾಲಕರಂತೆ ಅವುಗಳ ಸೌಂದರ್ಯದಿಂದ ಮುಗ್ಧರಾಗಿ ಎಲ್ಲಕ್ಕೂ ಕೈಹಾಕುವೆವು. ಆದರೆ ನಮ್ಮ ಕೈಗಳು ಎಷ್ಟನ್ನು ತೆಗೆದು ಹಿಡಿದುಕೊಳ್ಳಬಲ್ಲವು ?

ಕಾದಂಬರಿಯು ಹೀಗೆ ಈ ಸಾಹಿತ್ಯಭಂಡಾರದಿಂದ ಮೆಚ್ಚಿ ತಂದ ಒಂದು ಸುಖಸಂತೋಷದಾಯಕವಾದ ವಸ್ತುವಾಗಿದೆ. ಇದು ಒಂದು ಆಧುನಿಕ ಸಾಹಿತ್ಯ ವಿಶೇಷ. ಇದು ಇಂಗ್ಲೆಂಡ್ ದೇಶದಲ್ಲಿ ಹುಟ್ಟಿ ಬೆಳೆದು, ಕ್ರಮೇಣ ಪ್ರಕೃತ ಸ್ವರೂಪವನ್ನು ಹೇಗೆ ಧಾರಣೆಮಾಡಿತೆಂದೂ ಅದರಲ್ಲಿ ಯಾವ ಯಾವ ಜಾತಿಗಳಿರುವುವೆಂದೂ ಅವುಗಳ ಲಕ್ಷಣವೇನೆಂದೂ ಇಲ್ಲಿ ನಾವು ವಿಚಾರಮಾಡುವುದು ಅನಾವಶ್ಯಕ. ಈ ಸಾಹಿತ್ಯ ವಿಶೇಷವನ್ನು ಕನ್ನಡದಲ್ಲಿ ಪ್ರಚಾರಕ್ಕೆ ತಂದವರು ಮ|| ವೆಂಕಟಾಚಾರ್ಯರು. ಇವರು ಬಂಕಿಂಚಂದ್ರ ಚಟ್ಟೋಪಾಧ್ಯಾಯರೇ ಮುಂತಾದ ಬಂಗಾಳಾ ದೇಶದ ಪ್ರಸಿದ್ಧ ಕಾದಂಬರೀ ಲೇಖಕರ ಗ್ರಂಥಗಳನ್ನು ಭಾಷಾಂತರಮಾಡಿದರು. ನಮ್ಮ ಕಡೆ (ಮೈಸೂರು ಪ್ರಾಂತದಲ್ಲಿ) ಇಷ್ಟು ಪ್ರಸಿದ್ಧರಲ್ಲದಿದ್ದರೂ ಅಷ್ಟೇ ಪ್ರಸಿದ್ಧಿಗೆ ಯೋಗ್ಯರಾದವರು ಮತ್ತೊಬ್ಬರು ಇದ್ದಾರೆ. ಇವರು ಮ|| ವೆಂಕಟೇಶ ತಿರಕೋ ಕುಲಕರ್ಣಿ (ಗಳಗನಾಥರು) ಎಂಬವರು. ಇವರು ಸ್ವತಂತ್ರವಾಗಿ ಕೆಲವು ಗ್ರಂಥಗಳನ್ನು ಬರೆದಿದ್ದರೂ, ಇವರು ಭಾಷಾಂತರ ಮಾಡಿರುವ ಗ್ರಂಥಗಳ ಬೆಲೆಯು ಅವಕ್ಕೆ ಎಂದಿಗೂ ಬರಲಾರದು. ಈ ಭಾಷಾಂತರಗಳೆಲ್ಲವೂ ಮುಖ್ಯವಾಗಿ ಬಂಕಿಂಚಂದ್ರರಷ್ಟೇ ಸಮರ್ಥರೂ ಪ್ರಸಿದ್ಧರೂ ಆದ ಮ|| ಹರಿನಾರಾಯಣ ಆಪಟೆಯವರ ಕಾದಂಬರಿಗಳಾಗಿವೆ. ಆಪಟೆಯವರು * ತಮ್ಮ ಭಾಷೆಯಲ್ಲಿ ಇನ್ನೂ ಯಾವ ಯಾವ ಬಗೆಯ ಗ್ರಂಥಗಳನ್ನು ಬರೆದಿದ್ದಾರೋ ನನಗೆ ತಿಳಿಯದು; ಅವರ ಗ್ರಂಥಗಳ ಭಾಷಾಂತರಗಳು ಅಥವಾ ಅವರ ಗ್ರಂಥಗಳ ಆಧಾರದ ಮೇಲೆ ಬರೆದವುಗಳು ಎಂದು ಇದುವರೆಗೆ ನಾನು ಓದಿರುವ ಗ್ರಂಥಗಳೆಲ್ಲ ಐತಿಹಾಸಿಕ ಕಾದಂಬರಿಗಳಾಗಿವೆ. ಬಂಕಿಂ

---

* ರಾ|| ರಾ|| ಆಪಟೆಯವರು ೩-೩-೧೯ ರಲ್ಲಿ ಸ್ವರ್ಗಸ್ಥರಾದರೆಂದು ತಿಳಿಸಲು ವಿಷಾದಪಡುತ್ತೇವೆ. "ಹರಿಭಾವುಗಳವರ (ಆಪಟೆಯವರ) ಮೃತ್ಯುವಿನಿಂದ ಮರಾಠಿ ಭಾಷೆಯೊಳಗಣ ಒಬ್ಬ ಅತ್ಯಂತ ನಾಮಾಂಕಿತ ಗ್ರಂಥಕಾರನೂ ಮಹಾರಾಷ್ಟ್ರದೊಳಗಿನ ಒಬ್ಬ ಮನಃಪೂರ್ವಕವಾಗಿ ಕೆಲಸ ಮಾಡುವ ಮುಖಂಡನೂ ಇಲ್ಲವಾಗಿರುವನು. ಅವನ ಸ್ಥಾನವು ತುಂಬಿಬರುವುದು ಕಠಿಣವಾಗಿದೆ." ಕೇಸರೀ—೪-೩-೧೯.

ಚಂದ್ರರು ಐತಿಹಾಸಿಕ, ಸಾಮಾಜಿಕ, ಮುಂತಾದ ವಿಧವಿಧವಾದ ಕಾದಂಬರಿಗಳನ್ನೂ "ಲೋಕರಹಸ್ಯ" ಮುಂತಾದ ವಿಡಂಬನಗಳನ್ನೂ (satires) ಶ್ರೀ ಕೃಷ್ಣಚರಿತೆ ಮುಂತಾದ ಇನ್ನೂ ಹಲವು ಗದ್ಯ ಗ್ರಂಥಗಳನ್ನೂ ಬರೆದಿದ್ದಾರೆ. ಈ ಇಬ್ಬರು ಮಹನೀಯರು ಬರೆದ ಐತಿಹಾಸಿಕ ಕಾದಂಬರಿಗಳ ಕನ್ನಡ ಭಾಷಾಂತರಗಳನ್ನೂ ಈಚೆಗೆ ನಮ್ಮವರು ಸ್ವಂತವಾಗಿ ಬರೆದಿರುವ ಒಂದೆರಡು ಗ್ರಂಥಗಳನ್ನೂ * ಕನ್ನಡ ಐತಿಹಾಸಿಕ ಕಾದಂಬರಿಗಳೆಂದು ಕರೆದಿದ್ದೇನೆ.

"ಸ್ವತಂತ್ರ ಗ್ರಂಥಗಳಿಂದಲೇ ಭಾಷಾ ಸಾಹಿತ್ಯಗಳಿಗೆ ಗೌರವ; ಕನ್ನಡದಲ್ಲಿ ಸ್ವತಂತ್ರವಾಗಿ ಬರೆದ ಕಾವ್ಯಗಳೇ ನಿಜವಾದ ಕನ್ನಡ ಸಾಹಿತ್ಯ" ಎಂದು ಹೇಳುತ್ತ ಕೆಲವರು ಭಾಷಾಂತರ ಮಾಡಿದ ಗ್ರಂಥಗಳನ್ನು ಅಲ್ಲಗಳೆದು ಕನ್ನಡ ಸಾಹಿತ್ಯ ಮಂದಿರಕ್ಕೆ ಅವನ್ನು ಬರಗೊಡಿಸರು. ಈ ವಿಚಾರದಲ್ಲಿ ನನ್ನ ಅಭಿಪ್ರಾಯವೇನೆಂದರೆ, ಕನ್ನಡ ಭಾಷೆಯಲ್ಲಿ ಬರೆದಿರುವವು ಕನ್ನಡ ಗ್ರಂಥಗಳೇ ಹೊರತು ಅನ್ಯ ಭಾಷೆಯ ಗ್ರಂಥಗಳೆಂದಿಗೂ ಆಗಲಾರವು. ಅನ್ಯಭಾಷೆಯಿಂದ ತರ್ಜುಮೆ ಮಾಡಿದ ಗ್ರಂಥಗಳನ್ನು ನಮ್ಮ ಕಾವ್ಯಮಾಲೆಗೆ ಸೇರಿಸಿ ನಮ್ಮ ಸಾಹಿತ್ಯವನ್ನು ಅಭಿವೃದ್ಧಿಗೊಳಿಸಿಕೊಳ್ಳುವುದೆಂದರೆ, ಪರರ ಮನೆಯ ಹೆಣ್ಣುಗಳನ್ನು ತಂದು ನಮ್ಮ ಮಕ್ಕಳಿಗೆ ಮದುವೆ ಮಾಡಿಕೊಳ್ಳುವ ಹಾಗೆ; ಆ ಹುಡುಗಿಯರು ಗಂಡನ ಮನೆಯಲ್ಲಿ ಬಾಳುತ್ತಿರುವವರೆಗೂ, ಎರಡು ಕಡೆಗೂ ಸಂಬಂಧಪಟ್ಟಿರುವರು. ಅವರಿಗೂ ಹಾಗೆಯೇ ಎರಡು ಕಡೆಗೂ ಮೋಹವು ಹತ್ತಿ ಎಳೆಯುತ್ತಿರುವುದು. ಆದರೂ ತೌರುಮನೆಯ ಸಂಬಂಧವು ಕ್ರಮೇಣ ಕಡಮೆಯಾಗುತ್ತಲೂ, ಆ ಕಡೆಯ ಪ್ರೇಮಬಂಧವು ಸಡಿಲುತ್ತಲೂ, ಗಂಡನ ಮನೆಯ ಮೇಲಣ ಅಭಿಮಾನವು

---

* ಗಳಗನಾಥರ—ಕುಮುದಿನೀ, ಪುಟ್ಟಣ್ಣನವರ— ಮಾಡಿದ್ದುಣ್ಣೋ ಮಹಾರಾಯ, ವಾಸುದೇವಾಚಾರ್ಯರ—ಯದುಮಹಾರಾಜ ಚರಿತ್ರ ಇವುಗಳ ವಿಚಾರವನ್ನು ಕುರಿತು "ಮೈಸೂರು ಚರಿತ್ರೆಯ ಮೇಲಣ ಕಾದಂಬರಿಗಳು" ಎಂಬ ಮುಂದಿನ ಉಪನ್ಯಾಸದಲ್ಲಿ ಪ್ರಸ್ತಾಪಿಸುತ್ತೇನೆ.

ಹೆಚ್ಚುತ್ತಲೂ ಹೋಗುವುದು. ಮುಂದೆ ಹೊರಗಿನಿಂದ ಬಂದ ಹುಡುಗಿಯೇ ಕುಲೋದ್ಧಾರಕರಾದ ಪುತ್ರರನ್ನು ಪಡೆದು ದಿನ ದಿನಕ್ಕೂ ಶಾಖೋಪಶಾಖೆಗಳಾಗಿ ಬೆಳೆಯುತ್ತ ಹೋಗುವ ಪತಿಯ ವಂಶವೃಕ್ಷಕ್ಕೆ ತಾಯಿಬೇರಾಗುವಳು. ಈ ಮಧ್ಯೆ ಹೆಣ್ಣು ಕೊಟ್ಟವರು ತಂದವರು ಮಾತ್ರ ಬೀಗರೆಂಬ ಭಾವದಿಂದ ಎಂದಿಗೂ ಪೂರ್ತಿಯಾಗಿ ಒಂದಾಗದೆ ಸ್ವಲ್ಪ ಸ್ತಬ್ಧರಾಗಿ ದೂರ ದೂರವಾಗಿಯೇ ಇದ್ದು, ಗೌರವ, ಮರ್ಯಾದೆ, ಔತನ, ಉಡುಗೊರೆ ಇದರಲ್ಲಿ ಪರಿತೃಪ್ತರಾಗಿದ್ದು ಬಿಡುವರು. "ಸ್ತ್ರೀರತ್ನಂ ದುಷ್ಕುಲಾದಪಿ" ಎಂದು ಹೇಳಿರುವ ಹಾಗೆ ಕಾವ್ಯರತ್ನಗಳನ್ನೂ—ಎಲ್ಲಿದ್ದರೂ ಸರಿಯೆ—ತಂದು ನಮ್ಮ ಮನೆಗೆ ಸೇರಿಸಿಕೊಂಡರೆ ಅವುಗಳಿಂದ ಎಂದಿದ್ದರೂ ಶ್ರೇಯಸ್ಸೇ ಹೊರತು ಹೀನತೆಯಾಗಲಿ ಕೊರತೆಯಾಗಲಿ ಉಂಟಾಗಲಾರದು. ಇದರಿಂದ ಸ್ವತಂತ್ರ ಗ್ರಂಥಗಳಿಗೆ ಬರತಕ್ಕ ಗೌರವವನ್ನು ನಾನು ಅರಿಯೆನೆಂದಾಗಲಿ ಮರೆತಿರುವೆನೆಂದಾಗಲಿ ಭಾವಿಸಬಾರದು. ತರ್ಜುಮೆಯು ಮನೆಗೆ ಬಂದ ಸೊಸೆಯಂತಿದ್ದರೆ ಇವು ಹೊಟ್ಟೆಯಲ್ಲಿ ಹುಟ್ಟಿದ ಪುತ್ರರಂತಿರುವುವು. ಮುಂದೆ ಮನೆಯ ಹೆಸರು ಹೇಳುವುದು ಗಂಡುಸಂತತಿಯಿಂದಲೇ ಹೊರತು ಅಪುತ್ರಿಯರೂ ವಿಧವೆಯರೂ ಆಗಬಹುದಾದ ಸೊಸೆಯರಿಂದಲ್ಲ. ಈಗ ನಮ್ಮ ಕನ್ನಡ ಮಾತೆಯು ತನ್ನ ಮನೆಗೆ ತಂದಿರುವ ಹೆಣ್ಣುಗಳಲ್ಲಿ ಅಮಂಗಳಕರವಾದ ಸೂಚನೆಗಳು ಯಾವುವೂ ಇಲ್ಲವೆಂದೂ ಅವು ಸ್ತ್ರೀರತ್ನಗಳೆಂದೂ ಕನ್ನಡ ಮಾತೆಯು ತನ್ನ ಪುತ್ರರನ್ನು ಮಾತ್ರ ಆರೋಗ್ಯವಂತರೂ ದೃಢಕಾಯರೂ ಆಗುವಂತೆ ಸಾಕಿ, ಅವರಲ್ಲಿ ಮನೆಯ ಮೇಲೆ ಅಭಿಮಾನವನ್ನೂ ಮಮತೆಯನ್ನೂ ಹುಟ್ಟಿಸಿ, ಕರ್ತವ್ಯ ತತ್ಪರರನ್ನಾಗಿ ಮಾಡಿದರೆ ಮುಂದೆ ಈ ಸತಿಸುತರ ಹೊಟ್ಟೆಯಲ್ಲಿಯೇ ಪುತ್ರರತ್ನಗಳು ಹುಟ್ಟಿ ದೇಶವನ್ನು ಬೆಳಗಬಹುದೆಂದೂ ಧೈರ್ಯವಾಗಿ ಹೇಳುವೆನು.

ಅಂತು ಈಗ ಕನ್ನಡದಲ್ಲಿರತಕ್ಕ ಐತಿಹಾಸಿಕ ಕಾದಂಬರಿಗಳಲ್ಲಿ ಸ್ವಲ್ಪ ಹೆಚ್ಚು ಕಡಮೆ ಎಲ್ಲಾ ಭಾಷಾಂತರಗಳೇ. ಅವುಗಳಲ್ಲಿ

**ವೆಂಕಟಾಚಾರ್ಯರಿಂದ**—ಅಮೃತಪುಳಿನ (ನನಿಲಾಲವಂದ್ಯೋ

ಪಾಧ್ಯಾಯ ಕೃತ) ಆನಂದಮಠ, ರಾಜಸಿಂಹ, ದುರ್ಗೇಶನಂದಿನಿ, ಕೋಹಿನೂರು.

**ಗಳಗನಾಥರವರಿಂದ**—ವೈಭವ, ಕ್ಷಾತ್ರತೇಜ, ಧರ್ಮರಹಸ್ಯ, ತಿಲೋತ್ತಮೆ, ಕನ್ನಡಿಗರ ಕರ್ಮಕಥೆ, ಕುಮುದಿನೀ, ಈಶ್ವರೀಸೂತ್ರ, ಮರಾಟರ ಅಭ್ಯುದಯ, ಕಮಲಕುಮಾರಿ, ಶಿವಪ್ರಭುವಿನ ಪುಣ್ಯ, ಮೃಣಾಳಿನೀ.

* **ಗುಡಿಸಾಗರ** ಮತ್ತು **ಬೇಂದ್ರೆ** ಇವರಿಂದ—ಅದ್ಭುತ ಶೌರ್ಯ.

ಇವೇ ಮುಖ್ಯವಾದುವುಗಳು. ಇವುಗಳಲ್ಲಿ ಆನಂದಮಠವು ಶುದ್ಧವಾಗಿ ಬಂಗಾಳಾ ದೇಶದ ಚರಿತ್ರೆಗೆ ಸಂಬಂಧಪಟ್ಟದ್ದು ; "ವೈಭವ" ವು ಚಂದ್ರಗುಪ್ತ ಚಾಣಕ್ಯ ನವನಂದರ ವಿಚಾರವಾದದ್ದು. "ಕರ್ಮಕಥೆ" "ಕುಮುದಿನೀ"; ಇವೆರಡೂ ವಿಜಯನಗರದ ಚರಿತ್ರೆಯ ವಿಚಾರವಾದವು. "ಈಶ್ವರೀಸೂತ್ರ" "ಮರಾಟರ ಅಭ್ಯುದಯ" "ಶಿವಪ್ರಭುವಿನ ಪುಣ್ಯ" (ಛತ್ರಪತಿ) ಇವೆಲ್ಲವೂ ಮರಾಟರ ಚರಿತ್ರೆಗೆ ಸಂಬಂಧಪಟ್ಟವು. ಉಳಿದವು ರಾಜಪುತ್ರರ ವಿಚಾರವಾದುವು. ಇವುಗಳಲ್ಲಿ ಮೊಗಲರೂ ಪಠಾಣರೂ ಬಂದರೂ ಅವರ ಆಟ ನಡೆಯದೆ ರಾಜಪುತ್ರರ ಶೌರ್ಯವೇ ಪ್ರಾಮುಖ್ಯತೆಯನ್ನು ಹೊಂದಿ ಕಣ್ಣಿಗೆ ಕಟ್ಟಿದಂತಾಗುವುದರಿಂದ ಇವು ರಾಜಪುತ್ರರ ವಿಚಾರವಾದವೆಂದು ಹೇಳಿದರೆ ತಪ್ಪಾಗಲಾರದು.

ಈ ಗ್ರಂಥಗಳಲ್ಲಿ ಒಂದೊಂದನ್ನೂ ಕುರಿತು ಪ್ರತ್ಯೇಕವಾಗಿ ವಿಮರ್ಶೆ ಮಾಡುತ್ತ ಹೋದರೆ ಒಂದು ಬೇರೆ ಪುಸ್ತಕವೇ ಆಗುವುದು. ಆದ್ದರಿಂದ ಆ ಕೆಲಸಕ್ಕೆ ಕೈಹಾಕದೆ ಈ ಗ್ರಂಥಕರ್ತರಲ್ಲಿರತಕ್ಕ ಕೆಲವು ವೈಲಕ್ಷಣ್ಯ ಗಳು, ಅವರ ಗ್ರಂಥಗಳಿಗೆಲ್ಲ ಸಾಮಾನ್ಯವಾಗಿರತಕ್ಕ ಕೆಲವು ಗುಣಗಳು, ಅವುಗಳನ್ನು ಓದುವುದರಿಂದ ನಾವು ಪಡೆಯಬಹುದಾದ ಲಾಭಗಳು ಇವುಗಳನ್ನು ಮುಂದೆ ಸಂಕ್ಷೇಪವಾಗಿ ಸೂಚಿಸುತ್ತೇನೆ.

ಬಂಕಿಂಚಂದ್ರರನ್ನು ಇಂಡಿಯಾ ದೇಶದ "ಸರ್ ವಾಲ್ಟರ್ ಸ್ಕಾಟ್" ರವರೆಂದು ಹೇಳಬಹುದು. ಸರ್ ವಾಲ್ಟರ್ ಸ್ಕಾಟ್‌ರವರು

---

* ಈಚೆಗೆ "ಛತ್ರಪತಿ" ಎಂಬ ಇನ್ನೊಂದು ಗ್ರಂಥ ಬಂದಿದೆ.

ಷೇಕ್ಸ್‌ಪಿಯರಿನ ನಾಟಕಗಳನ್ನು ಚೆನ್ನಾಗಿ ವ್ಯಾಸಂಗ ಮಾಡಿ ಕೆಲವು ವಿಷಯಗಳಲ್ಲಿ ಆ ಮಹಾ ಕವಿಯ ಪದ್ಧತಿಯನ್ನು ಮೆಚ್ಚಿ ಅದನ್ನೇ ತಮ್ಮ ಕಾದಂಬರಿಗಳಲ್ಲಿ ಅನುಸರಿಸಿರುವಂತೆ ತೋರುತ್ತದೆ. ಇವುಗಳಲ್ಲಿ ವೀರ ಅಥವಾ ಕರುಣರಸ ಪ್ರಧಾನವಾದ ನಾಟಕಗಳಲ್ಲಿ ಸಮಯೋಚಿತ ವಾಗಿ ಮೃದುಮಧುರವಾದ ಹಾಸ್ಯಶೃಂಗಾರ ರಸಗಳನ್ನು ಜೋಡಿಸು ವುದು ಒಂದು. ಇದರಿಂದ ವೀರ ಕರುಣಾದಿ ರಸಗಳ ಗಾಂಭೀ ರ್ಯವೂ ಬಿಗಿಯೂ ಸಡಿಲಿ ಸಪ್ಪೆಯಾಗಿ ಆಭಾಸವಾಗುವುದೆಂದೂ ಇಂಥ ನಾಟಕಗಳೇ ಆಗಲಿ ಕಾದಂಬರಿಗಳೇ ಆಗಲಿ (ಕಾದಂಬರಿಯು ಗದ್ಯ ರೂಪವಾದ ನಾಟಕ ತಾನೆ!) ಗ್ರೀಕ್ ಸಾಹಿತ್ಯದ ವಿಷಾದ ನಾಟಕಗಳ ಮಾದರಿಯನ್ನು ಅನುಸರಿಸಬೇಕೆಂದೂ ಕೆಲವರು ಹೇಳುವರು. ಮತ್ತೆ ಕೆಲವರು ಶೋಕಸಂತೋಷಮಯವಾದ ಈ ಪ್ರಪಂಚವನ್ನು ಯಥಾವತ್ತಾಗಿ ಚಿತ್ರಿಸಿ ನೋಟಕಪಾಠಕರಲ್ಲಿ ನಿಜತ್ವ ಭ್ರಾಂತಿಯನ್ನುಂಟುಮಾಡುವುದಕ್ಕೇ ಹೊರಟಿರುವ ಕವಿಯಲ್ಲಿ ಇವುಗ ಳನ್ನು ಯಥೋಚಿತವಾಗಿ ಉಪಯೋಗಿಸತಕ್ಕ ಶಕ್ತಿಯು ಅವನ ಸಾಮರ್ಥ್ಯವನ್ನು ತೋರಿಸುತ್ತದೆಯೆಂದೂ ಆದಕ್ಕೋಸ್ಕರವೇ ಷೇಕ್ಸ್ ಪಿಯರ್ ಅಷ್ಟು ಲೋಕೋತ್ತರನಾದ ಕವಿಯೆಂದೂ ಹೇಳುವರು. ತನ್ನ ತನ್ನ ಕರ್ತವ್ಯವನ್ನು ಮಾಡಿದರೆ ಸಂನ್ಯಾಸಿಯೂ ಗೃಹಸ್ಥನೂ ಇಬ್ಬರೂ ಗಣ್ಯರಾಗುವಂತೆ, ಕಲಾಕೌಶಲ್ಯದ ಮೇಲೆಯೇ ದೃಷ್ಟಿಯಿಟ್ಟು ಸಮರ್ಥ ನಾದ ಕವಿಪುಂಗವನು ಗ್ರಂಥವನ್ನು ಬರೆದರೆ, ಇವುಗಳಲ್ಲಿ ಯಾವ ಪದ್ಧತಿಯನ್ನು ಅನುಸರಿಸಿದರೂ ಬಾಧಕವಿಲ್ಲ. ಗ್ರೀಕ್‌ನಾಟಕಗಳೂ ಉತ್ತಮವಾದ ಕಾವ್ಯಗಳೇ, ಷೇಕ್ಸ್‌ಪಿಯರಿನ ನಾಟಕಗಳೂ ಉತ್ತಮ ವಾದ ಕಾವ್ಯಗಳೇ! ಬಂಕಿಂಚಂದ್ರರು ಮತ್ತು ಆಪಟೆಯವರು ಇದಕ್ಕೆ ಉದಾಹರಣೆ; ಬಂಕಿಂಚಂದ್ರರ ಗ್ರಂಥಗಳಲ್ಲಿ ಶೃಂಗಾರ ಮಿಶ್ರವಲ್ಲದ ಶುದ್ಧ ವೀರರಸವನ್ನು ಚಿತ್ರಿಸಿದ ಕಾದಂಬರಿಯೇ ಇಲ್ಲವೆಂದು ಹೇಳ ಬಹುದು. ಆದರೂ ಅವು ವಜ್ರ ಕೆಂಪು ಕೆತ್ತಿದ ಆಭರಣಗಳಂತೆ ಹೊಂದಿ ಕೊಂಡು ಸುಂದರವಾಗಿಯೇ ಇವೆ. ಕೆಲವು ವೇಳೆ ಮಾತ್ರ ಹಾಸ್ಯರಸವು ಪ್ರವೇಶಮಾಡಿ ಮಿತಿಮೀರಿ ಉಕ್ಕಿ ಸುರಿದು ಮಿಕ್ಕೆರಡು ರಸಗಳ ಬಣ್ಣ

ವನ್ನು ಕೆಡಿಸಿಬಿಡುವುದು. ದುರ್ಗೇಶನಂದಿನಿಯಲ್ಲಿ ಬರುವ ವಿದ್ಯಾ ದಿಗ್ಗಜನನ್ನೂ ಮೃಣಾಳಿನಿಯಲ್ಲಿ ಬರುವ ಅವನ ಸಹೋದರನಾದ ದಿಗ್ವಿಜಯನನ್ನೂ ಇದಕ್ಕೆ ಉದಾಹರಣೆಯಾಗಿ ಕೊಡಬಹುದು. (ಈ ದೋಷವು ಸರ್ ವಾಲ್ಟರ್ ಸ್ಕಾಟರವರಲ್ಲಿಯೂ ಇಲ್ಲದೆ ಇಲ್ಲ. ಅವರ Bride of Lammermoorನಲ್ಲಿ ಬರತಕ್ಕ Caleb Balder stone ಎಂಬ ವೃದ್ಧ ಸೇವಕನೂ ಸ್ವಲ್ಪ ಈ ಜಾತಿಯವನೇ ಎಂದು ಹೇಳಬೇಕಾಗುತ್ತದೆ.) ಇದಕ್ಕೆ ಬಹಳಮಟ್ಟಿಗೆ ಬಂಕಿಂಚಂದ್ರರ ಸಂತೋಷಚಿತ್ತತೆಯುಳ್ಳ ಸ್ವಭಾವವೇ ಕಾರಣವೆಂದು ತೋರುತ್ತದೆ. ಅವರು ಒಂದು ದಿನ ಪ್ರಸಿದ್ಧರಾದ ರಾಮಕೃಷ್ಣಪರಮಹಂಸರನ್ನು ದರ್ಶನ ಮಾಡಿಕೊಂಡು ಬರುವುದಕ್ಕೆ ಹೋಗಿರಲು ಪರಮಹಂಸರು ಬಂಕಿಂಚಂದ್ರರನ್ನು ಕುರಿತು "ಜೀವನದ ಉದ್ದೇಶವೇನೆಂದು ನಿಮ್ಮ ಅಭಿಪ್ರಾಯ?" ಎಂದು ಕೇಳಿದರಂತೆ. ಅದಕ್ಕೆ ಅವರು "ಉದ್ದೇಶ ವೇನು! ತಿನ್ನುವುದು, ಕುಡಿಯುವುದು, ಸುಖಪಡುವುದು, ಇದು ತಾನೆ!" ಎಂದರಂತೆ. ಪರಮಹಂಸರು ಸ್ವಲ್ಪ ಬೇಸರಪಟ್ಟುಕೊಂಡು "ನಿಮ್ಮ ನಿಮ್ಮ ಮನಸ್ಸಿನಲ್ಲಿರುವುದನ್ನು ತಾನೆ ನೀವು ಹೇಳೀರಿ! ಮೂಲಂಗಿಯನ್ನು ತಿಂದವನು ತೇಗಿದರೆ ಮೂಲಂಗಿಯ ವಾಸನೆಯೇ ಬರುತ್ತದೆ; ಸೌತೆಕಾಯಿ ತಿಂದವನು ತೇಗಿದರೆ ಸೌತೆಕಾಯಿಯ ವಾಸನೆಯೇ ಬರುತ್ತದೆ" ಎಂದು ಹೇಳಿದರಂತೆ. ಇಂಥ ಅಭಿಪ್ರಾಯಗಳನ್ನಿಟ್ಟು ಕೊಂಡಿದ್ದು ಮದ್ಯಪಾನ ಸ್ತ್ರೀಲೋಲತೆ ಇವುಗಳಲ್ಲಿ ಆಸಕ್ತಿಯನ್ನು ತೋರ್ಪಡಿಸುತ್ತ ಇದ್ದವರು ಶೃಂಗಾರವನ್ನು ಮರೆಯುವುದೆಂದರೆ ಹೇಗೆ? ಇದರಿಂದ ಅವರ ವೀರರಸ ವರ್ಣನೆಗೆ ಕುಂದುಂಟಾಗುವುದೆಂದು ತಿಳಿಯ ಬಾರದು. ಸರ್ವತೋಮುಖವಾದ ಇವರ ಶಕ್ತಿಯು ಯಾವ ಯಾವ ಕಡೆಗೆಂದರೆ ಆ ಕಡೆ ತಿರುಗಿ ಅವರನ್ನು ತನ್ಮಯರನ್ನಾಗಿ ಮಾಡಿ, ಅತ್ಯಾಶ್ಚರ್ಯಕರವಾದ ಕೆಲಸಗಳನ್ನು ಮಾಡಿಸಿಬಿಡುವುದು. ಬಂಕಿಂ ಚಂದ್ರರನ್ನು ಅವರ ವಿಷಯಾಸಕ್ತಿಗಾಗಿ ಬಯ್ಯುವುದು ಸುಲಭ; ವಿಷಯಾಸಕ್ತಿಯೂ ಕೆಟ್ಟದ್ದೇ ನಿಜ; ಕಾಳಿದಾಸನೂ ವಿಷಯಾಸಕ್ತ ನಾಗಿದ್ದನೆಂದೂ ಅವನು ಸರ್ವದಾ ವೇಶ್ಯೆಯ ಮನೆಯಲ್ಲಿಯೇ ಇರು

ತ್ತಿದ್ದನೆಂದೂ ಹೇಳುತ್ತಾರೆ. ಆದರೆ ವಿಷಯಾಸಕ್ತರಾಗಿದ್ದ ಕಾಳಿದಾಸ ಬಂಕಿಂಚಂದ್ರರಂಥವರು ಇಷ್ಟು ಮನೋಹರವಾದ, ಆನಂದವು ತೊಟ್ಟಿಕ್ಕುವಂಥ ವರ್ಣನೆಗಳನ್ನು ಬರೆದುಕೊಟ್ಟರೆ, ಗ್ರಂಥಗಳನ್ನು ಬರೆದರೆ, ಅವರನ್ನು ಕೆಟ್ಟವರೆಂದು ಯಾರು ಹೇಳಬೇಕು? ವಿಷಯಾಸಕ್ತಿ ಇಲ್ಲದೆ, ಶೃಂಗಾರದಲ್ಲಿ ಅನುಭವವಿಲ್ಲದೆ, ಪ್ರಮೋದಾಗಾರ ಯುವಕ ಯುವತಿಯರ ಪ್ರೇಮ ಸರಸಸಲ್ಲಾಪ ಶಯ್ಯಾಗೃಹ ಮುಂತಾದವುಗಳನ್ನೆಲ್ಲ ವರ್ಣನೆ ಮಾಡುವುದು ಹೇಗೆ? ಇಂಥವರು ಮಾಡದೆ ಕಾಳಿದಾಸನು ಇಂತಹದೇ ಬೇರೊಂದು ಸಂದರ್ಭದಲ್ಲಿ ಹೇಳಿರುವಂತೆ

" ವೇದಾಭ್ಯಾಸಜಡಃ ಕಥಂ ಸ ವಿಷಯವ್ಯಾವೃತ್ತ ಕೌತೂಹಲೋ।
ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋ ಮುನಿಃ " ॥

ಮನೋಹರವಾದ (ಶೃಂಗಾರ ರಸದ) ರೂಪನ್ನು ವಿಷಯ ಸುಖಗಳ ಮೇಲಿಂದ ಮನಸ್ಸನ್ನು ಪೂರ್ತಿಯಾಗಿ ಎಳೆದುಬಿಟ್ಟು ವೇದ ಓದಿಓದಿ ಬುದ್ಧಿ ಜಡವಾಗಿ ಹೋದ ಮುದಿಋಷಿಯು ಮಾಡಿಯಾನೇ? ಶೃಂಗಾರದಲ್ಲಿ ಸದಾ ಮುಳುಗಿರುತ್ತ ವಿಷಯಾಸಕ್ತರೆಂಬ ನಿಂದೆಗೆ ಪಾತ್ರರಾದಂಥ ಇವರೇ ಹೃದಯವು ಉಬ್ಬಿ, ಉತ್ಸಾಹದಿಂದ ಮುಖಕ್ಕೆ ಛಿಲ್ಲನೆ ರಕ್ತವು ನುಗ್ಗಿಬರುವಂಥ ವೀರರಸಪೂರ್ಣವಾದ ವರ್ಣನೆಗಳನ್ನು ಕೊಟ್ಟಿದ್ದಾರೆ; ದುರ್ಗೇಶನಂದಿನಿ, ರಾಜಸಿಂಹ, ಕೋಹಿನೂರು, ಇವುಗಳಲ್ಲಿ ಇದಕ್ಕೆ ಉದಾಹರಣೆಗಳು ಬೇಕಾದ ಹಾಗೆ ಸಿಕ್ಕುತ್ತವೆ.

ಇವರ ಪ್ರತಿವರ್ಗಕ್ಕೆ ಸೇರಿ ಶೃಂಗಾರಹಾಸ್ಯ ವಿಷಯಗಳಲ್ಲಿ ಸ್ವಾಭಾವಿಕವಾದ ಅಭಿರುಚಿಯಿಲ್ಲದೆ, ಅನುಭವವಿಲ್ಲದೆ ಶುದ್ಧ ವೀರರಸದಿಂದ ತುಂಬಿ ತುಳುಕುತ್ತಿರುವವರಿಗೆ ಮಾತ್ರ ಆ ರಸಗಳನ್ನು ಚಿತ್ರಿಸುವುದರಲ್ಲಿ ಕೈ ನಡೆಯುವುದಿಲ್ಲ. 'ಕಾರ್ಲೈಲ್' ಅಥವಾ 'ಜಾರ್ಸರ್' ಅಂಥವರನ್ನು " Taming of the Shrew " " A midsummer Night's Dream "ನಂಥ ಕಥೆಗಳನ್ನು ಬರೆಯಬೇಕೆಂದರೆ ಏನು ಬರೆದಾರು? ಸಿಂಹವು ನಕ್ಕರೆ ಆ ನಗುವಿನಲ್ಲಿ ಎಷ್ಟರ ಮಟ್ಟಿನ ಮೃದುತ್ವವೂ ಸೊಬಗೂ ಇರಬಹುದೋ, ಅವರು ಚಿತ್ರಿಸಿದ ಶೃಂಗಾರಹಾಸ್ಯರಸಗಳಲ್ಲಿಯೂ ಅಷ್ಟುಸೊಗಸಿರಬಹುದು! ಅದು ಹೇಗಾದರೂ ಇರಲಿ. ಆಪಟೆ

ಯವರ ಗ್ರಂಥಗಳಲ್ಲಿ ಶೃಂಗಾರರಸ ಬರುವುದು ಅಪರೂಪ; ಅವು ಅಚ್ಚವೀರರಸದಿಂದ ತುಂಬಿ ನಿರ್ದೋಷವಾದ, ನಿರ್ಮಲವಾದ, ಸಾಣೆಗೆ ಕೊಟ್ಟು ತಳತಳನೆ ಹೊಳೆಯುವ ವಜ್ರಗಳಂತಿವೆ. ಶೃಂಗಾರ ರಸ ಹೋಗಲಿ, ಇವರ ಗ್ರಂಥಗಳಲ್ಲಿ ಬಂಕಿಂಚಂದ್ರರ ಗ್ರಂಥಗಳಲ್ಲಿರುವಂತೆ ದುರ್ಗ, ಹೊಳೆ, ನಗರ, ಮುಂತಾದವುಗಳ ವಿಸ್ತಾರವಾದ ವರ್ಣನೆ ಗಳೂ ಹೆಚ್ಚಾಗಿ ಬರುವುದಿಲ್ಲ. ರಣರಂಗದಲ್ಲಿ ವೀರಾವೇಶದಿಂದ ನುಗ್ಗಿ ಯುದ್ಧ ಮಾಡುತ್ತಿರುವ ಯೋಧನು ತನ್ನ ಎಡ ಬಲದಲ್ಲಿ ಏನಿರಬಹು ದೆಂದು ಕಣ್ಣೆತ್ತಿ ನೋಡುವುದಕ್ಕೂ ಸಹ ಅವಕಾಶವಾಗಲಿ ಮನಸ್ಸಿಗೆ ಸಮಾಧಾನವಾಗಲಿ ಇಲ್ಲದಂತೆ ಹೇಗೆ ತನ್ನ ಕೆಲಸದಲ್ಲಿಯೇ ನಿರತ ನಾಗಿರುತ್ತಾನೆಯೋ ಹಾಗೆ ಮರಾಟರ ಮತ್ತು ರಾಜಪುತ್ರರ ವೀರ್ಯ ಶೌರ್ಯಗಳನ್ನು ವೀರರಸದಲ್ಲಿ ಚಿತ್ರಿಸುವುದಕ್ಕೆ ಹೊರಟಿರುವ ಇವರ ಲೇಖನಿಯೂ ತನ್ನ ಲಕ್ಷ್ಯವನ್ನು ಬಿಟ್ಟು ಅತ್ತಿತ್ತ ಅಲುಗಾಡುವುದಕ್ಕೆ ಒಡಂಬಡುವಂತೆ ತೋರುವುದಿಲ್ಲ. ಆದರೆ ಇವರಿಗೆ ಪತಿ ಪತ್ನಿಯರ ಪ್ರಣಯ, ಪತ್ನಿಪುತ್ರರೊಡನೆ ಪ್ರೇಮ, ಮುಂತಾದ ಮಧುರ ಭಾವಾಂ ತರಗಳ ಅನುಭವವಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಇದಕ್ಕೆ ಪ್ರತಾಪಸಿಂಹನು ಕಷ್ಟದಲ್ಲಿ ಸಿಕ್ಕಿ ಗುಡ್ಡದಿಂದ ಗುಡ್ಡಕ್ಕೆ ಅಲೆಯುತ್ತ ಗುಹೆಯಲ್ಲಿ ತನ್ನ ಪತ್ನಿಪುತ್ರರೊಡನೆ ಮಾಡುತ್ತಿದ್ದ ವನವಾಸದ ವರ್ಣನೆಯನ್ನು ಸಾಕ್ಷಿಯಾಗಿ ಹೇಳಿದರೆ ಸಾಕಾಗಿದೆ. ಇಂಥ ಸಂದರ್ಭ ಗಳಲ್ಲಿ ಮಾತ್ರ ಈ ವರ್ಣನೆಗಳನ್ನು ಓದಿ, ಸಂಸಾರ ಸುಖದಲ್ಲಿ ಚಾಪಲ್ಯ ವುಂಟಾಗಿ ಬಾಯಲ್ಲಿ ನೀರು ಒಡೆಯುವುದಕ್ಕೆ ಬದಲು ಸಾಂಸಾರಿಕ ಪ್ರೇಮದಲ್ಲಿಯೂ ಒಂದು ವಿಧವಾದ ಗೌರವವು ಉತ್ಪನ್ನವಾಗುತ್ತದೆ. ವಿವಾಹದ ಅಥವಾ ಗೃಹಸ್ಥಾಶ್ರಮದ ಉದ್ದೇಶವು ಕೇವಲ ವಿಷಯ ಸುಖಾನುಭವದಲ್ಲಿ ಪರಿಣಮಿಸಬಾರದೆಂದೂ, ಅದಕ್ಕೆ ಉದಾತ್ತ ವಾದ ಉದ್ದೇಶಗಳುಂಟೆಂದೂ ಅವುಗಳನ್ನು ಈಡೇರಿಸುವುದಕ್ಕೆ ಪತಿ ಪತ್ನಿಯರಿಬ್ಬರೂ ಪ್ರಯತ್ನ ಮಾಡಬೇಕೆಂದೂ, ಮನಸ್ಸಿಗೆ ಬೋಧೆ ಯಾಗುತ್ತದೆ.

ಬಂಕಿಂಚಂದ್ರರವರಿಗೂ ಆಪಟೆಯವರಿಗೂ ಇರತಕ್ಕ ಇದೊಂದು

ವ್ಯತ್ಯಾಸವನ್ನು ಬಿಟ್ಟರೆ ಇಬ್ಬರಲ್ಲಿಯೂ ಒಂದೇ ವಿಧವಾದ ವೀರರಸ ವನ್ನು ಚಿತ್ರಿಸುವ ಸಾಮರ್ಥ್ಯ, ಸ್ವದೇಶಾಭಿಮಾನ, ಸ್ವಧರ್ಮಾಭಿಮಾನ, ಉತ್ಸಾಹ ಇವು ತುಂಬಿವೆ ಎಂದು ಹೇಳಬಹುದು. ಆದರೆ ಈ ತಮ್ಮ ಉತ್ಸಾಹಾಭಿಮಾನಗಳನ್ನು ಕಾದಂಬರಿಗಳಲ್ಲಿ ಅಷ್ಟು ಸ್ಪಷ್ಟವಾಗಿ ತೋರ್ಪಡಿಸಿಲ್ಲ. ಅವು ಬಂಕಿಂಚಂದ್ರರ ಪ್ರಬಂಧಗಳು, ಕೃಷ್ಣ ಚರಿತೆಯ ಅವತರಣಿಕೆ, ಮುಂತಾದವುಗಳನ್ನು ಓದಿದರೆ ತಿಳಿಯ ಬರುವುವು. ಇಂಥ, ಕಥೆಗೆ ಹೊರಗಾದ, ಅಭಿಪ್ರಾಯಗಳನ್ನು ಅನಾವಶ್ಯಕವಾಗಿ ತಂದರೆ ಅಸಂಬದ್ಧವಾಗಬಹುದೆಂದೂ, ಕಾವ್ಯ ಸೌಂದರ್ಯವು ಕೆಡುವುದೆಂದೂ ಅವರಿಗೆ ಗೊತ್ತಿತ್ತು. ಅದಕ್ಕೋಸ್ಕ ರವೇ ಅವುಗಳನ್ನು ಅಲ್ಲಲ್ಲಿ ಸಮಯೋಚಿತವಾಗಿ ಸೂಚಿಸಿದ್ದಾ ರೆಯೇ ಹೊರತು ಅವನ್ನೇ ತುಟಿವಿಾರಿದ ಹಲ್ಲಿನಂತೆ ಮಾಡಿಟ್ಟಿಲ್ಲ. ಆದರೂ ಅವು ಪ್ರಮೋದಾಗಾರದಲ್ಲಿ ಅಲ್ಲಲ್ಲಿ ಇಟ್ಟ ಗಂಧಪುಷ್ಪ ಧೂಪ ಗಳು ತಮ್ಮ ಸುವಾಸನೆಯನ್ನು ಅಲ್ಲೆಲ್ಲಾ ಹರಡಿ ಒಂದಪೂರ್ವವಾದ ಸೊಬಗನ್ನು ಬೀರುವಂತೆ ಕಾಣುತ್ತಿವೆ. ಇದೊಂದು ಕಲಾಕೌಶಲದ ಗುಟ್ಟು. ತಾವು ತಾವು ಮೆಚ್ಚುವ ಕೆಲವು ಅಭಿಪ್ರಾಯಗಳನ್ನಾಗಲಿ ಮತವನ್ನಾಗಲಿ ಸಮಯವರಿಯದೆ ತಂದು ತುಂಬಿ ಎಷ್ಟೋ ಗ್ರಂಥ ಕರ್ತರು ಕಾವ್ಯಗಳ ಸೊಬಗನ್ನು ಕೆಡಿಸಿದ್ದಾರೆ. ಪ್ರಸಕ್ತವಿಷಯಕ್ಕೆ ಪೂರ್ಣವಾಗಿ ಸಂಬಂಧಪಡದೆ ಸಮಯ ಸಿಕ್ಕಿದರೆ ಸಾಕೆಂದು ತಂದು ತುಂಬುವ ವೇದಾಂತ ನೈತಿಕ ಮುಂತಾದ ವಿಚಾರಗಳು ಕಾವ್ಯದ ಉತ್ಕೃಷ್ಟತೆಯನ್ನು ಹೋಗಲಾಡಿಸುವುವೆಂಬುದು ಜಾರ್ಜ್ ಇಲಿ ಯಟ್, ಥ್ಯಾಕರೆ, ಇವರ ಮತ್ತು ಇಲ್ಲಿ ಈ ಹೆಸರುಗಳೊಡನೆ ನಿರ್ದೇಶ ಮಾಡುವುದಕ್ಕೂ ಕೂಡ ತಕ್ಕಷ್ಟು ಯೋಗ್ಯತೆಯಿಲ್ಲದ ಕೆಲವು ಶುಷ್ಕ ಕನ್ನಡ ಕಾದಂಬರಿಕಾರರ ಗ್ರಂಥಗಳನ್ನು ಓದಿರುವ ನಿಮಗೆ ಹೇಳ ಬೇಕಾದ್ದಿಲ್ಲ.

ವೆಂಕಟಾಚಾರ್ಯರವರು ಯಥಾವತ್ತಾಗಿ ತರ್ಜುಮೆ ಮಾಡಿ ದ್ದಾರೆ; ಅಥವಾ ಅಲ್ಲಲ್ಲಿ ಒಂದೆರಡು ಮಾತುಗಳನ್ನು ಅಥವಾ ವಾಕ್ಯ ಗಳನ್ನು ಬದಲಾಯಿಸಿದ್ದರೂ, ಬಿಟ್ಟಿದ್ದರೂ, ಸೇರಿಸಿದ್ದರೂ ಬಂಕಿಂ

ಚಂದ್ರರ ಗ್ರಂಥಗಳಿಗೂ ಇವರ ತರ್ಜುಮೆಗಳಿಗೂ, ಒಟ್ಟು ಅಭಿಪ್ರಾಯ ಗಳಲ್ಲಿ ಅಥವಾ ಕಾವ್ಯಶೋಭೆಯಲ್ಲಿ ಹೆಚ್ಚು ವ್ಯತ್ಯಾಸವಾಗಲಾರದು. ಗಳಗನಾಥರ ಗ್ರಂಥಗಳು ಇಷ್ಟು ಅಕ್ಷರಶಃ ಮಾಡಿದ ತರ್ಜುಮೆಗಳಲ್ಲ. ಅವರು ಕೆಲವು ಕಥೆಗಳನ್ನು ಸಂಕ್ಷೇಪಿಸಿದ್ದಾರೆ; ಹೊಸದಾಗಿ ಪಾತ್ರ ಗಳನ್ನು ಸೇರಿಸಿದ್ದಾರೆ; ತಾವು ಬಹಳವಾಗಿ ಮೆಚ್ಚುವ ಕೆಲವು ಅಭಿ ಪ್ರಾಯಗಳನ್ನು ಹೇಗಾದರೂ ಮಾಡಿ ಅನೇಕ ಗ್ರಂಥಗಳಲ್ಲಿ ತಂದಿದ್ದಾರೆ. ಈ ಉಪನ್ಯಾಸಭಾಗಗಳು ಮಾತೃಕೆಗಳಲ್ಲಿ ಇರಲಾರವು. "ಕ್ಷಾತ್ರತೇಜ" ವೆಂಬ ಗ್ರಂಥದ ಉಪೋದ್ಘಾತದಲ್ಲಿ "ಇದನ್ನು ಮಹರಾಷ್ಟ್ರಭಾಷೆಯ ನ್ನರಿತ ಕನ್ನಡಿಗರು ಮೂಲ ಕಾದಂಬರಿಯ ಮರ್ಮವನ್ನರಿತು ಓದಿ ಮನಗಾಣಬಹುದು; ಮತ್ತು ಮಹರಾಷ್ಟ್ರವರಿಯದ ಕನ್ನಡಿಗರು ಇದೊಂದು ಮನೋರಂಜಕ ನೈತಿಕ ಕಾದಂಬರಿಯು, ವಿಚಾರಪೂರ್ವಕ ವಾಗಿ ಮರ್ಮವರಿತು ಬರೆಯಲ್ಪಟ್ಟಿರುತ್ತದೆಂಬ ನಂಬಿಕೆಯಿಂದ ಸಮಾ ಧಾನ ಪಡಬೇಕಲ್ಲದೆ, ಇನ್ನೂ ಮೂಲ ಕಾದಂಬರಿಯಲ್ಲಿ ಎಷ್ಟು ಸವಿ ಯಿತ್ತೋ ಏನೋ ಎಂದು ಅಸಮಾಧಾನಪಡಬಾರದು" ಎಂದು ಹೇಳಿ ದ್ದಾರೆ. ಆದರೆ ಅವರ ಗ್ರಂಥಗಳಲ್ಲಿ ತಮ್ಮ ಜೀವನವಿಮರ್ಶೆಯನ್ನು ಮೇಲಿಂದ ಮೇಲೆ ಒತ್ತಿಹೇಳುವುದು ಒಂದು ದೋಷವಾಗಿ ಕಾಣುತ್ತದೆ. (ಆದರೆ ಅದು ಕಾವ್ಯದೃಷ್ಟಿಯಿಂದ ದೋಷವೇ ಹೊರತು ಅದು ಸಂಸಾ ರಿಕರಿಗೆ ಅನುಪಯುಕ್ತವೆಂಬ ಅರ್ಥವಲ್ಲ.) ಅದರಲ್ಲಿಯೂ ಅವರ ನಾಲ್ಕಾರು ಪುಸ್ತಕಗಳನ್ನು ಓದಿ ಮೇಲಿಂದ ಮೇಲೆ ಅದೇ ಉಪದೇಶ ಗಳು ಬರುವುದನ್ನು ನೋಡಿದರಂತೂ ಆ ಭಾಗಗಳನ್ನು ಬಿಟ್ಟುಬಿಟ್ಟು ಮುಂದಕ್ಕೆ ಹೋಗಬೇಕೆನ್ನಿಸುತ್ತದೆ. "ಬ್ರಹ್ಮನಿಷ್ಠೆಯ ಪಾವಟಿಕೆ ಯನ್ನು ಏರಿಹೋಗಲಿಕ್ಕೆ ಸ್ವನಿಷ್ಠೆ, ಸ್ವಕರ್ತವ್ಯನಿಷ್ಠೆ, ಸನ್ನಿಷ್ಠೆ ಎಂಬ ಮೂರು ಪಾವಟಿಕೆಗಳನ್ನು ಏರಿ ಹೋಗಬೇಕಾಗುತ್ತದೆ. ನಾಲ್ಕನೆಯದೇ ಸವ-ಭಾವವು. ಸ್ವನಿಷ್ಠೆ ಎಂದರೆ ತನ್ನಲ್ಲಿ ತನಗಿರುವ ನಂಬಿಕೆಯು.... ನನ್ನಲ್ಲಿ ಯಾವ ಯೋಗ್ಯತೆಯೂ ಇಲ್ಲ, ನನ್ನಿಂದ ಯಾವ ಕೆಲಸವೂ ಆಗುವುದಿಲ್ಲ ಎನ್ನುವರು ಸ್ವನಿಷ್ಠೆಯುಳ್ಳವರಲ್ಲ. ಅವರು ಅಧಮರು." ('ಸತ್ವಸಾರ') ಈ ಅಭಿಪ್ರಾಯಗಳು ನಾನಾವೇಷದಿಂದ ಸ್ವಲ್ಪ ಹೆಚ್ಚು

ಕಡವೆ ಎಲ್ಲ ಗ್ರಂಥಗಳಲ್ಲಿಯೂ ಬರುತ್ತವೆ. ಈ ಅಭಿಪ್ರಾಯಗಳು ಪೂರ್ತಿಯಾಗಿಯೂ ಸ್ಪಷ್ಟವಾಗಿಯೂ ತಿಳಿಯಬೇಕಾದರೆ ಗಳಗನಾಥ ರವರು ಸ್ವಂತವಾಗಿ ಬರೆದಿರುವ 'ದಾಂಪತ್ಯ' 'ಕುಟುಂಬ' ಮುಂತಾದ ಅವರ ಪ್ರಬಂಧಗಳನ್ನೂ, 'ನಿರ್ವಾಣ ಮಹೋತ್ಸವ' ಮುಂತಾದ ಇತರ ಕೆಲವು ಗ್ರಂಥಗಳನ್ನೂ ಓದಬೇಕು. ಬಂಕಿಂಚಂದ್ರರ ಗ್ರಂಥಗಳಲ್ಲಿ ಪ್ರಣಯ ವಿಷಯಸುಖ ಮುಂತಾದ ಪ್ರಸ್ತಾಪಗಳು ತಪ್ಪದೆ ಬರುವುದಕ್ಕೆ ಕಾರಣವನ್ನು ಅವರ ಸ್ವಭಾವ ನಡತೆ ಅಭಿಪ್ರಾಯ ಇವುಗಳಿಂದ ತಿಳಿಯ ಬಹುದೆಂದು ಹೇಳಿದ್ದೇನೆ. ಇಲ್ಲಿಯೂ ಹಾಗೆಯೇ. ಗಳಗನಾಥರು ಧಾರವಾಡದ ಟ್ರೇನಿಂಗ್ ಕಾಲೇಜಿನಲ್ಲಿ ಉಪಾಧ್ಯಾಯರಾಗಿದ್ದರು. ಕೆಲವು ಕಾಲದ ಮೇಲೆ ಕರ್ಮಧರ್ಮಸಂಯೋಗದಿಂದ ಅಗಡಿಯ ಸಾಧುಗಳ ಸತ್ಸಂಗವು ಅವರಿಗೆ ದೊರೆತು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು ಅವರ ಸೇವೆಗೆ ನಿಂತರು. ಆದರೆ ಅಲ್ಲಿಯೂ ಇತರ ಅನೇಕ ಶಿಷ್ಯರಂತೆ ಕೈಕಟ್ಟಿಕೊಂಡು ಕುಳಿತಿರುತ್ತಿರಲಿಲ್ಲ; ಉತ್ಸಾಹಪೂರ್ಣರಾಗಿ ಕರ್ಮವಾಡುವುದಕ್ಕೇ ಹುಟ್ಟಿದ ಇವರು ಹೇಗೆ ತಾನೆ ಕುಳಿತು ಕೊಂಡಾರು? ಭಾಷಾಸೇವೆಯ ಮೂಲಕ ದೇಶಸೇವೆಯಾಗುವುದೆಂಬ ದೃಢದಿಂದ ಸದ್ಬೋಧಚಂದ್ರಿಕೆಯನ್ನು ಹೊರಡಿಸಿದರು. ಸತ್ಸಾಹಿ ತ್ಯವು ಸತ್ಪರಿಣಾಮದಲ್ಲಿ ಸಹಕಾರಿಯಾಗುವುದೆಂಬುದು ಅವರಿಗೆ ಗೊತ್ತಿತ್ತು. ಇಂಥವರು ಗುರುವಿನ ಸೇವೆಯ ಫಲವನ್ನು ಹೊಂದಿ ಅವರ ಉಪದೇಶಗಳನ್ನು ಗ್ರಹಣಮಾಡಿದ ಮೇಲೆ ಹೊರಗೆ ಸಂಚಾರಮಾಡುತ್ತಾ ಉಪನ್ಯಾಸ ಕೊಡುವುದಕ್ಕೆ ಬದಲು, ವಿದ್ಯಾದಾನ ಅತಿಥಿಸತ್ಕಾರ ಮುಂತಾದ ಇತರ ಸತ್ಕಾರ್ಯ ಗಳನ್ನು ಗಂಟುಹಾಕಿಕೊಂಡು ಎರಡೊಂದು ಕೆಲಸ ಮಾಡುತ್ತ ಸದ್ಬೋಧಚಂದ್ರಿಕೆಯನ್ನು ನಡೆಸುತ್ತ ಕುಳಿತುಕೊಂಡರು. ಗುರುವಿನ ಹತ್ತಿರ ಪಡೆದ ಅನುಭವವೂ ಉಪದೇಶವೂ ಅವರ ಮನಸ್ಸಿನಲ್ಲಿ ಉಕ್ಕಿ ಹರಿಯುವಂತೆ ತುಂಬಿರಲು, ಈ ಮೂಲಕ ಅದು ಬರದಿರುವುದು ಹೇಗೆ? ಅಲ್ಲದೆ, ಇವರಲ್ಲಿ ಕಾರ್ಲೈಲ್‌ನಂಥ ಜನರಲ್ಲಿ ಇರುವ ಸರಳತೆ ಡಾಂಭಿಕತನದ್ವೇಷ, ಕೆಲಸ ಮಾಡುವುದರ ಆವಶ್ಯಕತೆಯ ಜ್ಞಾನ

ಕರ್ಮದಲ್ಲಿರತಕ್ಕ ಗೌರವ ಮುಂತಾದವುಗಳು ಸ್ವಾಭಾವಿಕವಾಗಿರುವಂತೆ ತೋರುತ್ತದೆ. ಇವರ ಸ್ಪಷ್ಟವಾದಿತ್ವವೂ, ಖಂಡಿತವಾದಿತ್ವವೂ ಕೆಲವರು ಅವರನ್ನು ಸ್ವಲ್ಪ ಒರಟರಂತೆ ಭಾವಿಸುವ ಹಾಗೆ ಮಾಡಿದೆ. ಅದಕ್ಕೆ ಒಂದೇ ಉದಾಹರಣೆಯನ್ನು ಕೊಡುತ್ತೇನೆ. ಇವರು ಒಂದು ಕಡೆ "ಸ್ವನಿಷ್ಠೆ" ಯ ವಿಚಾರವಾಗಿ ಬರೆಯುತ್ತ "ನನ್ನ ಕೈಲೇನಾಗುವುದೆಂದು ಕೈಕಟ್ಟಿ ಕುಳಿತುಕೊಳ್ಳುವವನಿಗೆ ಬಲವಾಗಿ ಕೊಡತಿಯ ಪೆಟ್ಟುಗಳು ಬೀಳುವುವು" ಎಂದು ಹೇಳಿದ್ದಾರೆ.

ಇದರಿಂದ ಕಾವ್ಯಸೌಂದರ್ಯಕ್ಕೆ ಉಂಟಾಗಬಹುದಾದ ಕೊರತೆ ಏನಾದರೂ ಇರಲಿ, ಕಾವ್ಯ ನೀತಿಯು ಹರಿತವಾದ ಕೋರೆಹಲ್ಲುಗಳಂತೆ ಎಷ್ಟು ಮುಂದೆ ಹಾಯ್ದು ಬಂದಾದರೂ ತೋರುತ್ತಿರಲಿ, ಇವರ ಗ್ರಂಥಗಳನ್ನು ಓದುತ್ತ ಓದುತ್ತ ಅಲಸರಾದ ನಮ್ಮ ಮೇಲೂ ಕೊರಡೆಯ ಪೆಟ್ಟುಗಳು ಬಿದ್ದು ಬಾಸುಂಡೆಗಳು ಬರುವುವು. ರಾಜಪುತ್ರರ ಅಥವಾ ಮರಾಟರ ದೇಶಾಭಿಮಾನ, ಜಾತ್ಯಭಿಮಾನ, ಧೈರ್ಯ, ಶೌರ್ಯ ಸಾಮರ್ಥ್ಯಾದಿಗಳ ವಿಚಾರವಾಗಿ ಓದುತ್ತ ಓದುತ್ತ ಹೃದಯವು ಉಬ್ಬಿ ಉತ್ಸಾಹಭರಿತವಾಗಿ, ನಿಸ್ಸತ್ವರೂ ತೇಜೋಹೀನರೂ ಆದ ಬ್ರಾಹ್ಮಣರಿಗೂ ಕೂಡ ವೀರಾವೇಶವುಂಟಾಗಿ ದೇಶೋನ್ನತಿಗಾಗಿ ದೇಹವನ್ನು ಕೂಡ ನಿಸ್ಸಂಕೋಚವಾಗಿ ಎಸೆದುಬಿಡುವುದಕ್ಕೆ ಸಿದ್ಧವಾಗಿರಬೇಕೆಂಬ ಬುದ್ಧಿ ಹುಟ್ಟುವಕಾಲದಲ್ಲಿ ಈ ಕೊಡತಿಯ ಪೆಟ್ಟುಗಳು ಸಮಯಕ್ಕೆ ಸರಿಯಾಗಿ ಬಿದ್ದು ಎಷ್ಟು ಉತ್ಸಾಹವನ್ನೂ ಕರ್ತವ್ಯ ತತ್ಪರತೆಯನ್ನು ಉಂಟುಮಾಡುತ್ತವೆ! ಇವುಗಳನ್ನು ಓದುತ್ತ ಓದುತ್ತ ನಮ್ಮ ಜನರಲ್ಲಿಯೂ ಧೈರ್ಯಶೌರ್ಯಾದಿ ಗುಣಗಳೂ, ರಣಕೌಶಲ್ಯ ಸಾಮರ್ಥ್ಯಗಳೂ ಇದ್ದುವೆಂದೂ, ನಮ್ಮಲ್ಲಿಯೂ ದೇಶಕ್ಕಾಗಿ ದೇಹವನ್ನು ಧಾರೆ ಎರೆದು ಬಲಿ ಕೊಟ್ಟು ವೀರಸ್ವರ್ಗವನ್ನು ಪಡೆಯುತ್ತಿದ್ದ ಧೀರರೂ ಶೂರರೂ ಇದ್ದರೆಂದೂ, ದೇಶವು ಅನ್ಯರ ಪಾಲಾದರೆ ನಮ್ಮಲ್ಲಿಯೇ ಒಕ್ಕಟ್ಟಿಲ್ಲದೆ ದ್ರೋಹ, ಹೊಟ್ಟೆಕಿಚ್ಚು, ಪಿತೂರಿ, ಗರ್ವ, ಇವುಗಳಿಗೆ ನಾವೇ ಅವಕಾಶ ಕೊಟ್ಟಿದ್ದರಿಂದಲೂ, ರಾಜರುಗಳಲ್ಲಿಯೂ ಪ್ರಜೆಗಳಲ್ಲಿಯೂ ಸ್ವಧರ್ಮನಿಷ್ಠೆಯು ಲೋಪವಾಗಿ ಹೋದದ್ದರಿಂದಲೂ

ಹಾಗಾಯಿತೆಂದು ಕಂಡುಬರುತ್ತದೆ. ತಮ್ಮ ತಮ್ಮ ಕರ್ತವ್ಯಗಳನ್ನು ಮರೆತು ಸ್ವಾರ್ಥಪರರಾಗಿ ದ್ರೋಹಚಿಂತನೆ ಮಾಡುತ್ತ ಸುಖಾಭಿಲಾಷಿಗಳಾಗಿ ಹೇಡಿಗಳೂ ಅಲಸರೂ ಆಗಿದ್ದರೆ ಅಂಥವರಲ್ಲಿ ಧರ್ಮನಿಷ್ಠೆ ಏನು ಬಂತು? 'ಧರ್ಮ'ವೆಂದರೆ ಗೊಡ್ಡು ವೈದಿಕಾಚಾರಗಳೆಂದು ಅರ್ಥ ಮಾಡುತ್ತಿರುವ ನಿಮಗೆ ಇದರಲ್ಲಿ ಗೌರವ ಹುಟ್ಟುವುದು ಕಷ್ಟ. ಅದನ್ನು Sense of duty, Self-descipline ಎಂದು ಭಾಷಾಂತರಮಾಡಿದರೆ, ಅಥವಾ Public Life must be Spiritualised: There must be moral Regeneration ಎಂದು ದೊಡ್ಡ ದೊಡ್ಡ ಮಾತುಗಳನ್ನು ಹಾಕಿ, ದೊಡ್ಡ ದೊಡ್ಡವರ ಹೆಸರುಗಳನ್ನು ಕೊಟ್ಟು ಹೇಳಿದರೆ ಆಗ, ಅವು ಅರ್ಥವಾಗಲಿ ಆಗದೆ ಹೋಗಲಿ, ದೊಡ್ಡದಾಗಿ ಕಣ್ಣುಬಿಟ್ಟು ಚಪ್ಪಾಳೆ ತಟ್ಟಿಬಿಡುತ್ತೀರಿ! ಆದರೆ ಅದರ ಅರ್ಥವೇನೆಂದು ಯಾರೂ ವಿಚಾರಮಾಡಿದ ಹಾಗಿಲ್ಲ. ಮತ ಧರ್ಮಗಳೆಂದರೆ ವೈದಿಕ ವಿದ್ಯೆಯಿಂದ ಅಹನ್ಯಹನಿ ಕಾಲಕ್ಷೇಪ ಮಾಡುತ್ತ ಹೊಟ್ಟೆ ಹೊರೆದುಕೊಳ್ಳುವ ಪುರೋಹಿತರ ಜೀವನವೆಂದು ಅರ್ಥಮಾಡಿಬಿಡುತ್ತೀರಿ. ರಾಜರ್ಷಿಯಂತಿದ್ದ ಶಿವಾಜಿ– ಅವನು ಹಗಲು ದರೋಡೆಯ ಕಳ್ಳನೆಂಬ ಅಭಿಪ್ರಾಯವನ್ನು ಇನ್ನಾದರೂ ಬಿಟ್ಟುಬಿಡೋಣ!–ಅವನ ಸ್ವಾಮಿ ಭಕ್ತರಾದ ಮರಾಟವೀರಾಗ್ರಣಿಗಳಾದ ರಾಜಪುತ್ರರು, ಇವರ ವಿಚಾರವಾಗಿ ಸ್ವಲ್ಪ ಓದಿದರೆ, ರಾಜನಿಂದ ಸೇವಕನವರೆಗೂ ಪ್ರತಿಯೊಬ್ಬರೂ ಧರ್ಮನಿಷ್ಠರಾಗಿದ್ದರೆ ಅದು ದೇಶಕ್ಕೆ ಎಷ್ಟು ಶ್ರೇಯಸ್ಕರವೆಂಬುದು ಗೊತ್ತಾಗುವುದು. ರಾಮದಾಸರಂಥ ಮಹನೀಯರು ಸ್ವಾರ್ಥತ್ಯಾಗಮಾಡಿ ತಪೋನಿಷ್ಠರಾಗಿದ್ದು ಮರಾಟ ದೇಶಕ್ಕೆ ಅಧಿದೇವತೆಗಳಂತಿದ್ದು ಶಿವಾಜಿ ಮುಂತಾದ ಶೂರರ ಅಚಲವಾದ ಭಕ್ತಿಗೆ ಪಾತ್ರರಾಗಿ ಮಹಾ ಕಾರ್ಯಗಳನ್ನು ಸಾಧಿಸಿದವರು ಧರ್ಮನಿಷ್ಠರಲ್ಲದೆ ಮತ್ತಾರು? ದೇಶವು ಕ್ಷಾಮ, ರೋಗ, ಮುಂತಾದ ನಾನಾ ಸಂಕಟಗಳಿಂದ ಪರಿತಾಪಪಡುತ್ತಿರುವಾಗ ಸ್ವಾರ್ಥತ್ಯಾಗಮಾಡಿ ಐಕಮತ್ಯದಿಂದ ದೇಹವನ್ನು ತೆಯ್ದು ಸಾವಿರಾರು ಪ್ರಾಣಿಗಳಿಗೆ ಸಹಾಯಮಾಡಿದ ಆನಂದಮಠದ ಸತ್ಯಾನಂದ ಜೀವಾನಂದ ಮುಂತಾದ ಸಂನ್ಯಾಸಿಗಳು ಧರ್ಮನಿಷ್ಠರಲ್ಲದೆ

ಮತ್ತೇನು? ಜಯಧ್ವನಿಮಾಡುತ್ತ ಮಹಾದೇವನ ಹೆಸರು ಹೇಳುತ್ತ ದೇಶರಕ್ಷಣೆಗಾಗಿ ವ್ರತಗಳನ್ನು ಕೈಕೊಂಡು ಕತ್ತಿಹಿಡಿದು ಶತ್ರುಗಳಮೇಲೆ ನುಗ್ಗಿ ವೀರ ಸ್ವರ್ಗವನ್ನು ಪಡೆದ ರಾಜಪುತ್ರವೀರರಾದ ಯೋಧರು ಧರ್ಮನಿಷ್ಠರಲ್ಲದೆ ಮತ್ತೇನು? ನಾವು ಜಯಧ್ವನಿಯನ್ನರಿಯೆವು; ನಮಗೆ ಧರ್ಮಜ್ಞಾನವಿಲ್ಲ; ದೇವರು ದಿಂಡರಿಲ್ಲ! ಬಂಗಾಳಿಗಳು "ಜಯ್‌ಕಾಳಿ" ಎನ್ನುವರು; ರಾಜಪುತ್ರರು "ಏಕಲಿಂಗೇಶ್ವರಕೀ ಜಯ್" ಎನ್ನುವರು; ಮರಾಟಿಯವರು "ಜಯಭವಾನಿ" ಎನ್ನುವರು; ಕನ್ನಡಿಗರಾದ ನಾವು ಏನೆನ್ನಬೇಕು? ನಮಗೆ ದೇವರುದಿಂಡರು, ಗುರುಗಳು ಹಿರಿಯರು ಯಾರೂ ಇಲ್ಲ—ಯಾರೂ ಬೇಕಿಲ್ಲ!

ಮಿತ್ರರೆ, ಈ ವೀರರಸಪೂರ್ಣವಾದ ಕಾದಂಬರಿಗಳಲ್ಲಿ ಉಕ್ಕಿ ಸುರಿಯುತ್ತಿರುವ ವೀರರಸವನ್ನು ವರ್ಣನೆಮಾಡಲು ನನ್ನಲ್ಲಿ ವಾಕ್ಸಂಪತ್ತಾಗಲಿ ರಾಜಸ ಸ್ವಭಾವವಾಗಲಿ, ಇರುವುದಿಲ್ಲ. ಹೃದಯದಲ್ಲಿ ಆಗುವ ಅನುಭವವನ್ನೆಲ್ಲಾ ಚಿತ್ರಿಸುವುದಕ್ಕೆ ಯಾವ ಕವಿಪುಂಗವನಿಗೂ ಆಗದು. ಅಂಥದರಲ್ಲಿ ನನ್ನಂಥವನಿಗೆ ಅದು ಹೇಗೆ ಸಾಧ್ಯವಾಗಬೇಕು? ಆದರೂ ರಾಜಸಿಂಹ ಜಗತ್ಸಿಂಹ, ಪ್ರತಾಪಸಿಂಹ ಮುಂತಾದ ರಾಜಪುತ್ರ ವೀರರನ್ನೂ ಶಿವಾಜಿ, ತಾನಾಜಿ, ಸೂರ್ಯಾಜಿ ಮುಂತಾದ ಮರಾಟ ವೀರರನ್ನೂ ಮರೆಯುವುದು ಹೇಗೆ? ಈ ಗ್ರಂಥಗಳಲ್ಲಿ ಬರುವ ಪುರುಷರು ಎಂಥ ವೀರರೋ, ಸ್ತ್ರೀಯರೂ ಅಂಥ ವೀರೆಯರೇ! ಅವರು ವೀರಮಾತೆಯರು; ವೀರ ಪುತ್ರಿಯರು; ವೀರಪತ್ನಿಯರು. ಹೇಡಿಯ ಲಕ್ಷಣವನ್ನು ಕಂಡರೆ ಗಂಡನನ್ನೇ ಹಳಿಯತಕ್ಕವರು. ಒಂದು ಕೆಲಸವನ್ನು ಹಿಡಿದರೆ ಪ್ರಭಾವತಿಯು ಸುಧನ್ವನನ್ನು ಮೋಹದಲ್ಲಿ ಸಿಕ್ಕಿಸಿದಂತೆ ಪತಿಗಳನ್ನು ಯಾವ ಸಾಂಸಾರಿಕ ಮೋಹದಲ್ಲಿಯೂ ಚಾಪಲ್ಯದಲ್ಲಿಯೂ ಸಿಕ್ಕಗೊಡುತ್ತಿರಲಿಲ್ಲ. ಸಮಯಸಂದರ್ಭ ಬಂದರೆ ಯುದ್ಧರಂಗದಲ್ಲಿ ಅವರ ಜೊತೆಗೂ ನಿಂತು ಯುದ್ಧಮಾಡುವುದಕ್ಕೆ ಸಿದ್ಧರಾಗಿರುತ್ತಿದ್ದರು. ಮ್ಲೇಂಛರೆಂದರೆ ಕಾಲಕೂಟ ವಿಷವನ್ನು ಕಾರುತ್ತಿದ್ದರು. ಆವರಿಂದ ಎಷ್ಟು ಸಾವಿರ ಜನ ಭುವನ ಮೋಹಿನಿಯರಾದ, ವೀರಮಾತೆಯರಾದ, ಸತೀಶಿರೋಮಣಿಗಳಾದ ರಾಜಪುತ್ರ ಸ್ತ್ರೀಯರು ಯಜ್ಞೇಶ್ವರನಿಗೆ ತಮ್ಮ ದೇಹಗಳನ್ನು

ಆಹುತಿಕೊಟ್ಟರು! ಅವರಿಗೆ ಪ್ರಾಣಕ್ಕಿಂತಲೂ ಮಾನವೇ ದೊಡ್ಡದು! ಪತಿ ಪತ್ನಿ ಬಾಂಧವರಿಗಿಂತಲೂ ದೇಶವೇ ದೊಡ್ಡದು! ಧರ್ಮವೇ ದೊಡ್ಡದು! ಜೋಹರ್ ನಡೆಯುವ ಸಂದರ್ಭ ಬಂದರೆ ಹೃದಯವು ಆಶ್ಚರ್ಯದಿಂದಲೂ, ರೋಷದಿಂದಲೂ, ದುಃಖದಿಂದಲೂ, ಏಕಕಾಲದಲ್ಲಿ ಬಿರಿದುಹೋಗುವಂತೆ ತುಂಬಿ ಮೈ ಜುಮ್ಮೆಂದು ರೋಮಾಂಚವೇಳುತ್ತದೆ. ನೂರಾರು ವೀರರಾದ ರಾಜಪುತ್ರಶಿರೋಮಣಿಗಳೂ ಸತೀಶಿರೋಮಣಿಗಳೂ ಜೀವವನ್ನು ಹುಲ್ಲಿಗೆ ಕಡೆಯಾಗಿ ಭಾವಿಸಿ ತುಟಿಪಿಟಿಕ್ಕೆನ್ನದೆ ದೇಹವನ್ನು ಬೆಂಕಿಯೊಳಗೆ ಎಸೆದುಬಿಡುವುದನ್ನು ನೋಡಿದರೆ ಜೀವಗಳ್ಳರಾದ, ಹೇಡಿಗಳಾದ, ಅಂಥ ರಮಣಿಯರ ದಾಸರೂ ಆಗುವುದಕ್ಕೆ ಕೈಯಲ್ಲಿ ಹರಿಯದ ನಮಗೆ ಮೈ ಕೂಡಲೇ ಸಂಕೋಚಗೊಳ್ಳುತ್ತದೆ. ಆದರೆ ಉತ್ತರಕ್ಷಣದಲ್ಲಿಯೇ ಅಷ್ಟು ಅನಾಹುತಕ್ಕೆ ಮೂಲ ಕಾರಣನಾದ ಯಾವನೋ ಒಬ್ಬ ಮೊಗಲ ಖೂಳನ ಮೇಲೆ ರೋಷ ಹುಟ್ಟಿ ನಮ್ಮಲ್ಲಿಯೂ ಸ್ವಲ್ಪ ಗಂಡಸುತನ ತೋರುತ್ತದೆ. ಕಥೆಗಳನ್ನು ಓದುವುದು ಒಂದು ದೋಷವಾಗಿ ಎಣಿಸಲ್ಪಟ್ಟದೆ. ಕಾಡುಕಥೆಗಳನ್ನೂ ಆಗ್ಯೆ ಸ್ವಲ್ಪ ಸ್ವಾರಸ್ಯವಾಗಿ ಕಂಡು ಬರುವ ಪತ್ತೇದಾರಿಯ ಕಥೆಗಳನ್ನೂ ಓದಿ ಕಾಲಹರಣಮಾಡುವವರಿಗೆ ಈ ಮಾತು ಅನ್ವಯಿಸುತ್ತದೆಯೇ ಹೊರತು ಇಂಥ ಜೀವನವಿಮರ್ಶಕವಾದ, ಉತ್ತೇಜಕವಾದ, ಧರ್ಮನೀತಿ ಬೋಧಕವಾದ, ದೇಶವಾತ್ಸಲ್ಯ ಪ್ರೇರಕವಾದ, ಗ್ರಂಥಗಳಿಗೆ ಎಂದಿಗೂ ಅನ್ವಯಿಸಲಾರದು. ಈ ಗ್ರಂಥಗಳನ್ನು ನಾಲ್ಕಾರುಸಲ ಓದಿಬಿಟ್ಟರೆ ಮನಸ್ಸಿಗೆ ಎಷ್ಟೋ ಉತ್ಸಾಹವೂ ವೀರಾವೇಶವೂ ಹುಟ್ಟುವುವು ಎಂದು ನನಗೆ ನಂಬಿಕೆ. ಈಗ ನಮಗೆ ಕತ್ತಿಹಿಡಿದು ಯುದ್ಧ ಮಾಡುವುದಕ್ಕೆ ಸಾಮರ್ಥ್ಯವೂ ಅವಕಾಶವೂ ಬಾರದೆ ಇದ್ದರೂ ಮನಸ್ಸಿನಲ್ಲಾದರೂ ಉತ್ಸಾಹವು ತುಂಬುವುದು. ನಾವು ಬೇಸಗೆಯಲ್ಲಿ ಸೊರಗಿಹೋದ ಕಾಡುಗಿಡಗಳಂತಿರದೆ ಉತ್ಸಾಹಪೂರಿತರಾಗಿ ಸೆಡೆತು ನಿಂತುಕೊಳ್ಳುವೆವು; ಉತ್ಸಾಹಪೂರ್ಣವಾದ ಮಾತುಗಳನ್ನಾಡುವೆವು; ಬರಿಯ ಬಾಯಿಬಡಿಕತನದಿಂದ ಏನು ಫಲವೆಂದು ಕೆಲವರು ಅನ್ನುವರು. ಗಟ್ಟಿಯಾಗಿ ಮಾತು ಕೂಡ ಆಡಲಾರದವರು ಎಷ್ಟು ಜನರಿಲ್ಲ? ಇಂಥ

ಮಾತನ್ನೂ ಆಡಲಾರದವನು ಇನ್ನೇನು ಮಹಾ ಕಾರ್ಯವನ್ನು ಸಾಧಿಸಬಲ್ಲನು? ಮಾತಿಗಿಂತಲೂ ಕಾರ್ಯ ಮೇಲೆಂಬುದು ನಿಜ; ಆದರೆ ಮಾತನಾಡುವವನಲ್ಲಿ ಜೀವಕಳೆಯನ್ನು ಸೂಚಿಸುವ ಉತ್ಸಾಹವಾದರೂ ಇರುತ್ತದೆ. ಮಾತಿಗಿಂತಲೂ ಕಾರ್ಯವೇ ಮೇಲೆಂದು ಹೇಳುತ್ತ ಅದಕ್ಕೋಸ್ಕರವೇ ತಾವು ಮೌನಭೂಷಣನ್ನು ತಾಳಿರುವೆವೆಂದು ಸೂಚಿಸುತ್ತ ಇರುವ ನಿಸ್ಸತ್ವರಾದ ಸಜೀವ ಶವಗಳಿಗಿಂತಲೂ ತಲೆಹರಟೆಯುವನೇ ಮೇಲು! ಬಾಯಿ ಇದ್ದವನು ಬದುಕುವನು! ಆ ಬಾಯಿನ ಜೊತೆಗೆ ಕೈಯೂ ಸೇರಿದರೆ ತಾನೂ ಬದುಕುವುದಲ್ಲದೆ ತನ್ನವರನ್ನೂ ಬದುಕಿಸುವನು.

ನಮ್ಮಲ್ಲಿ ಈ ವಿಧವಾದ ಉತ್ಸಾಹವು ಬರಬೇಕು. ನಾವು ಆರಕ್ಕೆ ಹೋಗದೆ ಮೂರಕ್ಕೆ ಬರದೆ ಇರುವ ಸಾತ್ವಿಕಶಿರೋಮಣಿಗಳೆಂದು ನಿಮ್ಮ ಅಭಿಪ್ರಾಯವಿರಬಹುದು. ಮಿತ್ರರೇ, ನಾವು ಸಾತ್ವಿಕರಲ್ಲ; ತಾಮಸರು; ಕ್ಷಮಾಗುಣವುಳ್ಳ ಶೂರರಲ್ಲ; ಕೈಲಾಗದ ಹೇಡಿಗಳು; ನಾವು ರಾಜಕೀಯ ಯುದ್ಧಕ್ಕೆ ಹೋಗಬೇಕಾಗಿಲ್ಲ; ಆದರೆ ನಾವು ಮಾಡುವ ಜೀವನ ಯುದ್ಧಕ್ಕೇ ತೇಜಸ್ಸು, ಧೈರ್ಯ, ಸ್ಥೈರ್ಯ ಅಭಿಮಾನ ಇವು ಬೇಕಾಗಿವೆ. ಅದಕ್ಕೋಸ್ಕರ "ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧತ!" ಏಳಿ, ಎಚ್ಚೆತ್ತುಕೊಳ್ಳಿ, ವೀರರಸಪೂರಿತವಾದ ಈ ಐತಿಹಾಸಿಕ ಕಾದಂಬರಿಗಳನ್ನು ಓದಿ ವೀರರಸವನ್ನು ಪಾನಮಾಡಿ, ಉತ್ಸಾಹರಹಿತವಾದ ಹೃದಯಗಳಲ್ಲಿ ಜೀವವನ್ನು ತುಂಬಿಕೊಳ್ಳಿ; ಧರ್ಮಬುದ್ಧಿಯನ್ನು ಸಂಚಾರಮಾಡಿಕೊಳ್ಳಿ; ಸ್ವದೇಶ ಸ್ವಜನಾಭಿಮಾನಗಳನ್ನು ತುಂಬಿಕೊಳ್ಳಿ!

ಈ ಗ್ರಂಥಗಳನ್ನೇ ಓದದೆ, ವಿಚಾರವನ್ನೇ ಮಾಡದೆ, ಮಲಗಿನಿದ್ದೆ ಹೋಗುತ್ತಿದ್ದರೆ ಅವುಗಳ ಗುಣಾವಗುಣಗಳು ಹೇಗೆ ಗೊತ್ತಾಗಬೇಕು? ಅದರ ಫಲವು ಮೈಗೆ ಅಂಟಿ ನಾವು ಹೇಗೆ ಪುಷ್ಟರಾಗಬೇಕು? ಈಗ ನೀವು ವಿದ್ಯಾರ್ಥಿಗಳು; ನಿಮಗೆ ವ್ಯಾಸಂಗವೇ ತಪಸ್ಸು; ಆದ್ದರಿಂದ ಸೋಮಾರಿತನವನ್ನು ಬಿಟ್ಟು ಓದುವುದಕ್ಕೆ ಮೊದಲು ಮಾಡಿ; ಗ್ರಂಥಗಳನ್ನು ಬರೆಯುವುದಕ್ಕೆಂದು ಈಗಲೇ ಹೊರಡಬೇಡಿ; ಮಲಗಿ

ನಿದ್ದೆ ಹೋಗುತ್ತಿರುವ ನಿಮ್ಮನ್ನು ಎಬ್ಬಿಸಿ ಕರ್ತವ್ಯ ತತ್ಪರರನ್ನಾಗಿ ಮಾಡಿ, ನಿಮ್ಮನ್ನು ಹೇಗಾದರೂ ಮಾಡಿ ಹುರಿಗೊಳಿಸಿ, ಓದುವ ಹಾಗೆ ಮಾಡಬೇಕೆಂಬ ಮತ್ತು ಮುಂದೆ ನಮ್ಮ ದೇಶದ ಚರಿತ್ರೆಯ ಮೇಲೆ ಇಂಥ ಗ್ರಂಥಗಳನ್ನು ಬರೆಯಬೇಕೆಂದು ಸೂಚಿಸುವ ಉದ್ದೇಶದಿಂದಲೇ ಈ ಉಪನ್ಯಾಸವನ್ನು ಬರೆದು ನಿಮ್ಮ ಮುಂದೆಹೇಳಿರುವುದರಿಂದ ಈ ಉಪನ್ಯಾಸವು ಆಮೂಲಾಗ್ರವಾಗಿ ಹೆಸರಿಗೆ ತಕ್ಕಂತೆಯೇ ಇಲ್ಲದಿರಬಹುದು. ಆದರೆ ಪುನಃ ಪುನಃ ಹೇಳುವೆನೇನೆಂದರೆ—ನೀವು ಹೀಗೆಯೇ ಇದ್ದರೆ ನಿಮಗೆ ಯೂನಿವರ್ಸಿಟಿಯವರೂ ಸಹಾಯ ಮಾಡಲಾರರು; ಸರ್ಕಾರವೂ ಸಹಾಯ ಮಾಡಲಾರದು; ಇಹವೂ ಸಿಕ್ಕದು; ಪರವೂ ಸಿಕ್ಕದು. ಈ ನಿರ್ಜೀವವಾದ, ಅಭಿಮಾನಶೂನ್ಯವಾದ, ಜೀವಚ್ಛವ ಯೋಗ್ಯವಾದ ಜೀವನವನ್ನು ಕಿತ್ತು ಒಗೆಯಿರಿ; ನಿಮ್ಮ ದೇಶದ ಸಾಹಿತ್ಯವನ್ನೂ ಚರಿತ್ರೆಯನ್ನೂ ಓದಿ; ಇಂಗ್ಲಿಷಿನಲ್ಲಿ ಓದಬಹುದಾದ ಉತ್ತಮೋತ್ತಮವಾದ ಸಾಹಿತ್ಯವನ್ನು ಓದಿ; ಮುಂದೆ ನಮಗೂ ನಮ್ಮ ದೇಶಕ್ಕೂ ಹೇಗೆ ಮಂಗಳವಾಗುವುದೆಂಬುದನ್ನು ವಿಚಾರಮಾಡಿ ಆ ಸದುದ್ದೇಶವನ್ನು ಈಡೇರಿಸಿ! ಒಕ್ಕಟ್ಟಿರಲಿ! ಪ್ರೀತಿಯಿರಲಿ! ಇವಿಲ್ಲದೆ ಹಿಂದೆ ನಮ್ಮ ದೇಶದಲ್ಲಿ ಎಂಥ ಅನರ್ಥಗಳು ನಡೆದಿವೆ ಎಂಬುದನ್ನು ಮನಸ್ಸಿಗೆ ತಂದುಕೊಳ್ಳಿ! ಒಕ್ಕಟ್ಟಿನಿಂದಲೂ, ಬಲದಿಂದಲೂ, ಉತ್ಸಾಹದಿಂದಲೂ ಒಂದು ಹಿಡಿ ಜನರನ್ನು ಕಟ್ಟಿಕೊಂಡು ಶಿವಾಜಿಯು ಎಂಥ ರಾಜ್ಯಸ್ಥಾಪನೆ ಮಾಡಿದನೆಂಬುದನ್ನು ಜ್ಞಾಪಕಕ್ಕೆ ತಂದುಕೊಳ್ಳಿ! ಮಿತ್ರರೇ, "ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧತ"—ಏಳಿ, ಎಚ್ಚೆತ್ತುಕೊಳ್ಳಿ! ಇಷ್ಟಾರ್ಥಗಳನ್ನು ಪಡೆದು ಸುಖಿಯಾಗಿ.

೧೯೧೯.

# ಮೈಸೂರು ಚರಿತ್ರೆಯ ಮೇಲೆ ಕಾದಂಬರಿಗಳನ್ನು ಬರೆಯುವುದಕ್ಕೆ ಇರತಕ್ಕ ಸಾಮಗ್ರಿಗಳು

## ಪೀಠಿಕೆ

ಬಂಕಿಂಚಂದ್ರರ ಮತ್ತು ಆಪ್ಟೆಯವರ ಕಾದಂಬರಿಗಳನ್ನು*ಓದುತ್ತಿರುವಾಗ ಅವುಗಳಲ್ಲಿರುವ ಉತ್ಸಾಹಾಭಿಮಾನಜನಕವಾದ ವೀರರಸ, ಶಕ್ತಿ ಜ್ಞಾನದಾಯಕವಾದ ಧರ್ಮನಿಷ್ಠೆ ಇವುಗಳ ಜೊತೆಯಲ್ಲಿ ಪಾಠಕರಿಗೆ ಮತ್ತೊಂದು ವಿಶೇಷವು ಗೋಚರವಾಗದಿರದು. ಅದೇನೆಂದರೆ ಅವುಗಳಲ್ಲಿರುವ ಉಜ್ವಲವಾದ ಜಾತೀಯ ಅಥವಾ ದೇಶೀಯ ಕಾಂತಿ ; ಇವುಗಳಲ್ಲಿ ಸ್ಪಷ್ಟವಾಗಿ ಕಾಣಬರುವ ಹಿಂದೂ ನಡೆವಳಿಕೆ ಆಚಾರ ರೀತಿ ನೀತಿಗಳುಳ್ಳ ಸನ್ನಿವೇಶ; ಬಂಗಾಳ ರಾಜಪುತ್ರಸ್ಥಾನ ಅಥವಾ ಮಹಾರಾಷ್ಟ್ರ ರಾಜ್ಯದ ಸಹಜವಾದ ಭಾವಚಿತ್ರ. ಹೀಗೆಂದ ಕೂಡಲೆ, ಐತಿಹಾಸಿಕ ಕಾದಂಬರೀಕಾರನು ಚರಿತ್ರೆಯ ವಿಚಾರವಾಗಿ ಬರೆಯುತ್ತ ಹೋಗುವುದರಿಂದ ಅವನು ಕಾಲದೇಶ ವರ್ತಮಾನ (ಸನ್ನಿವೇಶ) ಗಳಿಂದ ಬದ್ಧನಾಗಿರುವನೆಂದೂ ಇದರಲ್ಲಿ ವಿಶೇಷವೇನೂ ಇಲ್ಲವೆಂದೂ ಹೇಳಬಹುದು. ಆದರೆ ಈ ಗುಣಕ್ಕೆ ಇಂಥ ಬಂಧನಗಳು ಯಾವುವೂ ಮುಖ್ಯ ಕಾರಣವಲ್ಲವೆಂದೂ ಗ್ರಂಥಕರ್ತರಲ್ಲಿದ್ದ ಅಮೋಘವಾದ ದೇಶಾಭಿಮಾನವೇ ಕಾರಣವೆಂದೂ ನನ್ನ ಅಭಿಪ್ರಾಯ. ಇದು, ನಾನು ಹಿಂದೆ ಹೇಳಿರುವಂತೆ, ಬಂಕಿಂಚಂದ್ರರ ಇತರ ಗ್ರಂಥಗಳನ್ನು ನೋಡಿದರೆ ಸ್ಪಷ್ಟವಾಗಿ ಕಾಣಬರುವುದು ; ಸ್ವದೇಶ, ಸ್ವಧರ್ಮ, ಸ್ವಜನರು, ಎಂದರೆ ಅವರಿಗೆ ಎಷ್ಟು ಅಭಿಮಾನ! ನಮ್ಮ ತಲೆಯ ಮೇಲೆ ಮೊಟಕಿ ನಾವು ಮೂರು

---

* ಇವುಗಳ ಪ್ರಸ್ತಾಪವು "ಕನ್ನಡ ಐತಿಹಾಸಿಕ ಕಾದಂಬರಿಗಳು" ಎಂಬ ಹಿಂದಿನ ಉಪನ್ಯಾಸದಲ್ಲಿ ಬಂದಿದೆ.

ಮಾವಿನ ಕಾಯಿ ಉದ್ದವಿರುವ ಅಯೋಗ್ಯರೆಂದು ಹೇಳುವುದಕ್ಕೆ ಬರುವ ಪಾಶ್ಚಾತ್ಯರ ಮೇಲೆ ಎಷ್ಟು ಆಗ್ರಹ! ಐತಿಹಾಸಿಕ ಕಾದಂಬರಿಗಳನ್ನು ಬಿಟ್ಟು ಅವರ ಇತರ ಕಾದಂಬರಿಗಳನ್ನೂ ನೋಡಿ! ವಿಷವೃಕ್ಷ ಮುಂತಾದ ಕಲ್ಪಿತ ಕಥೆಗಳು ನಡೆಯುವುದೂ ಬಂಗಾಳದಲ್ಲಿಯೆ; ಬೇಕಾದರೆ ಆ ಸ್ಥಳಗಳನ್ನು ಬಂಗಾಳ ದೇಶದ ಭೂಪಠದಲ್ಲಿ ಬೆರಳಿನಿಂದ ಮುಟ್ಟಿ ತೋರಿಸಬಹುದು; ಕೊನೆಗೆ ಅವರ ಗ್ರಂಥಗಳಲ್ಲಿ ಬರುವ ಹುಲಿ ಕರಡಿಗಳೂ ಬಂಗಾಳ ದೇಶದವುಗಳೇ; ಅವು ಇರುವುದು ಬಂಗಾಳ ದೇಶದ ಕಾಡಿನಲ್ಲಿಯೇ; ಲೋಕರಹಸ್ಯವನ್ನು ಬೋಧಿಸಿರುವ ಬೃಹಲ್ಲಾಂಗೂಲ ವ್ಯಾಘ್ರಮಹಾಶಯರು ಉಪನ್ಯಾಸಗಳನ್ನು ಕೊಟ್ಟದ್ದೂ ಗಂಗಾಮುಖದಲ್ಲಿರುವ ಸುಂದರ ವನದಲ್ಲಿಯೆ!

ಜನಗಳಲ್ಲಿ ನಿಜವಾದ ದೇಶಾಭಿಮಾನ ತುಂಬಿತೆಂದರೆ ಅದು ಅವರ ಆಡುವ ಒಂದೊಂದು ಮಾತಿನಲ್ಲಿಯೂ ಬರೆಯುವ ಒಂದೊಂದು ಅಕ್ಷರದಲ್ಲಿಯೂ ಮಾಡುವ ಒಂದೊಂದು ಕೆಲಸದಲ್ಲಿಯೂ ನುಸಿದು ನುಗ್ಗಿ ದಾರಿ ಮಾಡಿಕೊಂಡು ಬರುತ್ತದೆ. ನಮ್ಮಲ್ಲಿ ಇಂಥ ದೇಶಾಭಿಮಾನ ಸೂಚಕಗಳಾದ ಗ್ರಂಥಗಳೆಷ್ಟಿವೆ? ಬರೆದರೆ ಕಲ್ಪಿತ ಕಥೆಗಳು; ಅವು ನಡೆಯುವುದು ಯಾವುದೋ ಅನಾಮಧೇಯ ಪ್ರಪಂಚದಲ್ಲಿ; ಅದು ಭೂಗ್ರಹದ ಮೇಲೆಯೇ ನಡೆಯುತ್ತದೆಯೋ ಚಂದ್ರ ಅಥವಾ ಅಂಗಾರಕ ಗ್ರಹದ ಮೇಲೆ ನಡೆಯುತ್ತದೆಯೋ ಸಂದೇಹ! ಈ ಎರಡು ವಿಧವಾದ ಗ್ರಂಥಗಳನ್ನೂ ಓದುತ್ತ ಓದುತ್ತ ನಮಗೆ, ಕನ್ನಡಿಗರಾದ ನಮಗೆ, ಮೈಸೂರು ರಾಜ್ಯನಿವಾಸಿಗಳಾದ ನಮಗೆ, ನಮ್ಮ ದೇಶದಲ್ಲಿಯೂ ಇಂಥ ಸಂಗತಿಗಳು ನಡೆದಿರಬಹುದೇ, ನಡೆಯಬಹುದೇ, ಅವುಗಳನ್ನು ಯಾರಾದರೂ ಚಿತ್ರಿಸಿದ್ದಾರೆಯೇ, ಚಿತ್ರಿಸುವುದಕ್ಕೆ ಸಾಧ್ಯವೇ, ಎಂಬ ಯೋಚನೆಯು ಹುಟ್ಟದಿರಲಾರದು. ಮೈಸೂರಿನಲ್ಲಿ ನಡೆಯಲಿ, ಬಿಡಲಿ; ಇಂಡಿಯ ದೇಶವು ನಮ್ಮ ದೇಶವೇ ಅಲ್ಲವೆ? ವಾಲ್ಮೀಕಿ, ವ್ಯಾಸ, ಶುಕ, ಕಾಳಿದಾಸ, ಶಂಕರ, ಮುಂತಾದವರು ನಮ್ಮವರೇ ಅಲ್ಲವೆ? ಅದರಂತೆ ರಾಜಪುತ್ರರೂ ಬಂಗಾಳಿಗಳೂ, ಮರಾಟಿಯವರೂ ನಮ್ಮವರೇ ಅಲ್ಲವೆ? ಅವರ ಕಥೆಗಳೂ ಅವರ ವಿಷಯವಾದ ಗ್ರಂಥಗಳೂ ನಮ್ಮವೇ ಅಲ್ಲವೆ? ಅವುಗಳಲ್ಲಿ

ನಾವು ಆಸಕ್ತಿಯನ್ನು ವಹಿಸುವುದಿಲ್ಲವೆ? ಅವುಗಳಿಂದ ನಾವು ಉಪಯೋಗವನ್ನೂ ಆನಂದವನ್ನೂ ಪಡೆಯುವುದಿಲ್ಲವೆ?—ಎಂದು ಕೇಳಬಹುದು; ನಿಜ. ಅವರೆಲ್ಲರೂ ನಮ್ಮವರೆ, ನಮ್ಮ ಸಂಸಾರಕ್ಕೆ ಸೇರಿದವರೆ; ನಮ್ಮ ಕಷ್ಟಸುಖಗಳಲ್ಲಿ ಭಾಗಿಗಳಾದವರೆ. "ಉದಾರಚರಿತಾನಾಂ ತು ವಸುಧೈವ ಕುಟುಂಬಕಂ'' ಆದರೆ ನಾವೆಲ್ಲರೂ ಹಿಂದುಗಳಾದರೂ, ಕನ್ನಡಿಗರು ತೆಲುಗರು ಮರಾಟಿಯವರು ಬಂಗಾಳಿಗಳು ಎಂಬ ಭೇದಭಾವವಿರುವತನಕ, ಎಲ್ಲರೂ ಏಕರೀತಿಯಾಗಿ ಒಂದೇ ಭಾಷೆಯನ್ನು ಆಡುತ್ತ ಅದನ್ನೇ ಎತ್ತಿ ಅದರ ಸಾಹಿತ್ಯವನ್ನೇ ಅಭಿವೃದ್ಧಿಪಡಿಸುವ ಕಾಲ ಬರುವತನಕ, ಕನ್ನಡ ಸಾಹಿತ್ಯವನ್ನು ಬೆಳೆಸಬೇಕೆಂಬ ಭಾವವಿರುವತನಕ, ಕನ್ನಡಿಗರಾದ ನಾವು ದೇಶವನ್ನೂ ಭಾಷೆಯನ್ನೂ ಕೈಬಿಡಬಾರದು, ಅಲಕ್ಷ್ಯಮಾಡಬಾರದು; ಮನೆಯಲ್ಲಿ ವೃದ್ಧರಾದ ತಾಯಿತಂದೆಗಳು ಹೊಟ್ಟೆಗಿಲ್ಲದೆ ಹರುಕು ಬಟ್ಟೆಯನ್ನುಟ್ಟುಕೊಂಡು ತಿರುಗಾಡುತ್ತಿರುವಾಗ ಮೈಸೂರು ದೇಶವೆಲ್ಲ ನಮ್ಮದೆಂದು ಹೇಳುತ್ತ ದಾನಧರ್ಮಗಳಿಗೆ—ಅವು ಎಷ್ಟೇ ಆವಶ್ಯಕವಾಗಿರಲಿ—ಚಂದಾಕೊಡುವುದಕ್ಕೆ ಹೋಗಬಾರದು; ಇದರ ಮೇಲೆ ನಮ್ಮ ದೇಶದಲ್ಲಿ ಎಂಥೆಂಥ ಕಣ್ಣಿಗೆ ಹಬ್ಬವನ್ನೀಯುವ ಪ್ರದೇಶಗಳಿವೆ! ಮನಸ್ಸಿಗೆ ಆನಂದವನ್ನಿತ್ತು ಮೂಕನನ್ನು ವಾಚಾಲನನ್ನಾಗಿ ಮಾಡುವಂಥ ರಮಣೀಯವಾದ ಸ್ಥಳಗಳಿವೆ! ಹೃದಯದಲ್ಲಿ ವೀರರಸವನ್ನು ತುಂಬಿ ಹೆಳವನನ್ನೂ ಹಾರುವಂತೆ ಮಾಡುವ ಎಂಥೆಂಥ ಐತಿಹಾಸಿಕ ಘಟನಾವಳಿಗಳಿವೆ! ಮನೆಯ ಬಾವಿಯಲ್ಲಿ ಅಮೃತದಂಥ ಸೀನೀರನ್ನು ಇಟ್ಟುಕೊಂಡು ಕೆರೆಗೆ ಹೋಗುವ ನಮ್ಮ ಹುಚ್ಚನ್ನು ಏನೆಂದು ಹೇಳೋಣ! ಮೈಸೂರಿನಲ್ಲಿ ಓದುವ ವಿದ್ಯಾರ್ಥಿಗಳಿಗೆ ಇಂಥ ನೋಟಗಳನ್ನು (ಅವು ಮೈಸೂರಿಗೆ ಹತ್ತಿರದಲ್ಲಿರುವುದರಿಂದ)ನೋಡುವುದಕ್ಕೆ ಸ್ವಲ್ಪವಾದರೂ ಅವಕಾಶವಿದೆ. ಬೆಂಗಳೂರಿನ ವಿದ್ಯಾರ್ಥಿಗಳಿಗೆ, ಸ್ಕೂಲಿನಿಂದ ಮನೆಗೂ ಮನೆಯಿಂದ ಸ್ಕೂಲಿಗೂ ಓಡಿ ಓಡಿ ಬರುತ್ತ, ಸಾಲು ಸಾಲಾಗಿರುವ ಅಂಗಡಿಗಳನ್ನೂ ಮನೆಗಳನ್ನೂ ನೋಡುತ್ತ, ಅತ್ತಲಾಗಿ-ಇತ್ತಲಾಗಿ-ಕೂಡ-ನೋಡದೆ-ತಮ್ಮ-ಕಾರ್ಯಗಳ-ಮೇಲೆಯೇ-ಮನಸ್ಸಿಟ್ಟು-ಹೊಟ್ಟೆಯ-ಪಾಡಿಗಾಗಿ-ದುಡಿ

ಯುವುದಕ್ಕೆ–ಗಡಬಿಡಿಯಿಂದ–ಹೋಗುತ್ತಿರುವ ಅಥವಾ ದ್ರವ್ಯಾರ್ಜನೆಗಾಗಿ–ನಾನಾ ವಿಧವಾದ–ವಾಹನಗಳಲ್ಲಿ–ಕುಳಿತು–ಹಾರಿ ಹೋಗುತ್ತ–ಹಿಂದೆ–ಮುಂದೆ–ಬರುವವರಿಗೆ–ಬೇಡವೆಂದರೂ ಹೊಟ್ಟೆತುಂಬ–ಧೂಳು–ಕುಡಿಸುವ ಜನರ ಸಂದಣಿಯನ್ನು ನೋಡುತ್ತ, ಸಂತೆಯ ಹೊತ್ತಿಗೆ ಮೂರು ಮೊಳ ನೇಯುವುದರಲ್ಲಿಯೇ ಇದ್ದ ಹೊತ್ತೆಲ್ಲ ಕಳೆದು ಹೋಗುತ್ತದೆ. ಪರೀಕ್ಷೆಯಲ್ಲಿ "ಪ್ಯಾಸು" ಮಾಡುವುದನ್ನು ಬಿಟ್ಟರೆ ಅವರಿಗೆ ಮತ್ತೆ ಯಾವುದೂ ಬೇಕೂ ಇಲ್ಲ; (ಕೆಲವರಿಗಂತೂ ಎರಡು ತರಗತಿಗಳಲ್ಲಿ ಹಾಗೂ ಹೀಗೂ ಕನ್ನಡವನ್ನು ಓದಿ ಗೆದ್ದರೆ ಸಾಕಾಗಿದೆ. ಮೂರನೆಯ ವರ್ಷದಿಂದ ಕನ್ನಡದ ಕಾಟವೇ ಇಲ್ಲ! ಈ ಹಾಳು ಇಂಗ್ಲಿಷಿನ ಕಾಟವೂ ತಪ್ಪಿದರೆ ಸಾಕೆಂದು ಅವರ ಪ್ರಾರ್ಥನೆ!) ಅಪ್ಪಿತಪ್ಪಿ ಅವರು "ಟ್ರಿಪ್" ಹೋಗುವುದೆಂದರೆ ಕೋಲಾರದ ಚಿನ್ನದ ಗಣಿಗಳನ್ನು ನೋಡುವುದಕ್ಕೆ; ಅಲ್ಲಿ ಸಾಲುಸಾಲಾಗಿ ಮೂರು ಹೊತ್ತೂ ಹೊಗೆಯನ್ನು ಉಗುಳುತ್ತಿರುವ ಚಿಮಣಿಗಳಿಂದ ಕೂಡಿ ಇಂಗ್ಲಿಷ್ ಕಾರ್ಖಾನೆಯಂತೆ ಇರುವ ಪಟ್ಟಣವನ್ನು ನೋಡಲು ಹೋಗುವುದಕ್ಕೆ; ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿಯ ಕಾರ್ಖಾನೆಯನ್ನು ನೋಡಲು ಹೋಗುವುದಕ್ಕೆ; (ಅಲ್ಲಿಗೆ ಹೋದರೆ ಶಿವಸಮುದ್ರದ ಜಲಪಾತವನ್ನು ನೋಡಬೇಕೆಂಬ ಯೋಚನೆ ಬರುವುದಿಲ್ಲ); ಆಮೇಲೆ ಹೆಸರುಘಟ್ಟದ "ಪಂಪಿಂಗ್ ಸ್ಟೇಷನ್" ನ್ನು ನೋಡಲು ಹೋಗುವುದಕ್ಕೆ. ಇದಕ್ಕೆ ತಕ್ಕಂತೆ ನಮ್ಮ ಹುಡುಗರು ಓದುವ ಮೈಸೂರಿನ ಚರಿತ್ರೆಯೆಂದರೆ ಮ|| ಶ್ಯಾಮರಾಯರು ಬರೆದಿರುವ ಸಣ್ಣ ಪುಸ್ತಕ; ಅದನ್ನೂ ಮೂರನೆಯ ಕ್ಲಾಸಿನ ಮೇಲೆ ಓದಬೇಕಾದದ್ದಿಲ್ಲ! ಭೂಗೋಳವೋ ಇದರ ಅಣ್ಣ ತಮ್ಮ! ಮಗ್ಗಿಯ ಪುಸ್ತಕಗಳನ್ನು ಓದಿ ಮಗ್ಗಿಗಳನ್ನು ಕಲಿಯುವುದೂ ಇವುಗಳನ್ನು ಓದಿ ಮೈಸೂರು ದೇಶದ ವಿಷಯಗಳನ್ನು ತಿಳಿದುಕೊಳ್ಳುವುದೂ ಒಂದೇ! ಈಗ ಕನ್ನಡಕ್ಕೆ ಎಲ್ಲರೂ ತೋರಿಸುತ್ತಿರುವ ಅಸಡ್ಡೆಯಲ್ಲಿ, ಕನ್ನಡ ದೇಶದ ಚರಿತ್ರೆ ಭಾಷೆ ಸಾಹಿತ್ಯ ಕಲೆ ಮುಂತಾದ ನಾನಾ ವಿಷಯಗಳನ್ನು ಕಣ್ಣಾರ ನೋಡಬಹುದಾದ, ಅದಕ್ಕಿಂತಲೂ ಅತಿಶಯವಾಗಿ ಅಪೂರ್ವವಾದ ಸೃಷ್ಟಿಸೌಂದರ್ಯವನ್ನೂ, ಉದಾತ್ತಭಾವ

ಜನಕಗಳಾದ ಪುರಾತನ ಘಟನಾವಳಿಗಳನ್ನೂ ತಂದು ಮುಂದಿಟ್ಟು, ಉದ್ದಾಮ ಕವಿಗಳನ್ನು ನಿರ್ಮಾಣಮಾಡಬಲ್ಲ, ಸೊಬಗಿನ ಸುಗ್ಗಿಗಳಂತಿರುವ ಸ್ಥಳಗಳನ್ನು ನೋಡಿಕೊಂಡು ಬರಬೇಕೆಂದೂ, ಅದಕ್ಕಾಗಿ ವೆಚ್ಚ ಮಾಡಿದ ಹಣವು ವ್ಯರ್ಥವಾಗುವುದಿಲ್ಲವೆಂದೂ ಹೇಳಿದರೆ ಆ ಸೂಚನೆಯನ್ನು ಮೆಚ್ಚುವರಾರು? ಒಪ್ಪುವವರಾರು? ನಮ್ಮಲ್ಲಿ ಎಷ್ಟು ಜನ ಶೃಂಗೇರಿ, ಚಿತ್ರದುರ್ಗ, ನಂದೀದುರ್ಗ, ಬಾಬಾಬುಡ್ಡನಬೆಟ್ಟ, ಶಿವಗಂಗೆಯಬೆಟ್ಟ, ಗೋಪಾಲಸ್ವಾಮಿಯಬೆಟ್ಟ ಇವುಗಳನ್ನು ನೋಡಿದ್ದಾರೆ? ಗೋಪಾಲಸ್ವಾಮಿಯ ಬೆಟ್ಟವನ್ನು ನಾನು ಹೋಗಿ ನೋಡಿದಾಗ, ನಾನು ಅದುವರೆಗೂ ಅದನ್ನು ನೋಡಿರಲಿಲ್ಲವೆಂದೂ ಅದರ ಸೊಬಗನ್ನು ಮೆಚ್ಚಿ ಆನಂದಾನುಭವ ಮಾಡುವುದಕ್ಕೆ ಶಕ್ತರಾಗಿರುವ ಅನೇಕ ಮೈಸೂರು ದೇಶದವರು ಅದನ್ನು ನೋಡಿಲ್ಲವೆಂದೂ ನನಗೆ ಸಂಕಟವಾಗಿ ಕಣ್ಣಲ್ಲಿ ನೀರುಬಂತು! ಅದನ್ನು ವರ್ಣನೆಮಾಡುವುದಕ್ಕೆ ನನಗೆ ತಕ್ಕ ವಾಕ್ಸಂಪತ್ತಿ ಇಲ್ಲ. ಅದರ ಶಿಖರನ್ನು ಸೇರಬೇಕಾದರೆ ಈಗ ಹೊಸದಾಗಿ ಶ್ರೀಮನ್ಮಹಾರಾಜರವರು ದಾರಿಮಾಡಿಸಿದ್ದಾರೆ; ಅದರ ಮೇಲೆ ನಡೆಯುತ್ತ ನಡೆಯುತ್ತ ಹೋದರೆ ಬೆಟ್ಟದ ಮೇಲೆ ಹತ್ತುತ್ತಿದ್ದೇವೆಂಬ ಭಾವನೆಯೇ ಬರುವುದಿಲ್ಲ. ಕೆಳಗೆ ನೋಡಿದರೆ ದಟ್ಟವಾದ ಕಾಡು! ನೆಲವೇ ಕಾಣಿಸಲೊಲ್ಲದು; ಎಲ್ಲಿ ನೋಡಿದೂ ಕಲ್ಲಿಲ್ಲ; ಬಂಡೆಯಿಲ್ಲ; ಕುರುಚಲು ಗಿಡಗಳಿಲ್ಲ; ಮುಳ್ಳುಗಳು ಕೂಡ ಇಲ್ಲ; ಮೃದುವಾದ ಕರಿಯಮಣ್ಣಿನ ನೆಲ; ಅದನ್ನು ಮುಚ್ಚಿಕೊಂಡು, ಸ್ವಲ್ಪವೂ ಬಿಡದಂತೆ ದಟ್ಟವಾಗಿ ಪರ್ವತದ ಮೇಲೆಲ್ಲ ಹಸುರು ಬಣ್ಣದ ಮೊಖಮಲ್ಲು ಬಟ್ಟೆಯನ್ನು ಸುಕ್ಕಿಲ್ಲದಂತೆ ಹೊದ್ದಿಸಿದ ಹಾಗಿರುವ ಹುಲುಸಾದ ಹಸುರು ಹುಲ್ಲಿನ ಬೆಳೆ; ಪ್ರಕೃತಿಯೇ ಸೌಮ್ಯರೂಪವನ್ನು ಧಾರಣೆಮಾಡಿ ನಗುತ್ತ ನಗುತ್ತ ಗೋಪಾಲಸ್ವಾಮಿಯ ಸೇವೆಗೆ ನಿಂತು ಅವನ ದರ್ಶನಕ್ಕೆಂದು ಬರುವ ಯಾತ್ರಿಕರನ್ನು ತನ್ನ ಮಕ್ಕಳಂತೆ ಎತ್ತಿ ಆಡಿಸುತ್ತ ಕರೆದುಕೊಂಡು ಹೋಗುವಂತೆ ಭಾವನೆಯುಂಟಾಗುವುದು. ಹಾಗೇ ಇದನ್ನು ನೋಡುತ್ತ, ನೋಡುತ್ತ, ಮೇಲಕ್ಕೆ ಹೋಗುತ್ತಿದ್ದೇವೆಂಬ ಜ್ಞಾನವೇ ಇಲ್ಲದೆ ಎಡಗಡೆಗೆ ತಿರುಗಿನೋಡಲು ಎಂಥ ದಿವ್ಯ ನೋಟ! ಪೂರ್ವ

ಪಶ್ಚಿಮ ಘಟ್ಟಗಳೆಂಬ ಎರಡು ತೋಳುಗಳನ್ನು ಚಾಚಿಕೊಂಡು ನಿಂತಿರುವ ಪ್ರಶಾಂತವೂ ಗಂಭೀರವೂ ಆದ ನೀಲಗಿರಿಯ ಪರ್ವತ; ದೂರದಲ್ಲಿದ್ದರೂ ಕೈನೀಡಿದರೆ ಸಿಕ್ಕುವಷ್ಟು ಹತ್ತಿರದಲ್ಲಿರುವಂತೆ ತೋರುವ ಪರ್ವತರಾಜ! ಮನೋಹರವಾದ ನೀಲವರ್ಣ! ಅದರ ಮೇಲೆ, ವಿಶೇಷವಾಗಿ ಪರ್ವತದ ವಕ್ಷಸ್ಥಳದಲ್ಲಿ, ಗಂಗಾ ಪ್ರವಾಹದಂತೆ ತರಂಗತರಂಗಗಳ ಆಕಾರವಾಗಿ ಆ ಪರ್ವತದ ಉದ್ದಕ್ಕೂ ಹೋಗುತ್ತಿರುವ ಶುಭ್ರವಾದ ಮೇಘಪಂಕ್ತಿ; ಇಂಥ ಪರ್ವತದ ಅಚಲತೆ ಸ್ಥೈರ್ಯ ಔನ್ನತ್ಯ ಗಾಂಭೀರ್ಯಗಳನ್ನು ನೋಡಿದರೆ ಹೇಗೋ ನಮ್ಮ ಮನಸ್ಸು ಅಚಲವೂ ಸ್ಥಿರವೂ ಉನ್ನತವೂ ಗಂಭೀರವೂ ಆಗಿ ಅದರಲ್ಲಿದ್ದ ತುಚ್ಛವಾದ ಯೋಚನೆಗಳೆಲ್ಲವೂ ಮಾಯವಾಗಿ ಹೃದಯದಲ್ಲಿ ಅನಿರ್ವಚನೀಯವಾದ ಕೇವಲ ಒಂದೇ ಒಂದು ಅಪೂರ್ವವಾದ ಉದಾತ್ತಭಾವವು ತುಂಬಿಕೊಂಡು ಅಲ್ಲಿ ಆಧಿಪತ್ಯಮಾಡುತ್ತ ಕುಳಿತುಕೊಳ್ಳುವುದು! ಇದಕ್ಕಿಂತಲೂ ಸಹಸ್ರಪಾಲು ಮಹಿಮಾಶಾಲಿಯಾದ ಹಿಮವಂತನನ್ನು ನೋಡಿದ ಕಾಳಿದಾಸನು ಕುಮಾರಸಂಭವದ ಆದಿಯಲ್ಲಿ "ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ" ಎಂದು ಹೇಳುವಾಗ ಆತನ ಹೃದಯದಲ್ಲಿ ಎಂಥ ಅಪೂರ್ವವಾದ ಅನುಭವವುಂಟಾಗಿರಬಹುದು! ಅದನ್ನು ಸ್ವಲ್ಪಮಟ್ಟಿಗಾದರೂ ತಿಳಿಯಬೇಕಾದರೆ ಇಂಥ ಸ್ಥಳಗಳನ್ನು ನೋಡದಿದ್ದರೆ ಹೇಗೆ? ಆ ಶ್ಲೋಕದ ಗಂಭೀರವಾದ ಸರಣಿಯನ್ನೂ, 'ದೇವತಾತ್ಮಾ' 'ನಗಾಧಿರಾಜಃ' ಎಂಬ ಶಬ್ದಗಳ ಸೊಗಸನ್ನೂ ತಿಳಿಯುವ ಬಗೆ ಹೇಗೆ? ಇದನ್ನು ಕಾಳಿದಾಸನು ದೇವತಾಸ್ವರೂಪವೆಂದೂ, ನಮ್ಮವರು ಕೈಲಾಸವು ಈಶ್ವರನಿಗೆ ವಾಸಸ್ಥಾನವೆಂದೂ, ಗ್ರೀಕರು ಒಲಿಂಪಸ್ ಬೆಟ್ಟವು ದೇವತೆಗಳಿರುವ ಸ್ಥಳವೆಂದೂ ಹೇಳಿದರೆ ಆಶ್ಚರ್ಯವೇನು?

ನಮ್ಮ ಮೈಸೂರು ದೇಶದಲ್ಲಿ ಇಂಥ ಸ್ಥಳಗಳಿರಬೇಕಾದರೆ ಅವನ್ನು ನೋಡಿ ಆನಂದಪಡದಿದ್ದಮೇಲೆ ಏನು ಪ್ರಯೋಜನ? ಅವುಗಳ ಮೇಲೆ ಬರೆಯದಿದ್ದರೆ ಏನು ಪ್ರಯೋಜನ? ವರ್ಡ್ಸ್‌ವರ್ತ್ ಮುಂತಾದ ಕವಿಗಳ ಪದ್ಯಗಳನ್ನು ಓದಿ ಏನು ಪ್ರಯೋಜನ? ಇದರಿಂದ ನಾವೆ

ಲ್ಲರೂ ಕವಿಗಳಾಗಬೇಕೆಂದು ಹೇಳುವುದಿಲ್ಲ. ಆ ಕಾಲವೂ ಬರುವುದು; ಆದರೆ ಅದಕ್ಕೆ ಇನ್ನೂ ಸ್ವಲ್ಪ ದಿನ ಬೇಕೆಂದು ತೋರುವುದು.

ನಾನು ನೋಡಿರುವ ಕೆಲವು ಸ್ಥಳಗಳಲ್ಲಿ ಒಂದೇ ಒಂದರ ವಿಚಾರ ವಾಗಿ ಇಲ್ಲಿ ಸ್ವಲ್ಪ ಸೂಚಿಸಿ ನಮ್ಮ ದೇಶದಲ್ಲಿ ಗ್ರಂಥನಿರ್ಮಾಣಕ್ಕೆ ಎಂಥ ಸಾಮುಗ್ರಿ ಇದೆ ಎಂದು ತೋರಿಸಿದ್ದೇನೆ. ಇದರ ಹಾಗೆ ಮೈಸೂರು ದೇಶದ ಮೇಲೆ ಕಾದಂಬರಿಗಳನ್ನು ಬರೆಯುವಂತೆ ಪ್ರೇರೇಪಿಸುವ, ಕತ್ತುಹಿಡಿದು ದಬ್ಬಿ ನಿರ್ಬಂಧಪಡಿಸುವ, ಎಷ್ಟೋ ಸ್ಥಳಗಳೂ ಘಟನಾ ವಳಿಗಳೂ ಇವೆ. ಇವುಗಳನ್ನೆಲ್ಲ ವಿಸ್ತಾರವಾಗಿ ವರ್ಣಿಸುತ್ತ ಹೋದರೆ ಮುಗಿಯುವುದು ಎಂದಿಗೆ?

ಮೈಸೂರು ಚರಿತ್ರೆಯ ಮೇಲೆ ಕಾದಂಬರಿಗಳನ್ನು ಬರೆಯುವು ದಕ್ಕೆ ಮೊದಲು ಸಾಮುಗ್ರಿ ಬೇಕು; ಆಮೇಲೆ ಅದನ್ನು ಉಪಯೋಗಿಸ ಬಲ್ಲ ಕವಿಯಾಗಬೇಕು; ಅದನ್ನು ಉಪಯೋಗಿಸುವ ರೀತಿ ಯಾವು ದೆಂದು ಅವನು ತಿಳಿದಿರಬೇಕು. ಇದರಲ್ಲಿ ಮೊದಲನೆಯ ವಿಚಾರ ವನ್ನು ತೆಗೆದುಕೊಂಡು, ಇಂಥ ಗ್ರಂಥಗಳಿಗೆ ಏನೇನು ಸಾಮುಗ್ರಿಗಳಿವೆ ಎಂಬುದನ್ನು ಈ ಉಪನ್ಯಾಸದಲ್ಲಿ ಸೂಚಿಸುತ್ತೇನೆ. ಏಕೆಂದರೆ ಅನೇಕ ರಿಗೆ ಮ|| ಶ್ಯಾಮುರಾಯರ ಚರಿತ್ರೆಯನ್ನು ಬಿಟ್ಟರೆ ಬೇರೆ ಮೈಸೂರು ಚರಿತ್ರೆಯೇ ಇಲ್ಲವೆಂದು ಭಾವನೆ. ಕೊನೆಗೆ ಅವರ ಗ್ರಂಥದ ಎರಡ ನೆಯ ಭಾಗವೊಂದುಂಟೆಂಬುದೂ ಅವರಿಗೆ ಗೊತ್ತಿಲ್ಲ. ಹೀಗಿರಲು ಅದು ಎಷ್ಟು ಆವಶ್ಯಕವೆಂದು ಹೇಳಬೇಕಾಗಿಲ್ಲ. ಸಮರ್ಥರಾದ ಬಂಕಿಂಚಂದ್ರ ರಂಥ ಗ್ರಂಥಕರ್ತರಿಗೆ ಚರಿತ್ರೆಯಲ್ಲಿ ಸರಿಯಾದ ಒಂದು ವಾಕ್ಯ ಸಿಕ್ಕಿ ದರೂ ಸಾಕು, ಅದರ ಮೇಲೆ ತಮ್ಮ ಪ್ರತಿಭಾಶಕ್ತಿಯಿಂದ, ರೇಷ್ಮೆ ಹುಳುವು ತಳತಳಿಸುವ ಗೂಡನ್ನು ಕಟ್ಟುವಂತೆ, ಹೇಗೋ ಸಾಮುಗ್ರಿ ಯನ್ನು ಕಲ್ಪಿಸಿಕೊಂಡು ಒಂದು ದಿವ್ಯಸುಂದರವಾದ ಕಾವ್ಯಭವನವನ್ನು ಕಟ್ಟಿಬಿಡುತ್ತಾರೆ. ಇಂಥವರಿಗೆ ಸೊಗಸಾದ ಕಥೆಗಳು ಸಿಕ್ಕಿದರೆ, ಅವು ನಡೆದ ಸ್ಥಳಗಳು ತಿಳಿದರೆ, ಆ ಕಾಲದ ಜನರ ನಡೆನುಡಿಗಳು ಗೊತ್ತಾದರೆ, ಏಳು ಅಂತಸ್ತಿನ ಉಪ್ಪರಿಗೆಯ ಮನೆಯನ್ನೇ ಕಟ್ಟಿಬಿಡುತ್ತಾರೆ. ಇಂಥ ಆಭರಣಗಳನ್ನು ಪಡೆಯುವುದಕ್ಕೆ ಕನ್ನಡಮಾತೆಗೆ ಪ್ರಾಪ್ತಿಬೇಕು. ಆಕೆಗೆ

ಅಂಥ ಆಭರಣಗಳನ್ನು ಒದಗಿಸಿಕೊಡುವ ಮಕ್ಕಳಿಗೂ ಪೂರ್ವಜನ್ಮ ಸುಕೃತದ ಫಲ ಬೇಕು. ಇಂಥವರು ನಮ್ಮಲ್ಲಿ ಯಾರಾದರೂ ಇದ್ದಾರೆಯೆ? ಇರಬಹುದು. ಮುಂದಂತೂ ಆಗಿಯೇ ಆಗುವರು; ಆಗಲೇ ಬೇಕು. ಈಗಲೂ ಕೆಲವರು ಚಚ್ಚೌಕನಾಗಿ ಬೇಜಾರಾಗದಂತೆ ಅನಂತವೂ ಸುಂದರವೂ ಆದ ನದಿಯ ಪ್ರವಾಹದಂತೆ ಮಾತನಾಡುವುದು ಪಾಠಕರ ಲಕ್ಷ್ಯಕ್ಕೆ ಬಂದಿರಬಹುದು. ಅಂಥವರು ಒಂದು ರವೆಯನ್ನು ಒಂದು ಬೆಟ್ಟವನ್ನಾಗಿ ಮಾಡುವರು. ಅರೇಬಿಯನ್ ನೈಟ್ಸ್‌ನ ಒಂದು ಕಥೆಯಲ್ಲಿ ಬಾಯಿಕಟ್ಟಿದ ಒಂದು ಪಾತ್ರೆಯ ಮುಚ್ಚಲು ತೆರೆದ ಕೂಡಲೆ ಅದರಿಂದ ಹೊರಟ ಹೊಗೆಯು ಭೂಮ್ಯಾಕಾಶಗಳನ್ನು ಏಕರೀತಿಯಾಗಿ ಆವರಿಸಿಕೊಂಡು ಅದರೊಳಗಿನಿಂದ ವಿಚಿತ್ರವಾದ ಒಂದು ಭೂತಾಕಾರವು ಗೋಚರವಾಗುತ್ತದೆ. ಇವರು ಮಾತನಾಡಿ ಮುಗಿಸಿದ ಮೇಲೆಯೂ ನಮಗೆ ಹಾಗೇ ಆಗುತ್ತದೆ. ಇಂಥವರನ್ನು ಕಂಡರೆ ಇವರೇಕೆ ಕಥೆಗಳನ್ನು ಬರೆಯಬಾರದೆಂದು ನನ್ನ ಮನಸ್ಸಿಗೆನ್ನಿಸುತ್ತದೆ.

ಈಗ ಮೈಸೂರ ಚರಿತ್ರೆಯ ಮೇಲೆ ಇರುವ ಕಾದಂಬರಿಗಳೆಂದರೆ —ನನಗೆ ತಿಳಿದಿರುವುವು—ಮ|| ಪುಟ್ಟಣ್ಣನವರ "ಮಾಡಿದ್ದುಣ್ಣೋ ಮಹಾರಾಯ" ಮತ್ತು ಕೆರೂರು ವಾಸುದೇವಾಚಾರ್ಯರ "ಯದು ಮಹಾರಾಜ." ಇವು ಮೊದಲನೆಯ ತರಗತಿಗೆ ಸೇರಿದವುಗಳಲ್ಲ. ಆದರೂ ಮೈಸೂರು ಚರಿತ್ರೆಯ ಮೇಲೆ ಎರಡು ಐತಿಹಾಸಿಕ ಕಾದಂಬರಿಗಳಿವೆ ಎಂದು ನಾವು ಹೆಮ್ಮೆ ಪಡಬಹುದು. ಮುಂದೆ ಇಂಥ ಕಾದಂಬರಿಗಳನ್ನು ಬರೆಯತಕ್ಕವರು ಇಂಗ್ಲಿಷ್ ಮತ್ತು ಇತರ ಭಾಷೆಗಳಲ್ಲಿ ಶಕ್ತರಾದ ಗ್ರಂಥಕರ್ತರು ಬರೆದಿರುವ ಐತಿಹಾಸಿಕ ಕಾದಂಬರಿಗಳನ್ನು ಓದಿ ಅವುಗಳಲ್ಲಿ ವ್ಯಕ್ತವಾಗಿರುವ ಕಲಾಕೌಶಲ್ಯವನ್ನೂ ಕವಿಸಾಮರ್ಥ್ಯವನ್ನೂ ಚೆನ್ನಾಗಿ ಗಮನಕೊಟ್ಟು ವ್ಯಾಸಂಗಮಾಡಬೇಕು. ತಾವು ಬರೆದ ಗ್ರಂಥಗಳು ಅವುಗಳ ಸರಿಸಮಕ್ಕೆ ಬರುತ್ತವೆಯೋ ಎಂದು ಹೋಲಿಸಿ ನೋಡಬೇಕು. ಅಷ್ಟೇ ಅಲ್ಲ; ತಮಗೆ ಮೇಲ್ಪಂಕ್ತಿಯಾಗಿರಬಹುದಾದ ಗ್ರಂಥಗಳಲ್ಲಿ ಏನಾದರೂ ಕುಂದು ಕೊರತೆಗಳು ಇದ್ದರೆ ಅವು ತಮ್ಮ ಗ್ರಂಥಗಳಲ್ಲಿ ಪರಿಹೃತವಾಗಿವೆಯೇ ಎಂದು ನೋಡ

ಬೇಕು. ಮುಖ್ಯವಾಗಿ ಅವಕ್ಕೆ ಕಾವ್ಯವೆನ್ನಿಸಿಕೊಳ್ಳುವ ಯೋಗ್ಯತೆ ಇದೆಯೇ ಎಂದು ವಿಚಾರಮಾಡಬೇಕು. ಇಲ್ಲದಿದ್ದರೆ ಅಂಥ ಗ್ರಂಥಗಳಿಂದ ಲೇಖಕನಿಗೆ ಸುಖವಿಲ್ಲ; ಪಾಠಕನಿಗೆ ಆನಂದವಿಲ್ಲ. ಅವಕ್ಕೆ ಬದಲಾಗಿ ಕೇವಲ ದೇಹಶ್ರಮ, ಅರ್ಥವ್ಯಯ, ಕಾಲಹರಣ, ಕನ್ನಡ ಭಾಷಾ ಸಾಹಿತ್ಯಗಳಲ್ಲಿ ಅನಾದರಣೆ ಇವೇ ಫಲಿಸುವುವು.

### ಒಡೆಯರ ಕಾಲ

ಮೈಸೂರು ಚರಿತ್ರೆಯ ಮೇಲೆ ಕನ್ನಡ, ಇಂಗ್ಲಿಷ್, ಫ್ರೆಂಚ್, ಪಾರ್ಸಿ, ಉರ್ದು, ಈ ಭಾಷೆಗಳಲ್ಲಿ ಬರೆದ ಅನೇಕ ಗ್ರಂಥಗಳಿವೆ. ಇವುಗಳಲ್ಲಿ ಕೆಲವು ತೀರ ಸಣ್ಣ ಗ್ರಂಥಗಳು. ಅದರೂ ಅವುಗಳಲ್ಲಿ ಮಿಕ್ಕ ಗ್ರಂಥಗಳಲ್ಲಿಲ್ಲದ ಅಪೂರ್ವವಾದ ಕೆಲವು ವಿಷಯಗಳು ದೊರಕುತ್ತವೆ. (ಅವುಗಳ ಹೆಸರನ್ನೆಲ್ಲ ಪರಿಶಿಷ್ಟರೂಪವಾಗಿ ಈ ಉಪನ್ಯಾಸದ ಕೊನೆಯಲ್ಲಿ ಕೊಟ್ಟಿದ್ದೇನೆ). ಇವುಗಳಲ್ಲಿ ಅನ್ಯಭಾಷೆಗಳಲ್ಲಿರತಕ್ಕ ಗ್ರಂಥಗಳು ವಿಶೇಷವಾಗಿ ಹೈದರಲ್ಲಿ ಟಿಪ್ಪುಸುಲ್ತಾನರ ಆಳಿಕೆಗಳ ವಿಚಾರವಾಗಿವೆ. "ವಂಶರತ್ನಾಕರ" "ವಂಶಾವಳಿ" ಮುಂತಾದ ಗ್ರಂಥಗಳೂ ಮೈಸೂರು ರಾಜರಿಗೆ ಮೂಲಪುರುಷರಾದ ಯದುರಾಯರಿಂದ ಆರಂಭವಾಗುತ್ತವೆ (ಸು.೧೪೦೦). ಈ ಗ್ರಂಥಗಳು ಇವರಿಗಿಂತಲೂ ಪೂರ್ವದಲ್ಲಿದ್ದ ಗಂಗರು, ಪಲ್ಲವರು, ಚಾಳುಕ್ಯರು, ಹೊಯಿಸಳರು ಮುಂತಾದ ಕನ್ನಡ ದೇಶದ ರಾಜರುಗಳ ವಿಚಾರವನ್ನು ಹೇಳುವುದಿಲ್ಲ. ಇವರಲ್ಲಿ ಹೊಯಿಸಳ ವಿಷ್ಣುವರ್ಧನನು ಮಹಾ ಪ್ರಸಿದ್ಧನೂ ಶೂರನೂ ಶಕ್ತನೂ ಆದ ರಾಜ. ಅವನೇ ಮೈಸೂರು ದೇಶವನ್ನು ಸ್ಥಾಪಿಸಿದವನೆಂದು ಹೇಳಬಹುದು. ಆದರೂ ಮೈಸೂರಿನ ಒಡೆಯರ ಚರಿತ್ರೆ ಆರಂಭವಾಗುವುದು ಯದು ಮಹಾರಾಜರಿಂದ. ಈ ಒಡೆಯರಿಗೆ ಅವರೇ ಮೂಲಪುರುಷರು. ಅವರು ಉತ್ತರ ದೇಶದಿಂದ ಬಂದು ಮಾರನಾಯಕನನ್ನು ಕೊಂದು ಇಲ್ಲಿಯ ರಾಜರ ಮಗಳನ್ನು ಮದುವೆಯಾಗಿ ರಾಜ್ಯಸಂಪಾದನೆ ಮಾಡಿದ್ದು ಎಲ್ಲರೂ ಓದಿರುವ ವಿಷಯ; ಈ ಕಥೆಯನ್ನೇ ಹಿಂದೆ ಹೇಳಿರುವಂತೆ, ಕೆರೂರ ವಾಸುದೇವಾಚಾರ್ಯರು ಪ್ರತಿಪಾದಿಸಿ ತಮ್ಮ ಗ್ರಂಥವನ್ನು ಬರೆದಿದ್ದಾರೆ. ಅಲ್ಲಿಂದ ಮುಂದಕ್ಕೆ ಹೈದರನು ಸಿಂಹಾಸನವನ್ನು

ಆಕ್ರಮಿಸುವವರೆಗೆ ಆಳಿದ ರಾಜರಲ್ಲಿ ರಾಜವೊಡೆಯರು, ಕಂಠೀರವ ನರಸರಾಜವೊಡೆಯರು, ಚಿಕ್ಕದೇವರಾಜವೊಡೆಯರು ಇವರು ಪ್ರಸಿದ್ಧರು. ರಾಜವೊಡೆಯರಿಗೂ ಅವರ ಸಹೋದರರಿಗೂ ಇದ್ದ ನಡವಳಿಕೆಯನ್ನು ಕುರಿತು ಒಂದು ಸೊಗಸಾದ ನಾಟಕವನ್ನಾಗಲಿ ಕಾದಂಬರಿಯನ್ನಾಗಲಿ ಬರೆಯಬಹುದು :—

ಹಿರಿಯ ಚಾಮರಾಜವೊಡೆಯರು ೧೫೭೬ ರಲ್ಲಿ ಕಾಲವಾಗಲು ಅವರ ಅಣ್ಣನ ಮಕ್ಕಳಾದ ಬೆಟ್ಟದ ಚಾಮರಾಜವೊಡೆಯರು ಪಟ್ಟಕ್ಕೆ ಬಂದರು. ಇವರು ಆಳಿದ ಎರಡು ವರ್ಷಗಳಲ್ಲಿ ಖಜಾನೆಯು ಬರಿದಾಗಿ ಸಾಲಸೋಲಗಳಾಗಲು ಹಳೆಯ ಪೈಕದವರು ಅವರನ್ನು ಸಿಂಹಾಸನದಿಂದ ತೆಗೆದು ಆ ಸ್ಥಾನದಲ್ಲಿ ರಾಜವೊಡೆಯರಿಗೆ ಪಟ್ಟಾಭಿಷೇಕ ಮಾಡಬೇಕೆಂದು ಯೋಚಿಸಿದರು. ಆದರೆ ಹಣಕಾಸಿಲ್ಲದ ಈ ರಾಜ್ಯಕ್ಕೆ ದೊರೆಯಾಗಲು ಅವರು ಒಪ್ಪಲಿಲ್ಲ. ಕೊನೆಗೆ ರಾಣಿವಾಸದವರ ನಗನಾಣ್ಯಗಳನ್ನು ಮಾರಿಯೂ, ತಮ್ಮ ತಮ್ಮಲ್ಲಿ ಹಣವನ್ನು ಎತ್ತಿಯೂ ಒಟ್ಟು ಐದು ಸಾವಿರ ವರಹಗಳನ್ನು ಮಾಡಿ ಕೊಡಲು ರಾಜವೊಡೆಯರು ಒಪ್ಪಿದರು. ಪಟ್ಟಾಭಿಷೇಕವಾಯಿತು. ಬೆಟ್ಟದ ವೊಡೆಯರು ದರ್ಬಾರಿಗೆ ಬರಲು ಅಲ್ಲಿದ್ದ ಅಧಿಕಾರಿಗಳು ಅವರನ್ನು ಕುರಿತು "ದೇಶದ ಹಣಕಾಸಿನ ಸ್ಥಿತಿಯು ಚೆನ್ನಾಗಿಲ್ಲದಿದ್ದದ್ದರಿಂದ ಈ ರೀತಿ ಏರ್ಪಾಡು ಮಾಡಬೇಕಾಯಿತು ; ಈಗಲೂ ತಾವು ಶ್ರೀರಂಗಪಟ್ಟಣದಲ್ಲಿ ಒಡೆಯರ ಕಡೆಯ ಪ್ರತಿನಿಧಿಗಳಾಗಿದ್ದುಕೊಂಡಿರಬಹುದು; ಅದರಿಂದ ಗೌರವವೂ ಅನುಕೂಲ್ಯವೂ ಉಂಟು. ಅಥವಾ ಸ್ವತಂತ್ರರಾಗಿ ಇರಲು ಇಷ್ಟಪಟ್ಟರೆ ಮೈಸೂರಿನಲ್ಲಿಯೇ ಅದಕ್ಕೆ ತಕ್ಕ ಏರ್ಪಾಡನ್ನೂ ಮಾಡಿದೆ" ಎಂದು ಹೇಳಿದರು. ಬೆಟ್ಟದವೊಡೆಯರಿಗೆ ಕೋಪಬರಲು 'ನಾನು ಅಲ್ಲಿಯೂ ಇರುವುದಿಲ್ಲ, ಇಲ್ಲಿಯೂ ಇರುವುದಿಲ್ಲ!' ಎಂದು ಗರ್ಜಿಸಿ ಹೊರಟು ಹೋದರು. ಆದರೆ ಮನಸ್ಸು ಸ್ವಲ್ಪ ಶಾಂತವಾದ ಮೇಲೆ ಮೈಸೂರಿನಲ್ಲಿಯೇ ಇದ್ದುಕೊಂಡಿದ್ದರು.

ಹೀಗಿರಲು ಕಾರುಗಹಳ್ಳಿಯ ಪಾಳೆಯಗಾರನು ಅಕಸ್ಮಾತ್ತಾಗಿ ಮೈಸೂರಿನ ಕೋಟೆಗೆ ಮುತ್ತಿಗೆ ಹಾಕಿದನು. ಬೆಟ್ಟದವೊಡೆಯರು

ತಮಗೆ ಅದು ಏನೂ ಸಂಬಂಧ ಪಟ್ಟದ್ದಲ್ಲವೆಂಬಂತೆ ನಿಶ್ಚಿಂತೆಯಾಗಿ ಓಡಿಯಾಡುತ್ತಿದ್ದರು. ರಾಜನ ತಲೆಗೆ ಕಟ್ಟಿದ್ದು ತಾನೇ ರಾಜ್ಯದ ಯೋಗಕ್ಷೇಮ—ಎಂಬುದು ಅವರ ಭಾವ. ಇದನ್ನು ನೋಡಿ ಹೆಂಗಸೊಬ್ಬಳು "ಇದೇನು! ಸ್ವಾಮಿಯವರು ಸುಮ್ಮನೆ ಕೈಕಟ್ಟಿಕೊಂಡು ತಿರುಗುತ್ತಿರಬಹುದಾದ ಕಾಲವೇ ಇದು?" ಎಂದು ಸ್ವಲ್ಪ ಮೂದಲಿಸಿದಳು. ಕೂಡಲೇ ಅವರಿಗೆ ವೀರಾವೇಶವುಂಟಾಗಿ ಕತ್ತಿಯನ್ನು ಹಿಡಿದು ಸೈನಿಕರೊಡನೆ ಹೊರಟು ಕೋಟೆಯ ಬಾಗಿಲಿಗೆ ಹಾಕಿದ್ದ ಅಗಳಿಯನ್ನು ಮುರಿದು, ಶತ್ರುಗಳ ಮೇಲೆ ಬಿದ್ದು ಅವರನ್ನು ಪೂರ್ತಿಯಾಗಿ ಸೋಲಿಸಿದರು. ಅಲ್ಲಿಂದ ಮುಂದೆ ಯಾವಾಗ ಯುದ್ಧವಾದರೂ ಸುಮ್ಮನೆ ಕುಳಿತಿರದೆ, ತಮ್ಮನ ಸೇನೆಗೆ ನಾಯಕನಾಗಿದ್ದುಕೊಂಡು ಯುದ್ಧಮಾಡಿ ಜಯದ ಮೇಲೆ ಜಯವನ್ನು ಪಡೆಯುತ್ತಿದ್ದರು.

ಕೆಲವು ಕಾಲದ ಮೇಲೆ ಅಣ್ಣ ತಮ್ಮಂದಿರಿಗೆ ಮನಸ್ತಾಪವು ಬಂತು. ಬೆಟ್ಟದವೊಡೆಯರು ಶ್ರೀರಂಗಪಟ್ಟಣಕ್ಕೆ ಹೋಗಿ ವಿಜಯನಗರದ ಅರಸರ ಸಹಾಯದಿಂದ ಯುದ್ಧಮಾಡಿ ತಮ್ಮ ಪಿತ್ರಾರ್ಜಿತವಾದ ರಾಜ್ಯವನ್ನು ಪುನಃ ಪಡೆಯಬೇಕೆಂದು ಪ್ರಯತ್ನಪಡುತ್ತಿರಲು ಒಂದು ದಿನ ಅಜಾಗರೂಕತೆಯಿಂದ ಸೆರೆಸಿಕ್ಕಿದರು. ಅವರನ್ನು ರಾಜವೊಡೆಯರ ಹತ್ತಿರಕ್ಕೆ ಕರೆದುಕೊಂಡು ಹೋದರು. ಅಣ್ಣನನ್ನು ನೋಡಿದ ಕೂಡಲೆ ಎಲ್ಲವೂ ಮರೆತು ರಾಜವೊಡೆಯರಿಗೆ ಏನೋ ಆನಂದವಾಗಲು ಅವರು ಅಣ್ಣನನ್ನು ಬಾಚಿ ತಬ್ಬಿಕೊಳ್ಳಬೇಕೆಂದು ತೋಳುಗಳನ್ನು ನೀಡಿಕೊಂಡು ಓಡಿಬಂದರು. ಇದನ್ನು ಕಂಡು, ತಮ್ಮನು ತನ್ನನ್ನು ಕೊಲ್ಲುವುದಕ್ಕೆ ಬರುತ್ತಿದ್ದಾನೆಂದು ಭಯಗ್ರಸ್ತರಾಗಿ ಬೆಟ್ಟದವೊಡೆಯರು ಬಲಪ್ರಕಾಶಮಾಡಿ ರಾಜವೊಡೆಯರನ್ನು ನೆಲಕ್ಕೆ ಹಾಕಿ ಅದಿಮಿದರು. ರಾಜವೊಡೆಯರು ಇದಕ್ಕೆ ಶಿಕ್ಷೆಯಾಗಿ ಅಣ್ಣನನ್ನು ಅರಮನೆಯಿಂದ ಹೊರಡಿಸಿದರು. ಅವರ ಕೋಪವು ಅಷ್ಟರಲ್ಲಿಯೇ ಮುಗಿಯಿತು.

ಹೀಗಿರಲು ಕುಮಾರನರಸರಾಜನೆಂಬ ಅರಸು ಮನೆತನದವನೊಬ್ಬನು, ರಾಜನ ಮೆಚ್ಚುಗೆಯನ್ನು ಪಡೆಯಬೇಕೆಂದೋ ಏನೋ

ಒಬ್ಬ ಕಟುಕನಿಗೆ ಹೇಳಿ ಬೆಟ್ಟದೊಡೆಯರ ಎರಡು ಕಣ್ಣುಗಳನ್ನೂ ಕೀಳಿಸಿದನು. ಇದು ರಾಜವೊಡೆಯರ ಕಿವಿಗೆ ಬಿತ್ತು. ಅವರು ಕುದುರೆಯನ್ನು ಹತ್ತಿಕೊಂಡು ಎಲ್ಲಿಗೋ ಯುದ್ಧಕ್ಕೆ ಹೊರಡುವವರಾಗಿದ್ದರೂ, ಹಾಗೆಯೇ ನಿಂತು, ಅಲ್ಲಿಂದಲೇ ಕುಮಾರನರಸರಾಜನಿಗೂ ಅವನ ಅಣ್ಣನಿಗೂ ಅಲ್ಲಿಗೆ ಬರುವಂತೆ ಹೇಳಿ ಕಳುಹಿಸಿ, ಅವರು ಬಂದ ಕೂಡಲೆ ನರಸರಾಜನ ಅಣ್ಣನ ಕಣ್ಣನ್ನು ಕೀಳಿಸಿಬಿಡುವುದಾಗಿ ಹೇಳಿದರು. ನರಸರಾಜನು ತನ್ನ ಅಣ್ಣನು ಮಾಡಿದ್ದ ಅಪರಾಧವೇನೆಂದು ಕೇಳಿದನು. "ಹಾಗಾದರೆ ಕಟುಕರಿಂದ ಕಣ್ಣು ಕೀಳಿಸುವುದಕ್ಕೆ ನಮ್ಮಣ್ಣನು ಮಾಡಿದ ಅಪರಾಧವೇನೋ, ಖೂಳ?" ಎಂದು ರಾಜವೊಡೆಯರು ಪ್ರತಿ ಪ್ರಶ್ನೆಯನ್ನು ಹಾಕಿದರು. ಅವನಿಗೆ ಏನು ಶಿಕ್ಷೆಯಾಯಿತೋ ತಿಳಿದುಬಂದಿಲ್ಲ. ತಮ್ಮ ಅಣ್ಣನನ್ನು ಮಾತ್ರ ಅವರು ಕೂಡಲೆ ಬಿಡುಗಡೆ ಮಾಡಿಸಿ ಒಂದು ಚೀಲದ ತುಂಬ ವರಹಗಳನ್ನು ತರಿಸಿಕೊಟ್ಟು, ಇಂಥ ಘೋರವಾದ ಸ್ಥಳವನ್ನು ಬಿಟ್ಟು ಮತ್ತೆಲ್ಲಾದರೂ ಹೋಗಿ ಸುರಕ್ಷಿತವಾಗಿರಬೇಕೆಂದು ಪ್ರಾರ್ಥಿಸಿಕೊಂಡರು. ಅದರಂತೆ ಅವರು ರಂಗಸಮುದ್ರಕ್ಕೆ ಹೋಗಿ ತಮ್ಮನ ಮೇಲೆ ಯಾವ ದ್ವೇಷವೂ ಇಲ್ಲದೆ ಸುಖವಾಗಿದ್ದುಕೊಂಡಿದ್ದರು.*

ಕಂಠೀರವನರಸರಾಜವೊಡೆಯರು ಹಿಂದೆ ಹೇಳಿದ ಬೆಟ್ಟದ ಚಾಮುರಾಜವೊಡೆಯರ ಮಕ್ಕಳು; ತಂದೆಯಲ್ಲಿದ್ದ ಕ್ಷಾತ್ರತೇಜವು ಮಗನಲ್ಲಿ ಪೂರ್ತಿಯಾಗಿ ಬಂದಿತ್ತು. ದೊರೆಯಾಗುವುದಕ್ಕೆ ಮುಂಚೆ ಇನ್ನೂ ಹಳ್ಳಿಯಲ್ಲಿದ್ದಾಗಲೇ ಅವರು ತಿರುಚನಾಪಳ್ಳಿಯ ಜಟ್ಟಿಯನ್ನು ಸೋಲಿಸಿದ್ದರೆಂಬ ಒಂದು ಕಥೆಯಿದೆ. ಪಟ್ಟಕ್ಕೆ ಬಂದ ಕೂಡಲೆ ಪ್ರಬಲನಾಗಿದ್ದ ದಳವಾಯಿ ವಿಕ್ರಮರಾಜನನ್ನು ನಿರ್ಮೂಲ ಮಾಡಿದರು. ಇವರ ಶೌರ್ಯದ ಜೊತೆಗೆ ರಾಜ್ಯವಾಳುವ ಸಾಮರ್ಥ್ಯವೂ, ಜನರನ್ನು ಮೆಚ್ಚಿಸುವ ಔದಾರ್ಯವೂ ಇದ್ದುವು. ದಳವಾಯಿ ವಿಕ್ರಮರಾಜನ

---

* ಕರ್ನಲ್ ಮಾರ್ಕ್ಸ್ ವಿಲ್ಕ್ಸ್‌ರವರ ಮೈಸೂರು ಚರಿತ್ರೆ; (೧೮೧೦ ರಲ್ಲಿ ಅಚ್ಚಾದದ್ದು) ಪುಟ ೩೬–೪೦.

ಸಂಬಂಧವಾಗಿ ಒಂದೆರಡು ವಿಷಯಗಳನ್ನು ತಿಳಿಸುತ್ತೇನೆ. ಅವುಗಳಲ್ಲಿ ಒಂದೊಂದೇ ಒಂದೊಂದು ದೊಡ್ಡ ಕಥೆಯಾಗಿ ಪರಿಣಮಿಸಬಹುದು.

ರಾಜವೊಡೆಯರ ಕಾಲಾನಂತರ ಅವರ ಮಗನು ಪಟ್ಟಕ್ಕೆ ಬಂದನು; ಆದರೆ ಅವನು ಆಳಿದ್ದು ಒಂದೂವರೆ ವರ್ಷವೇ; ಹಿಂದಿನಿಂದಲೂ ದಳವಾಯಿಯಾಗಿದ್ದ ವಿಕ್ರಮರಾಜನು ರಾಜನಿಗೆ ವಿಷಹಾಕಿ ಕೊಲ್ಲಿಸಿದನು. ಕಂಠೀರವನರಸರಾಜರು ಮೈಸೂರಿಗೆ ಬಂದರು. ಆಗ ವಿಕ್ರಮರಾಜನು ಅವರನ್ನು ಅರಮನೆಯ ಹೊರವಳಯದಲ್ಲಿಯೇ ಒಂದು ಕಡೆ ಇಟ್ಟಿರುವಂತೆ ಏರ್ಪಾಡುಮಾಡಿ, ಅವರ ಮೇಲೆ ಕೆಲವು ಕಾವಲುಗಾರರನ್ನು ನಿಯಮಿಸಿ, ಪಟ್ಟಾಭಿಷೇಕದ ಸುದ್ದಿಯನ್ನೇ ಎತ್ತದೆ ಹತ್ತಿರದಲ್ಲಿದ್ದ ಪಾಳೆಯಪಟ್ಟಿಗೆ ಹೊರಟು ಹೋದನು. "ಒಡೆಯರ ಮನಸ್ಸಿಗೆ ಅಸಮಾಧಾನವಾಗಿರುವಂತಿದೆ; ತಮ್ಮ ರಾಜ್ಯವನ್ನು ಪಡೆದುಕೊಳ್ಳುವುದಕ್ಕಾಗಿ ಅವರು ಪ್ರಯತ್ನಪಡುವ ಹಾಗೆ ತೋರುತ್ತದೆ"—ಎಂದು ಯಾರೋ ವಿಕ್ರಮರಾಜನಿಗೆ ತಿಳಿಸಿದರು. ಅದಕ್ಕೆ ವಿಕ್ರಮರಾಜನು "ಹುಷಾರ್! ಇನ್ನೂ ನಾನು ಅವನಿಗೆ ಪಟ್ಟಾಭಿಷೇಕ ಮಾಡಿಲ್ಲವೆಂಬುದು ಆತನಿಗೆ ಜ್ಞಾಪಕದಲ್ಲಿರಲಿ" ಎಂದು ಉತ್ತರ ಕೊಟ್ಟನು.

ಹೀಗೆ ವಿಕ್ರಮರಾಜನು ಊರಿನಲ್ಲಿಲ್ಲದಿರುವಾಗ ಕಾವಲುಗಾರರು ಕಂಠೀರವನರಸರಾಜರಿಗೆ ಹಿಂದೆ ನಡೆದ ವರ್ತಮಾನಗಳನ್ನೆಲ್ಲಾ ತಿಳಿಸಿ ಆ ಸ್ವಾಮಿದ್ರೋಹಿಯನ್ನು ನಾಶಪಡಿಸುವುದಕ್ಕೆ ಸಿದ್ಧವಾಗಿದ್ದೇವೆಂದು ಹೇಳಿಕೊಂಡರು. ಒಡೆಯರು ಅದಕ್ಕೆ ಒಪ್ಪಿದರು.

ವಿಕ್ರಮರಾಜನು ಮೈಸೂರಿಗೆ ಹಿಂತಿರುಗಿ ಬಂದ ರಾತ್ರಿಯೇ ಇಬ್ಬರು ಊಳಿಗದವರು ಅವನ ಮನೆಯ ಗೋಡೆಯನ್ನು ಇಳಿದು ಸಮಯ ಕಾಯುತ್ತಿದ್ದರು. ಸ್ವಲ್ಪ ಹೊತ್ತಿನ ಮೇಲೆ ವಿಕ್ರಮರಾಜನು ಒಂದು ಪಂಜನ್ನು ತೆಗಿಸಿಕೊಂಡು ಹೊರಗೆ ಹೊರಟನು. ಹೊರಟದ್ದೇ ತಡ, ಪಂಜಿನವನು ಹತನಾದನು. ಪಂಜು ಪೂರ್ತಿಯಾಗಿ ಆರಿಹೋಗಿ ಕಗ್ಗತ್ತಲಾಯಿತು. ವಿಕ್ರಮನು "ಯಾರು ನೀವು" ಎಂದು ಕೂಗಿದನು. ಅದಕ್ಕೆ "ನಿನ್ನ ಶತ್ರು" ಎಂದು ಹೇಳುತ್ತ ಒಬ್ಬ ಊಳಿಗದವನು

ಒಂದು ಗುದ್ದನ್ನು ಕೊಟ್ಟನು. ಆದರೆ ವಿಕ್ರಮರಾಜನು ಬಲಶಾಲಿಯಾಗಿದ್ದುದರಿಂದ ಅವನನ್ನು ಕೆಳಕ್ಕೆ ಹಾಕಿಕೊಂಡು ಮೇಲೆ ಕುಳಿತು ಕುತ್ತಿಗೆಯನ್ನು ಮಿಸುಕುತ್ತ ಯಾರಾದರೂ ಸಹಾಯಕ್ಕೆ ಬರಬೇಕೆಂದು ಕೂಗುತ್ತಿದ್ದನು. ಕೃಷ್ಣಪಕ್ಷದ ಕಗ್ಗತ್ತಲೆ; ಆದ್ದರಿಂದ ಹತ್ತಿರದಲ್ಲಿದ್ದ ಮತ್ತೊಬ್ಬ ಊಳಿಗದವನು ಹೊಡೆಯುವುದಕ್ಕೆ ತೋರದೆ ತನ್ನ ಜೊತೆಗಾರನನ್ನು ಕುರಿತು "ಕೆಳಗಿದ್ದೀಯೋ, ಮೇಲಿದ್ದೀಯೋ?" ಎಂದು ಕೇಳಿದನು. "ಕೆಳಗೆ! ಕೆಳಗೆ!" ಎಂದು ಸಿಕ್ಕಿಕೊಂಡ ಉಸಿರಿನಲ್ಲಿ ಉತ್ತರವು ಬಂತು. ಇದರಿಂದ ವಿಕ್ರಮರಾಜನನ್ನು ಕೊಂದುಹಾಕುವುದು ಸುಲಭವಾಯಿತು.

ಚಿಕ್ಕದೇವರಾಜವೊಡೆಯರ ಆಳಿಕೆಯ ಮೇಲೆ ಬೇಕಾದಷ್ಟು ಬರೆಯಬಹುದು. ಆ ರಾಜರನ್ನು ಕುರಿತೇ ಅನೇಕ ಕಥೆಗಳನ್ನು ಬರೆಯುವುದಕ್ಕೆ ಅವಕಾಶವಿದೆ. ಅದನ್ನು ಬಿಟ್ಟು ಆ ಕಾಲದ ಸ್ಥಿತಿಯನ್ನು ಜ್ಞಾಪಿಸಿಕೊಂಡರೆ ಆ ಸನ್ನಿವೇಶದಲ್ಲಿ ಯಾವ ವಸ್ತುಪಾತ್ರಗಳನ್ನು ಬೇಕಾದರೂ ಕಲ್ಪಿಸಿಟ್ಟು ಸೊಗಸಾದ ಕಥೆಗಳನ್ನು ಬರೆಯಬಹುದು. ಆ ಕಾಲವು ಸ್ವಲ್ಪಮಟ್ಟಿಗೆ ಇಂಗ್ಲೆಂಡಿನಲ್ಲಿ ರಾಜನಾಗಿದ್ದ ಎಂಟನೆಯ ಹೆನ್ರಿಯ ಕಾಲದಹಾಗೆ; ಆಗ ಮೂರು ಮತದ ಪ್ರಧಾನಿಗಳು—ಒಂದು ಕಡೆ ಜೈನಮತದ ವಿರೂಪಾಕ್ಷಪಂಡಿತ, ಮತ್ತೊಂದು ಕಡೆ ಲಿಂಗಾಯಿತ ಷಡಕ್ಷರಯ್ಯ, ಇನ್ನೊಂದು ಕಡೆ ಶ್ರೀವೈಷ್ಣವ ತಿರುಮಲಯ್ಯಂಗಾರ್ಯ; ಇವರೆಲ್ಲರಿಗೂ ಒಂದೊಂದು ಕಾಲದಲ್ಲಿ ಕಿವಿಗೊಡುತ್ತಿದ್ದ ರಾಜ, ಇವರ ಕಿರುಕುಳಕ್ಕೆ ಸಿಕ್ಕಿ ನರಳುತ್ತಿದ್ದ ಜನಗಳು. ಈ ಪ್ರಧಾನಿಗಳಲ್ಲಿ ಒಬ್ಬೊಬ್ಬರೂ ತಮ್ಮ ತಮ್ಮ ಕಾಲದಲ್ಲಿ ತಮ್ಮ ತಮ್ಮ ಮತವನ್ನು ಪ್ರಬಲಗೊಳಿಸುತ್ತ ಕೊನೆಗೆ ಎಲ್ಲರಿಗೂ ಶತ್ರುಗಳಾಗಿ ಪರಿಣಮಿಸಿ ಮೂಲೆಗೆ ಬೀಳುವರು. ತಿರುಮಲಯ್ಯಂಗಾರ್ಯನ ವಿಚಾರವಾಗಿ ಈ ಸಂದರ್ಭದಲ್ಲಿ ಒಂದು ಕಥೆಯನ್ನು ಹೇಳುತ್ತೇನೆ. *

---

* ಇದನ್ನು "ಮಿತ್ರವಿಂದಾ ಗೋವಿಂದ" ದ ವಿಮರ್ಶೆಯಲ್ಲಿ ಸ್ವಲ್ಪ ಸೂಚಿಸಿದ್ದೇನೆ. ವಿಷಯವು ನಿಜವಾದದ್ದಾದರೂ ಅಲ್ಲಿ ನಾನು ಉಪಯೋಗಿಸಿರುವ

ಈತನು—ತಿರುಮಲಯ್ಯಂಗಾರ್ಯನು—ರಾಜನಿಗೆ ವಿಷ್ಣುದೀಕ್ಷೆಯನ್ನು ಕೊಟ್ಟು ಅವನನ್ನು ವಿಷ್ಣುಭಕ್ತನನ್ನಾಗಿ ಮಾಡಿದ್ದು ಸಾಲದೆ, ಅವನ ನೆಂಟರಿಷ್ಟರಾದ ಅರಸುಗಳೆಲ್ಲರೂ ವೈಷ್ಣವರಾಗುವ ಹಾಗೆ ಮಾಡುವನು. ಅವರು ಬಲವಂತಕ್ಕೆ ಮಾಘಸ್ನಾನ ಮಾಡುವರು. ತಿರುಮಲಯ್ಯಂಗಾರ್ಯನ ಅಪ್ಪಣೆಯಂತೆ ಇವರೆಲ್ಲರೂ ತಮ್ಮನ್ನು ವೈಷ್ಣವರನ್ನಾಗಿ ಮಾಡಿ ಉದ್ಧಾರ ಮಾಡಿದ್ದಕಾಗಿ ತಮ್ಮ ಕೃತಜ್ಞತೆಯನ್ನು ತೋರಿಸಿ ಮಹಾರಾಜರಿಗೆ ಒಂದು ವಿಜ್ಞಾಪನಾ ಪತ್ರಿಕೆಯನ್ನು ಬರೆದು ಒಪ್ಪಿಸುವರು. ಆದರೆ ಈ ಹೊಸ ಸಂಪ್ರದಾಯವು ಅವರಿಗೆ ಒಗ್ಗಿಬರುವುದಿಲ್ಲ.—ಒಬ್ಬನ ಮಗ ಸತ್ತು ಹೋಗುವನು, ಮತ್ತೊಬ್ಬನ ಮನೆ ಹಾಳಾಗುವುದು, ಇನ್ನೊಬ್ಬನ ಐಶ್ವರ್ಯವು ಹೋಗುವುದು. ಆದ್ದರಿಂದ ಇವರೆಲ್ಲರೂ ಕೆಲವು ದಿನಗಳ ತರುವಾಯ ಪುನಃ ಪುನಃ ಮಹಾರಾಜನಿಗೆ ತಾವು ಮತ್ತೆ ಶೈವರೇ ಆಗಬೇಕೆಂದು ವಿಜ್ಞಾಪನಾಪತ್ರಿಕೆಯನ್ನು ಸಮರ್ಪಿಸುವರು. ರಾಜನು ಅವರ ಪ್ರಾರ್ಥನೆಯನ್ನು ಸಲ್ಲಿಸುವನು. ಇದರ ವಿಚಾರವು "ವಂಶರತ್ನಾಕರ" ದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಪ್ರಧಾನ ಲಿಂಗಣ್ಣಯ್ಯನನ್ನು ಔರಂಗಸೇಬನ ಹತ್ತಿರಕ್ಕೆ ಕಳುಹಿಸಿ ಅವನಿಂದ ಬಿರುದನ್ನು ಸಂಪಾದಿಸಿದ್ದು, ಅದನ್ನು ವೈಭವದಿಂದ ಮೆರವಣಿಗೆ ಮಾಡಿಸಿದ್ದು, ಪುಂಡರಾದ ಜಂಗಮರನ್ನು ಕೊಲ್ಲಿಸಿದ್ದು, ಪ್ರತಿದಿನವೂ ನಾಮತೀರ್ಥದ ಕಾಲಕ್ಕೆ ಗೊತ್ತಾದಷ್ಟು ಹಣ ಬರದಿದ್ದರೆ ಊಟ ಮಾಡದಿರುವುದು ಮುಂತಾದ ಈ ಕಾಲದ ಒಂದೊಂದು ಸಂಗತಿಯನ್ನು ತೆಗೆದುಕೊಂಡೂ ಒಂದೊಂದು ಅಧ್ಯಾಯವನ್ನಾದರೂ ಬರೆಯಬಹುದು.

---

ಒಂದೆರಡು ಪದಗಳು ಆಕ್ಷೇಪಣೀಯವೆಂದು ನನ್ನ ಮಿತ್ರರು ಅನೇಕರು ಹೇಳಿದರು. ಆನಂತರ ನನಗೂ ಹಾಗೆಯೇ ತೋರಿತು. ಅದು, ಬಂಗಾರದಂಥ ಕಾವ್ಯವು ಕೆಟ್ಟು ಹೋಯಿತಲ್ಲ ಎಂಬ ಒಂದು ಅಸಮಾಧಾನದಿಂದಲೂ ಆಗ್ರಹದಿಂದಲೂ ಬಂದ ಮಾತೇ ಹೊರತು ಮತವೈರದಿಂದಲ್ಲ. ಅದರಿಂದ ನನ್ನ ಶ್ರೀವೈಷ್ಣವಮಿತ್ರರಿಗೆ ಯಾರಿಗಾದರೂ ಮನಸ್ಸು ನೊಂದಿದ್ದರೆ ಅವರ ಕ್ಷಮಾಪಣೆಯನ್ನು ಬೇಡುತ್ತೇನೆ.

ಇವರಾದಮೇಲೆ, ಹೈದರಾಲಿಗೆ ಮುಂಚೆ, ಪ್ರಸಿದ್ಧರಾದ ರಾಜರು ಯಾರೂ ಇಲ್ಲ. ಆದರೂ ರಾಜರಿಗಿಂತಲೂ ಹೆಚ್ಚಾದ ಮಹಾ ಪ್ರಬಲರೂ ವ್ಯಾಪಕರೂ ಆದ ದಳವಾಯಿ ದೇವರಾಜಯ್ಯ ಕರಾಚೂರಿ ನಂಜರಾಜಯ್ಯ ಎಂಬಿಬ್ಬರು ರಾಜನಿರ್ಮಾಣಕರಾಗಿ ರಾಜ್ಯವನ್ನು ತಮ್ಮ ಕೈಯಲ್ಲಿಟ್ಟುಕೊಂಡಿದ್ದರು. ಇಷ್ಟುಹೊತ್ತಿಗೆ ಇಂಗ್ಲಿಷರೊಡನೆ ಯುದ್ಧಗಳು ಆರಂಭವಾಗಿದ್ದುವು; ಈ ಮಧ್ಯೆ ಹೈದರಾಲಿಯು ಮೆಲ್ಲಮೆಲ್ಲಗೆ ಪ್ರಾಬಲ್ಯಕ್ಕೆ ಬರುತ್ತ ಇವರನ್ನು ಮೂಲೆಗೆ ಕೂರಿಸಿದನು.

ಹೈದರನ ಕಾಲದಿಂದ ಮುಂದಕ್ಕೆ ಮೈಸೂರು ಚರಿತ್ರೆಗೆ ಬೇಕಾದಷ್ಟು ಸಾಮಗ್ರಿಗಳು ಸಿಕ್ಕುತ್ತವೆ. ಇವುಗಳನ್ನು ಒದಗಿಸಿಕೊಡುವ ಗ್ರಂಥಗಳಲ್ಲಿ ಹೈದರಾಲಿಯ ಮೇಲೆ M.M.D.L.T. ಎಂಬ ಒಬ್ಬ ಫ್ರೆಂಚ್ ಗ್ರಂಥಕರ್ತನು ಬರೆದಿರುವ ಚರಿತ್ರೆಯು ಬಹು ರಸವತ್ತಾಗಿದೆ. ಈ ಗ್ರಂಥವನ್ನು ಓದುತ್ತ ಓದುತ್ತ ಅಲ್ಲಲ್ಲೇ ನೆಪೋಲಿಯನ್ನನ ಜ್ಞಾಪಕ ಬರುತ್ತದೆ. ಮತ್ತೊಬ್ಬ ಗ್ರಂಥಕರ್ತನು ಹೈದರನನ್ನು ನೆಪೋಲಿಯನ್ನಿಗೆ ಹೋಲಿಸಿ ಬರೆದಿದ್ದಾನೆ.*

ಕನ್ನಡ ಚರಿತ್ರಕಾರರು ಹೈದರನಿಗೆ ಬಹಳ ಗೌರವಕೊಟ್ಟಿದ್ದಾರೆ. ಯಾವಾಗಲೂ ಅವನನ್ನು "ನವಾಬರು" ಎಂದು ಬಹುವಚನದಿಂದ

---

* "The meteoric rise of Hyder from a common soldier to the head of a powerful and orderly state has a parallel in the rise of Napoleon—the other great foe of the English during the second half of the eighteenth century. The dynasty of Hyder was, to use the words of a distinguished writer. Napoleonic in the suddenness of its rise, the brilliancy of its success and the completeness of the overthrow . . . . His son Tippu had not the masterful resources of his father, nor any sympathy with his subjects . . . . The throne founded by genius was lost by the recklessness of a vain successor."—An account of The campaign of Mysore (1799), by Sir Alexander Allen. Page 117.

ನಿರ್ದೇಶಮಾಡುತ್ತಾರೆ. ಟಿಪ್ಪೂಸುಲ್ತಾನನ ಮೇಲೆ ಇವರೇ ವಿಷ ಕಾರುವುದನ್ನು ನೋಡಿದರೆ ಹೈದರನು ಎಂಥ ಗುಣವಂತನಾಗಿರಬೇಕೆಂಬುದು ಗೊತ್ತಾಗುತ್ತದೆ. ಹೈದರನಿಗೆ ಬಂದ ಕೆಟ್ಟ ಹೆಸರಿಗೆ ಬಹಳಮಟ್ಟಿಗೆ ಅವನ ಶತ್ರುಗಳು ಬರೆದ ಚರಿತ್ರೆಯೇ ಕಾರಣವೆಂದು ತೋರುತ್ತದೆ. ಹೈದರನು ಸಾಯುವಾಗ ಪೂರ್ಣಯ್ಯನವರೇ ಮುಂತಾದವರನ್ನು ಕರೆಸಿ ಟಿಪ್ಪೂಸುಲ್ತಾನನಿಗೆ ಅವರ ಮೂಲಕ ಹೀಗೆ ಹೇಳಿಕಳುಹಿಸಿದನಂತೆ: '......ಧೊರೆಗಳಾದ ಇಮ್ಮಡಿ ಕೃಷ್ಣರಾಜ ಒಡೆಯರು ಸ್ವಲ್ಪ ಚಾಕರಿಯಲ್ಲಿದ್ದ ನನಗೆ ಸರ್ವಾಧಿಕಾರವನ್ನೇ ಕೊಟ್ಟದ್ದರಿಂದ ನಾನು ನಮ್ಮಕ್‌ಹರಾಮನೆಂದೆನ್ನಿಸಿಕೊಳ್ಳದೆ ಇದುವರೆಗೂ ಸ್ವಾಮಿಭಕ್ತಿಯಿಂದಲೇ ಚಾಕರಿ ಮಾಡಿಕೊಂಡು ಬಂದೆನು. ಮುಂದೆ ನನ್ನ ಮಗ ಟಿಪ್ಪೂಸುಲ್ತಾನನು ಇದೇ ಮೇರೆಗೆ ನಡೆದುಕೊಂಡರೆ ಈ ಅಧಿಕಾರವು ನಡೆಯುತ್ತದೆ. ಹಾಗಿಲ್ಲದೆ ದುಷ್ಟರ ಮಾತುಗಳಿಂದಲೂ ಅವನ ದುರ್ನಡತೆಯಿಂದಲೂ ಏನಾದರೂ ಹೆಚ್ಚುಕಡಮೆಯಾಗಿ ನಡೆದರೆ, ಈ ಅಧಿಕಾರವೂ ಹೋಗಿ ಮುಂದೆ ಅವನೂ ಕೆಟ್ಟುಹೋಗುವನು...............' *

ಅದು ಹೇಗಾದರೂ ಇರಲಿ; ಕಾದಂಬರೀಕಾರನು ತನ್ನ ಪ್ರತಿಭಾಶಕ್ತಿಯನ್ನು ಇಲ್ಲಿ ಬೇಕಾದಹಾಗೆ ಉಪಯೋಗಿಸಬಹುದು. ಹೈದರನು ರಾಜನಿಗೆ ಕೃತಜ್ಞನಾಗಿದ್ದ ಸತ್ಸೇವಕನೆಂದು ಬೇಕಾದರೂ ವರ್ಣಿಸಬಹುದು; ಇಲ್ಲದಿದ್ದರೆ ಧರ್ಮಬುದ್ಧಿಯೂ ಕರ್ತವ್ಯಪರತೆಯೂ ಇದ್ದ ತನಕ ಅವನಿಗೆ ಎಲ್ಲವೂ ಒಳ್ಳೆಯದಾಗುತ್ತಿತ್ತೆಂದೂ, ಕೊನೆಗೆ ಅವನಿಗೆ ಧನಲೋಭ ರಾಜ್ಯಲೋಭಗಳು ಹುಟ್ಟಿ ಅದರಿಂದ ಕೇಡಾಯಿತೆಂದೂ ಹೇಳಬಹುದು. ಇಲ್ಲದಿದ್ದರೆ, ಮೊದಲಿನಿಂದಲೂ ತಂತ್ರಿಯಾಗಿದ್ದು "ವಿಷಕುಂಭಂ ಪಯೋಮುಖಂ" ಎಂಬಂತೆ ಎಲ್ಲರಿಗೂ ಮಂಕುಬೂದಿಯನ್ನೆರಚಿ ಸ್ವಾರ್ಥದಲ್ಲಿ ನಿರತನಾಗಿದ್ದನೆಂದು ಬೇಕಾದರೂ ವರ್ಣಿಸಬಹುದು. ಅಂತು, ನನಗೆ, ಹೈದರನನ್ನೂ ಮುಮ್ಮಡಿಕೃಷ್ಣರಾಜವೊಡೆಯರನ್ನೂ ಜನರು ಅನ್ಯಾಯವಾಗಿ ಹೆಚ್ಚು ದೂರು ಮಾಡಿರುವರೆಂದು ತೋರುವುದು. ಅವರಲ್ಲಿ ದುರ್ಗುಣಗಳೇನೋ ಇದ್ದುವು; ಆದರೆ ಅವು

* ವಂಶರತ್ನಾಕರ—ಪುಟ ೨೩೧.

ಗಳನ್ನು ವ್ಯಕ್ತಪಡಿಸಿರುವಂತೆ ಅವರಲ್ಲಿದ್ದ ಔದಾರ್ಯ, ಉದಾತ್ತತೆ, ವಿದ್ಯಾಪಕ್ಷಪಾತ ಮುಂತಾದ ಸುಗುಣಗಳನ್ನೂ ಅವರ ದುರ್ಗುಣಗಳಿಗೆ ಕಾರಣಗಳನ್ನೂ ಸರಿಯಾಗಿ ಯಾರೂ ವ್ಯಕ್ತಪಡಿಸಿಲ್ಲವೆಂದು ಧಾರಾಳ ವಾಗಿ ಹೇಳಬಹುದು. ಕೃಷ್ಣರಾಜವೊಡೆಯರ ಆಳಿಕೆಯು ಟಿಪ್ಪೂ ಸುಲ್ತಾನನ ಆಳಿಕೆಯಾದ ಮೇಲೆ ಬಂದರೂ, ಈ ಪ್ರಸ್ತಾಪ ಬಂದಾಗ ಕೃಷ್ಣರಾಜವೊಡೆಯರ ವಿಚಾರವಾಗಿ 'ವಂಶರತ್ನಾಕರ' ದಿಂದ ಕೆಲವು ಅಂಶಗಳನ್ನು ತೆಗೆದು ಬರೆಯುತ್ತೇನೆ.

"ಈಸ್ಟ್ ಇಂಡಿಯಾ ಕಂಪೆನಿಯವರು ಟೀಪೂಸುಲ್ತಾನನ ಮರ ಣಾನಂತರ ಮೂರರಲ್ಲಿ ಒಂದು ಭಾಗವನ್ನು ಶ್ರೀಮನ್ಮಹಾರಾಜರವರಿಗೆ ಕೊಟ್ಟರಷ್ಟೆ. ಆ ಕಾಲದಲ್ಲಿ ಶ್ರೀಮನ್ಮಹಾರಾಜರವರು ಬಹಳ ಚಿಕ್ಕ ವಯಸ್ಸುಳ್ಳವರಾಗಿದ್ದರು. ೧೮೧೧ ನೇ ಇಸವಿಯವರೆಗೂ ಪೂರ್ಣಯ್ಯ ನವರು ದಿವಾನಗಿರಿಯನ್ನು ಮಾಡುತ್ತಾ ಸಾಧ್ಯವಾದಮಟ್ಟಿಗೂ ಚೆನ್ನಾ ಗಿಯೇ ರಾಜ್ಯವನ್ನು ಪರಿಪಾಲಿಸುತ್ತಿದ್ದರು. ಆದರೆ ಪೂರ್ಣಯ್ಯ ನವರೇ ಆಗಲಿ ಅಥವಾ ಈಸ್ಟ್ ಇಂಡಿಯಾ ಕಂಪೆನಿಯವರೇ ಆಗಲಿ ಶ್ರೀಮನ್ಮಹಾರಾಜರವರಿಗೆ ರಾಜ್ಯಭಾರಕ್ಕೆ ಅವಶ್ಯವಾದ ವಿದ್ಯಾಭ್ಯಾಸ ಗಳನ್ನು ಮಾಡಿಸಲಿಲ್ಲ. ರಾಜ್ಯಭಾರದಲ್ಲಿ ಯಾವ ಆಕ್ಷೇಪಣೆಗಳೂ ಇಲ್ಲದೆ ಆಡಳಿತಗಳನ್ನು ನಡೆಸಿಕೊಂಡು ಬಂದರೆ ತಾವು ಕೃತಕೃತ್ಯರಾದೆ ವೆಂದು ತಿಳಿದುಕೊಂಡು ಪೂರ್ಣಯ್ಯನವರು ರಾಜ್ಯಭಾರವನ್ನು ನಡೆಸು ತ್ತಿದ್ದರು. ತಮ್ಮ ಪಗದೀ ಹಣವು ಸರಿಯಾಗಿ ಬಂದರೆ ಸಾಕೆಂದು ಈಸ್ಟ್ ಇಂಡಿಯಾ ಕಂಪೆನಿಯವರು ಶ್ರೀಮನ್ಮಹಾರಾಜರವರ ವಿದ್ಯಾಭ್ಯಾಸ ವಿಷಯದಲ್ಲಿ ಉದಾಸೀನರಾಗಿದ್ದರು.

ಅನಂತರದಲ್ಲಿ ಶ್ರೀಮನ್ಮಹಾಜರಾರವರು ರಾಜ್ಯ ಪರಿಪಾಲನೆ ಮಾಡುವ ಕಾಲದಲ್ಲಿ ಪರಿವಾರಕ್ಕೆ ಸೇರಿದ ಕೆಲವು ದುಷ್ಟ ಅಧಿಕಾರಿಗಳ ನಾನಾ ವಿಧವಾದ ಹಿಂಸೆಗಳನ್ನು ತಾಳಲಾರದೆ ಮಂಜರಾಬಾದು ನಗರ ಮುಂತಾದ ಪ್ರದೇಶಗಳಲ್ಲಿ ಜನಗಳು ಹಂಗಾಮು ಮಾಡಿದರು. ದೇಶ ದಲ್ಲಿ ತಹಬಂದಿ ತಪ್ಪುವುದಕ್ಕೆ ಕಾರಣವಾಯಿತು. ಈ ಕಾಲದಲ್ಲಿ ದೇಶ ವನ್ನು ತಹಬಂದಿಗೆ ತಂದು ಶ್ರೀಮನ್ಮಹಾರಾಜರವರಿಗೆ ಒಪ್ಪಿಸುತ್ತೇ

ವೆಂದು ಈಸ್ಟ್ ಇಂಡಿಯಾ ಕಂಪೆನಿಯುವರು ರಾಜ್ಯವನ್ನು ಆಕ್ರಮಿಸಿಕೊಂಡರು. ರಾಜ್ಯಪರಿಪಾಲನೆ ಮಾಡುವುದಕ್ಕೆ ಒಬ್ಬ ಚೀಫ್ ಕಮಿಷನರನ್ನು ನೇಮಿಸಿದರು. ಇಂಗ್ಲಿಷ್ ಜನಗಳು ಮೈಸೂರು ಅಧಿಕಾರವನ್ನು ವಹಿಸುವ ಕಾಲದಲ್ಲಿ ಕೆಲವು ಜನ ದೊಡ್ಡ ಮನುಷ್ಯರು ರಾಜ್ಯವನ್ನು ಅವರಿಗೆ ಕೊಡತಕ್ಕ ಕೆಲಸವಿಲ್ಲವೆಂತಲೂ ತಾವು ಅವರೊಡನೆ ಯುದ್ಧಮಾಡಿ ಓಡಿಸಿಬಿಡುತ್ತೇವೆಂತಲೂ ಧೊರೆಗಳಿಗೆ ಅರಿಕೆಮಾಡಿಕೊಂಡರು. ಶ್ರೀಮನ್ಮಹಾರಾಜರವರು ಇದು ಅನುಚಿತವಾದದ್ದೆಂದು ತಿಳಿದುಕೊಂಡು ವಿನಯಪೂರ್ವಕವಾಗಿಯೇ ರಾಜ್ಯವನ್ನು ಇಂಗ್ಲೀಷರ ಸ್ವಾಧೀನಮಾಡಿದರು. ಸರ್ ಮಾರ್ಕ್ ಕಬ್ಬನ್ಸಾಹೇಬರವರು ಕಮಿಷನರಾಗಿದ್ದ ಕೆಲವು ವರ್ಷಗಳೊಳಗೆ ರಾಜ್ಯವು ಸಂಪೂರ್ಣವಾಗಿ ತಹಬಂದಿಗೆ ಬಂತು.

ಶ್ರೀಮನ್ಮಹಾರಾಜರವರು ರಾಜ್ಯವನ್ನು ವಾಪಸು ಕೊಡಬೇಕೆಂಬುದಾಗಿ ಕೇಳುವುದಕ್ಕೆ ಉಪಕ್ರಮಮಾಡಿದರು. ಈಸ್ಟ್ ಇಂಡಿಯಾ ಕಂಪೆನಿಯುವರು ಕಾಲಹರಣ ಮಾಡುತ್ತಲೇ ಬಂದರು. ಸರ್ ಮಾರ್ಕ್ ಕಬ್ಬನ್ ಸಾಹೇಬರವರು ಮೈಸೂರು ರಾಜ್ಯಭಾರವು ಬಹಳ ಧರ್ಮದಿಂದ ನಡೆಯುವಂತೆ ಅನೇಕ ಒಳ್ಳೇ ಏರ್ಪಾಡುಗಳನ್ನು ಮಾಡಿದರು. ಶ್ರೀಮನ್ಮಹಾರಾಜರವರು ರಾಜ್ಯಭಾರವನ್ನು ತಮಗೆ ವಾಪಸು ಕೊಡಬೇಕೆಂದು ೩೪ ನೇ ಇಸವಿಯಿಂದ ೬೧ ನೇ ಇಸವಿಯ ವರೆಗೂ ಅನೇಕ ಪತ್ರಿಕೆಗಳನ್ನು ಬರೆದುಕೊಂಡರು. ಈಸ್ಟ್ ಇಂಡಿಯಾ ಕಂಪೆನಿಯುವರು ಇವುಗಳಲ್ಲಿ ಯಾವುದಕ್ಕೂ ಸದುತ್ತರವನ್ನು ಕೊಡಲಿಲ್ಲ. ೧೮೬೧ ನೇ ಇಸವಿಯಲ್ಲಿ ಸರ್ ಮಾರ್ಕ್ ಕಬ್ಬನ್ ಸಾಹೇಬರವರು ವಿಲಾಯಿತಿಗೆ ಹೋಗುವುದಕ್ಕೋಸ್ಕರ ಕಮಿಷನರ್ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟರು. ಇವರು ಇರುವವರೆಗೂ ರಾಜ್ಯಭಾರವು ಇಂಗ್ಲಿಷ್ ಜನಗಳದಾಗಿದ್ದಾಗ್ಯೂ ರಾಜ್ಯಭಾರದ ಖರ್ಚುಗಳು ಕಡಮೆಯಾಗಿದ್ದುವು. ರಾಜ್ಯದ ಖಜಾನೆಯು ತುಂಬಿತ್ತು. ಇವರ ಅನಂತರ ಮಿಸ್ಟರ್ ಬೌರಿಂಗ್ ಸಾಹೇಬರವರು ಕಮಿಷನರಾಗಿ ಬಂದರು. ಇವರು ಅನೇಕ ಹೊಸ ಏರ್ಪಾಡುಗಳನ್ನು ಮಾಡಿ ಅನೇಕ ಇಲಾಖೆಗ

ಳನ್ನು ಕಲ್ಪಿಸಿ ದೊಡ್ಡ ದೊಡ್ಡ ಅಧಿಕಾರಗಳಿಗೆಲ್ಲಾ ಯೂರೋಪಿಯನ ರನ್ನು ತಂದಿಟ್ಟು ಅವರಿಗೆಲ್ಲಾ ದೊಡ್ಡ ದೊಡ್ಡ ಸಂಬಳಗಳನ್ನು ಮಾಡಿ ಖಜಾನೆ ಬರಿದಾಗುವುದಕ್ಕೆ ತಕ್ಕ ಅನೇಕ ಪ್ರಯತ್ನಗಳನ್ನು ಮಾಡಿ ದರು. ಅದರಿಂದೀಚೆಗೆ ಬಂದ ಮಿಸ್ಟರ್ ಸ್ಯಾಂಡರ್ಸ್ ಸಾಹೇಬರವರ ಕಾಲದಲ್ಲಿ ಕ್ಷಾಮವು ಬಂತು. ಜನಗಳಿಗೆ ಉಪಕಾರ ಮಾಡುತ್ತೇವೆಂದು ಖಜಾನೆಯಲ್ಲಿದ್ದ ೮೦ ಲಕ್ಷ ರೂಪಾಯಿಗಳ ಜೊತೆಗೆ ಇನ್ನೂ ೮೦ ಲಕ್ಷ ರೂಪಾಯಿಗಳ ಸಾಲವನ್ನು ಮಾಡಿ ರಿಲೀಫ್ ಕಿಚನ್ ಗಳನ್ನು ಅಂದರೆ ಕ್ಷಾಮದ ನಿವಾರಣಾರ್ಥವಾದ ಅನ್ನಸತ್ರಗಳನ್ನು ಏರ್ಪಾಡು ಮಾಡಿದರು. ಇವುಗಳಿಗೆ ಹೋದ ಅನಾಥರಲ್ಲಿ ಲಕ್ಷಾಂತರ ಜನಗಳು ಸರಿಯಾದ ಪೋಷಣೆಯಿಲ್ಲದೆ ಮೃತರಾದರು.

ಶ್ರೀಮನ್ಮಹಾರಾಜರವರು ಪುತ್ರಸ್ವೀಕಾರ ಮಾಡಿಕೊಳ್ಳದೆ ಇದ್ದರೆ ಈ ರಾಜ್ಯವು ನಿರುಪಾಧಿಕ ಸರ್ವಮಾನ್ಯವಾಗಿ ಸಿಕ್ಕುವುದೆಂದು ಕೆಲವು ಜನ ಯೂರೋಪಿಯನರು ನಿರೀಕ್ಷಿಸಿಕೊಂಡಿದ್ದರು. ಆದರೆ ಶ್ರೀಮನ್ಮಹಾರಾಜರವರು ಪುತ್ರಸ್ವೀಕಾರವನ್ನು ಮಾಡಿಕೊಂಡು ಅನಂತರದಲ್ಲಿ ಇಂಡಿಯಾ ಗೌರ್ನಮೆಂಟಿಗೆ ತಿಳಿಸಿದರು. ಈ ಸ್ವೀಕಾರ ವನ್ನು ಮಂಜೂರಾಗದ ಹಾಗೆ ಮಾಡಬೇಕೆಂದು ಕೆಲವರು ಪ್ರಯತ್ನ ಮಾಡಿದರು. ಆದಾಗ್ಯೂ ನಿಸ್ಪೃಹರಾದ ಅನೇಕ ದೊಡ್ಡ ಮನುಷ್ಯರು ಶ್ರೀಮನ್ಮಹಾರಾಜರವರು ಮಾಡಿಕೊಂಡ ಸ್ವೀಕಾರವು ಸಿದ್ಧವಾದ ದ್ದೆಂದು ನಿಷ್ಕರ್ಷೆಮಾಡಿಸಿದರು. ಶ್ರೀಮನ್ಮಹಾರಾಜರವರಿಗೆ ತಾವು ಬದುಕಿರುವಾಗಲೇ ಪುನಃ ರಾಜ್ಯಭಾರವನ್ನು ಹೊಂದಬೇಕೆಂದು ಬಹಳ ಅಭಿಲಾಷೆಯಿತ್ತು. ಈ ಅಭಿಲಾಷೆಯು ನೆರವೇರಲು ತಕ್ಕ ಪ್ರಯತ್ನ ವನ್ನು ಮಾಡುತ್ತೇವೆಂದು ಹೇಳಿ ಕೆಲವು ಜನಗಳು ಬಹಳ ದ್ರವ್ಯವಂತ ರಾದರು. ರಾಜ್ಯಭಾರವನ್ನು ಪುನಃ ಹೊಂದುವುದಕ್ಕೆ ಮಾಡಿದ ಪ್ರಯತ್ನ ಗಳೆಲ್ಲಾ ಸಾಗುವುದಕ್ಕೆ ಮುಂಚೆಯೇ ಶ್ರೀಮನ್ಮಹಾರಾಜ ಕೃಷ್ಣರಾಜ ಒಡೆಯರವರು ೧೮೬೮ ನೇ ಇಸವಿಯಲ್ಲಿ ಭಗ್ನಮನೋರಥರಾಗಿ ಸ್ವರ್ಗ ಸೋಪಾನವನ್ನಡರಿದರು."*

---

* ವಂಶರತ್ನಾಕರ— ಪುಟ ೩೮೯–೩೯೨.

## ನವಾಬರ ಕಾಲ

ಹೈದರಾಲಿಯ ಕಾಲದ ಮತ್ತು ಅಲ್ಲಿಂದ ಈಚಿನ ಮೈಸೂರು ಚರಿತ್ರೆಯು ನಮಗೆ ವಿಸ್ತಾರವಾಗಿ ತಿಳಿದು ಬಂದಿದೆ. ಈ ಭಾಗಗಳ ಮೇಲೆ ಆಯಾ ಕಾಲದಲ್ಲಿಯೇ ಇದ್ದವರೂ ಮತ್ತು ಈಚಿನವರೂ ಇಂಗ್ಲಿಷ್ ಫ್ರೆಂಚ್ ಪಾರ್ಸಿ ಮುಂತಾದ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಇವುಗಳನ್ನು ಹುಡುಕಿದರೆ ಕಾದಂಬರಿಗೆ ಯಥೇಚ್ಛವಾಗಿ ಸಾಮಗ್ರಿಗಳು ಸಿಕ್ಕುವುವು. ಅವುಗಳೆಲ್ಲವನ್ನೂ ಈ ಉಪನ್ಯಾಸದಲ್ಲಿ ತಿಳಿಸುವುದು ಅಸಾಧ್ಯ. ಆದ್ದರಿಂದ ಉದಾಹರಣೆಗಾಗಿ ಹೈದರನ ಆಳಿಕೆಯಿಂದ ಒಂದು ಸಂಗತಿಯನ್ನು ಮಾತ್ರ ಇಲ್ಲಿ ಸೂಚಿಸುತ್ತೇನೆ :—

ಬಿದುರೂರಿನ ಬಸಪ್ಪನಾಯಕನು ೧೭೫೫ ರಲ್ಲಿ ಕಾಲವಾಗಲು ಅವನ ಹೆಂಡತಿಯೂ ಚೆನ್ನಬಸವಯ್ಯನೆಂಬ ಅವನ ದತ್ತಪುತ್ರನೂ ರಾಜ್ಯವನ್ನು ನೋಡಿಕೊಳ್ಳುತ್ತಿದ್ದರು. ರಾಣಿಯು ನಿಂಬಯ್ಯನೆಂಬವನನ್ನು ಕಟ್ಟಿಕೊಂಡು ದುರ್ನಡತೆಗೆ ಬಿದ್ದಿದ್ದಳು. ಇದು ಆಕೆಯ ಮಗನಿಗೆ ತಿಳಿದು ಅವನು ಆಕ್ಷೇಪಿಸಿದನು. ಆದ್ದರಿಂದ ಇವನ ಕಾಟವೇ ಇಲ್ಲದಂತೆ ಮಾಡಿಕೊಳ್ಳುವುದು ಉತ್ತಮವೆಂದು ಯೋಚಿಸಿ ಅವರಿಬ್ಬರೂ ಒಬ್ಬ ಜಟ್ಟಿಯನ್ನು ಗೊತ್ತುಮಾಡಿ ಅವನಿಂದ ಚೆನ್ನಬಸವಯ್ಯನನ್ನು ಕತ್ತುಮುರಿಸಿ ಕೊಲ್ಲಿಸಿದರು. ಸೋಮಶೇಖರನೆಂಬ ಮತ್ತೊಬ್ಬ ಹುಡುಗನು ದತ್ತುವಾದನು.

ಹೀಗಿರಲು ಒಬ್ಬನು ಹೈದರನನ್ನು ಕಂಡು ತಾನು ಚೆನ್ನಬಸವಯ್ಯನೆಂದೂ ಜಟ್ಟಿಯು ತನ್ನನ್ನು ಕೊಲ್ಲದೆ ಬಿಡಲು ತಾನು ಬದುಕಿ ಬಂದೆನೆಂದೂ ತನಗೆ ಸಹಾಯ ಮಾಡಿ ಬಿದುರೂರಿನ ಸಂಸ್ಥಾನವನ್ನು ಕೊಡಿಸಬೇಕೆಂದೂ ಬಂದು ಹೇಳಿಕೊಂಡನು. ಹೈದರನಿಗೆ ಇಷ್ಟು ನೆಪ ಸಿಕ್ಕಿದ್ದೇ ಸಾಕು, ಅವನು ಸೈನ್ಯವನ್ನು ತೆಗೆದುಕೊಂಡು ಹೊರಟು ಚೆನ್ನಬಸವಯ್ಯನನ್ನು ಉದ್ಧಾರ ಮಾಡುವೆನೆಂದು ಹೇಳುತ್ತ ಬಿದುರೂರು ಸಂಸ್ಥಾನದ ಹತ್ತಿರಕ್ಕೆ ಬಂದು ಅಲ್ಲಿನ ಪ್ರಜೆಗಳಿಗೆ ತಮ್ಮ ರಾಜನನ್ನು ಸ್ವೀಕರಿಸಬೇಕೆಂದು ಹೇಳಿ ಕಳುಹಿಸಿದನು. ಶಿವಮೊಗ್ಗೆಯು

ಹೈದರನ ಸ್ವಾಧೀನವಾಯಿತು. ಅಲ್ಲಿ ಅವನಿಗೆ ಸುಮಾರು ಒಂದು ಲಕ್ಷ ವರಹವುಳ್ಳ ನಿಧಿಯು ಸಿಕ್ಕಲು ಅದರಲ್ಲಿ ಒಂದು ಲಕ್ಷ ರೂಪಾಯಿಗಳಷ್ಟನ್ನು ತನ್ನ ಸೈನಿಕರಿಗೆ ಹಂಚಿ ಅವರನ್ನು ಉತ್ಸಾಹಗೊಳಿಸಿದನು. ಈಗ ಅವನು ಹಿಂತಿರುಗಿ ಹೊರಟು ಹೋಗುವುದಾದರೆ ನಾಲ್ಕು ಲಕ್ಷ ವರಹಗಳನ್ನು ಕೊಡುವುದಾಗಿ ರಾಣಿಯು ಹೇಳಿ ಕಳುಹಿಸಿದಳು. ಆದರೆ ಅದಕ್ಕೆ ನವಾಬನು ಒಪ್ಪಲಿಲ್ಲ. ಕುಂಸಿಗೆ ಬಂದಾಗ ಅಲ್ಲಿ ಹಿಂದಿನ ರಾಜನ ಹತ್ತಿರ ಮಂತ್ರಿಯಾಗಿದ್ದು ಈಗ ಸೆರೆಯಲ್ಲಿದ್ದ ಲಿಂಗಣ್ಣನು ದೊರಕಿ ತಾನು ದೇಶದ ಸ್ವರೂಪ ಸ್ವಭಾವಗಳನ್ನೆಲ್ಲ ತಿಳಿಸುವುದಾಗಿಯೂ ಯಾವ ತೊಂದರೆಯೂ ಇಲ್ಲದಂತೆ ಅವನನ್ನು ಗುಪ್ತಮಾರ್ಗದಿಂದ ಬಿದುರೂರಿನ ಕೋಟೆಯೊಳಕ್ಕೆ ಕರೆದುಕೊಂಡು ಹೋಗುವುದಾಗಿಯೂ ಮಾತು ಕೊಟ್ಟನು. ಮುಂದಕ್ಕೆ ಏಟೂರಿನ ಮೇಲೆ ಹೋಗುತ್ತಿರಲು ಅಲ್ಲಿದ್ದ ಕಾವಲುಗಾರರು ಸೈನ್ಯದ ಮೇಲೆ ಗುಂಡುಹಾರಿಸಿದರು. ಹೈದರನು ಅವರನ್ನು ಸೋಲಿಸಿ ಅವರ ಕಿವಿ ಮೂಗುಗಳನ್ನು ಕುಯ್ಯಿಸಿ ಓಡಿಸಿದನು. ಅವನು ಅನಂತಪುರದ ಹತ್ತಿರಕ್ಕೆ ಬಂದಾಗ ರಾಣಿಯು ಹನ್ನೆರಡು ಲಕ್ಷ ವರಹಗಳನ್ನು ಕೊಡುವುದಾಗಿಯೂ ರಾಜಧಾನಿಯ ಹತ್ತಿರಕ್ಕೆ ಬಂದಾಗ ಹದಿನೆಂಟು ಲಕ್ಷ ವರಹಗಳನ್ನು ಕೊಡುವುದಾಗಿಯೂ ಅದನ್ನು ತೆಗೆದುಕೊಂಡು ಅವನು ಹೊರಟು ಹೋಗಬೇಕೆಂದೂ ಹೇಳಿ ಕಳುಹಿಸಿದಳು. ಆದರೆ ಹೈದರನು ಇದು ಯಾವುದಕ್ಕೂ ಒಪ್ಪಲಿಲ್ಲ.

ಇದರಿಂದ ರಾಣಿಗೂ ಅವಳ ಇನಿಯನಿಗೂ ಹೆದರಿಕೆಯುಂಟಾಗಿ ಇಬ್ಬರೂ ಬಲ್ಲಾಳರಾಯನ ದುರ್ಗಕ್ಕೆ ಓಡಿ ಹೋದರು. ಆದರೆ ಹೋಗುವುದಕ್ಕೆ ಮುಂಚೆ ರಾಣಿಯು ಅಲ್ಲಿದ್ದ ಭಂಡಾರವನ್ನು ಬೇರೆ ಕಡೆಗೆ ಸಾಗಿಸಬೇಕೆಂದೂ ಅಷ್ಟಕ್ಕೆ ಅವಕಾಶವಿಲ್ಲದಿದ್ದರೆ ಅರಮನೆಗೂ ಖಜಾನೆಗೂ ಬೆಂಕಿ ಇಡಬೇಕೆಂದೂ ಹೇಳಿ ಅದೇ ಕೆಲಸಕ್ಕೆ ಕೆಲವರನ್ನು ನೇಮಕಮಾಡಿ ಹೋಗಿದ್ದಳು.

ಹೈದರನು ಬಂದು ರಾಜಧಾನಿಯನ್ನು ಮುಂದುಗಡೆಯಿಂದ ಮುತ್ತುವಂತೆ ನಟಿಸುತ್ತ ಲಿಂಗಣ್ಣನು ತೋರಿಸಿದ ಗುಪ್ತಮಾರ್ಗವನ್ನು

ಹಿಡಿದು ಹಿಂದುಗಡೆಯಿಂದ ಊರಿಗೆ ಪ್ರವೇಶಮಾಡಿದನು. ಕೂಡಲೆ ರಾಣಿಯು ಗೊತ್ತುಮಾಡಿದ್ದ ಜನರು ಅರಮನೆಗೆ ಬೆಂಕಿಯನ್ನು ಹತ್ತಿಸಿಬಿಟ್ಟರು. ಹಿಂದೆ ಇಂಥ ಅವಾಂತರವನ್ನೇ ಕಂಡು ಅರಿಯದ ಪ್ರಜೆಗಳು ಈಗ ಗಾಬರಿಯಿಂದ ಚಲ್ಲಾಪಿಲ್ಲಿಯಾಗಿ ಹತ್ತಿರದಲ್ಲಿದ್ದ ಕಾಡುಗಳಿಗೂ ಗುಡ್ಡಗಳಿಗೂ ಓಡಿಹೋಗಿ ಅವಿತುಕೊಂಡರು. ಕುಬೇರನ ಪಟ್ಟಣದಂತಿದ್ದ ಆ ಊರು ದಿಕ್ಕೇ ಇಲ್ಲದಂತಾಗಿ ಹೈದರನ ಕೈವಶವಾಯಿತು. ಅಲ್ಲಿ ಅವನಿಗೆ ಸುಮಾರು ಒಂದು ಕೋಟಿಯೂ ಇಪ್ಪತ್ತು ಲಕ್ಷ ಪೌಂಡಿನಷ್ಟು ದ್ರವ್ಯ ಸಿಕ್ಕಿತೆಂದು ಹೇಳುತ್ತಾರೆ.

ಅನಂತರ ಚೆನ್ನಬಸವಯ್ಯನು ನಿಜವಾದವನಲ್ಲವೆಂದು ತಿಳಿದುಬಂದಂತೆ ಮಾಡಿ, ಹೈದರನು ಅವನನ್ನೂ ರಾಣಿ ನಿಂಬಯ್ಯ ಸೋಮಶೇಖರ ಇವರನ್ನೂ ಮದ್ದಗಿರಿಯ ದುರ್ಗದಲ್ಲಿ ಸೆರೆಯಿಡಿಸಿದನು. *

ಈ ವೃತ್ತಾಂತವನ್ನು, ಬೇಕಾದರೆ, " ಹ್ಯಾಂಲೆಟ್ " ನಂಥ ಕಥೆಯಾಗಿ ಮಾಡಬಹುದಲ್ಲವೇ ?

ಹೈದರನ ಚರಿತ್ರೆಯನ್ನೋದುತ್ತೋದುತ್ತ ಮೊಗಲರಿಗೂ ರಾಜಪುತ್ರರಿಗೂ ನಡೆಯುತ್ತಿದ್ದ ಯುದ್ಧಗಳು ಜ್ಞಾಪಕಕ್ಕೆ ಬರುತ್ತವೆ. ಆ ಕಾಲದಲ್ಲಿ ಪಾಳೆಯಗಾರರೂ ನಾಯಕರೂ ಹೈದರನನ್ನು ಅನೇಕ ವೇಳೆ ಕಣ್ಣು ಕಣ್ಣು ಬಿಡಿಸಿಬಿಟ್ಟರು. ಅವರು ದುರ್ಗಗಳಲ್ಲಿ ಸೇರಿಕೊಂಡರೆಂದರೆ, ಮದ್ದು ಗುಂಡು ಫಿರಂಗಿಗಳನ್ನು ತೆಗೆದುಕೊಂಡುಹೋಗಿ ಮುತ್ತಿಗೆ ಹಾಕಿದರೂ ವರ್ಷಗಟ್ಟಲೆ ಜಗ್ಗುತ್ತಿರಲಿಲ್ಲ. ಕೆಲವು ವೇಳೆ ಹೈದರನೂ ವಿಮುಖನಾಗಿ ಬರಬೇಕಾಗಿತ್ತು ; ಅಥವಾ ಜಯಿಸಿದರೂ ಅವನು ತನ್ನ ಬೆನ್ನು ತಿರುಗಿಸುತ್ತಲೇ ಈ ನಾಯಕರು ತಾವೇತಾವಾಗುತ್ತಿದ್ದರು. ದೇವನಹಳ್ಳಿಯ ಪಾಳೆಯಗಾರನನ್ನು ಇದಕ್ಕೆ ಒಂದು ಉದಾಹರಣೆಯಾಗಿ ಹೇಳಬಹುದು. †

---

* ವಿಲ್ಕ್ಸರವರ ಚರಿತ್ರೆ : ಮೊದಲನೆಯ ಭಾಗ, ಪುಟ ೪೪೭-೪೫೩.

† ವಿಲ್ಕ್ಸರವರ ಚರಿತ್ರೆ : ಮೊದಲನೆಯ ಭಾಗ ಪುಟ ೪೪೪-೪೪೬.

ಟಿಪ್ಪೂಸುಲ್ತಾನನ ಆಳಿಕೆಗೆ ಬಂದೆವೆಂದರೆ, ಅವನ ಕ್ರೌರ್ಯ ಕಠೋರತೆ ನಿರ್ದಯತ್ವ ಮುಂತಾದವುಗಳು ನೆನಪಿಗೆ ಬಂದು ಮೈಕೈ ಪರಚಿಕೊಳ್ಳುವ ಹಾಗಾಗುತ್ತದೆ. ಅವನು ಧರ್ಮಾವತಾರವೆಂದು ಹೇಳುವ ಮುಹಮ್ಮದೀಯರೂ ಕೂಡ ಅವನ ನಡತೆಯಲ್ಲಿ ಕುಂದು ಕೊರತೆಗಳನ್ನು ಎಣಿಸದೆ ಇಲ್ಲ. * ಅವನಿಗೆ ಸಿಟ್ಟುಬಂದಾಗ ನನ್ನವರು

---

* ಈ ಕಾಲದಲ್ಲಿ ಹತ್ತಿಕೊಂಡಿರುವ ಬ್ರಾಹ್ಮಣ ಬ್ರಾಹ್ಮಣೇತರ ವಿವಾದವು ಆಗಲೂ ರೂಪಾಂತರದಲ್ಲಿ ಇತ್ತೆಂದು ಮುಂದೆ ಹೇಳುವ ವಾಕ್ಯಗಳಿಂದ ಗೊತ್ತಾಗುತ್ತದೆ.—

"ಸುಲ್ತಾನನಿಗೆ ಬ್ರಾಹ್ಮಣರು ಹಿಂದುಗಳು ಮುಂತಾದ ಜನರನ್ನು ಕಂಡರೆ ಸುತರಾಂ ಆಗುತ್ತಿರಲಿಲ್ಲವಾದ್ದರಿಂದ ಅವನು ಮುಸಲ್ಮಾನರನ್ನು ಬಿಟ್ಟು ಮತ್ತಾರನ್ನೂ ತನ್ನವರೆಂದು ಭಾವಿಸುತ್ತಿರಲಿಲ್ಲ. ಆದ್ದರಿಂದ ಸರ್ವಪ್ರಯತ್ನದಿಂದಲೂ ಅವರಿಗೆ (ಮುಸಲ್ಮಾನರಿಗೆ) ಅನುಕೂಲಮಾಡಿಕೊಟ್ಟು ಅವರನ್ನು ಮುಂದಕ್ಕೆ ತರುವುದೇ ಅವನ ಮುಖ್ಯೋದ್ದೇಶವಾಗಿತ್ತು. ಈ ಉದ್ದೇಶವು ಈಡೇರುವುದಕ್ಕಾಗಿ ಚೆನ್ನಾಗಿ ಓದುವುದಕ್ಕೆ ಬರೆಯುವುದಕ್ಕೆ ಕೂಡ ಬರದ ಕೆಲವು ಮುಸಲ್ಮಾನರನ್ನು ಆರಿಸಿಕೊಂಡು ಅವರನ್ನು ಖಜಾನೆಯ ಮಿರ್ಸಾಗಳಾಗಿಯೂ....ಗೊತ್ತುಮಾಡಿದನು; ಎಲ್ಲ (ಕೆಲಸಗಳಿಗೂ) ಮುಸಲ್ಮಾನರೇ ಆದರು. ದೇಶಮುಖಿ ದೇಶಪಾಂಡೆ ಕರ್ಣಂ ಕಾನೂನ್‌ಗೊ ಮುಂತಾದ ನೌಕರಿಗಳಲ್ಲಿದ್ದ ಬ್ರಾಹ್ಮಣರನ್ನು ಅವರ ಸ್ಥಾನಗಳಿಂದ ತಪ್ಪಿಸಿ ಮುಳುಗಿಸಿಬಿಡಬೇಕೆಂಬುದು ಸುಲ್ತಾನನ ಯೋಚನೆಯಾಗಿತ್ತು. ಅದರಂತೆ ಅವರಿಗೆಲ್ಲಾ ಕೂಡಲೆ ನೌಕರಿಗಳೇನೋ ಹೋದುವು. ಆದರೂ ಈ ಜನರು ಆಶ್ರಯದಿಂದಲೂ ಕೆಲಸಕಾರ್ಯಗಳಲ್ಲಿ ತಮಗೆ ಇದ್ದ ಅನುಭವದಿಂದಲೂ, ಅಮಿಲ್ದಾರರು ಅಸೂಫರು ಮುಂತಾದ ಅಧಿಕಾರಿಗಳೊಡನೆ ಸೇರಿಕೊಂಡು ಸುಲ್ತಾನನಿಗೆ ತಿಳಿಯದ ಹಾಗೆ ಎಂದಿನಂತೆಯೇ ರೆವಿನ್ಯೂ ಕೆಲಸಕಾರ್ಯಗಳಲ್ಲಿ ಇದ್ದುಕೊಂಡೇ ಇದ್ದರು. ರೆವಿನ್ಯೂ ವಿಚಾರಗಳಲ್ಲಿ ಈ ಬ್ರಾಹ್ಮಣರಿಗಿದ್ದ ಸಾಮರ್ಥ್ಯವನ್ನು ತಿಳಿದು ಅವರನ್ನು ನಂಬಿಕೊಂಡು ಅಸೂಫರೂ ಅಮಿಲ್ದಾರರೂ ಸರ್ಕಾರದ ಕೆಲಸವನ್ನು ಒತ್ತರಿಸಿಬಿಟ್ಟು, ಯಾವ ಹೆದರಿಕೆಯೂ ಇಲ್ಲದೆ ಹಗಲೂ ರಾತ್ರಿಯೂ ಗಾಯನ ನರ್ತನ ಮುಂತಾದವುಗಳಲ್ಲಿ ಸುಖವಾಗಿ ಕಾಲಕಳೆಯುತ್ತಿದ್ದರು. ಹೀಗಿರಲು

ತನ್ನವರು, ಮಿತ್ರರು ಶತ್ರುಗಳು, ಉಪಕಾರ ಮಾಡಿದವರು ಅಪಕಾರ ಮಾಡಿದವರು ಎಂಬ ಯಾವ ಜ್ಞಾನವೂ ಇರುತ್ತಿರಲಿಲ್ಲ. ಇದಕ್ಕೆ ಉದಾಹರಣೆಯಾಗಿ ಒಂದು ಕಥೆಯನ್ನು ಹೇಳುತ್ತೇನೆ. ಇದು ಎಂಥ ಉತ್ತಮವಾದ ವಿಷಾದನಾಟಕಕ್ಕೆ ವಸ್ತುವಾಗಬಹುದೆಂಬುದು ಪಾಠಕರಿಗೇ ಗೊತ್ತಾಗುತ್ತದೆ. ಸ್ವಲ್ಪ ಕಷ್ಟಪಟ್ಟು ಬರೆದರೂ ಸಾಕು, ಉತ್ತಮವಾದ ಕಾದಂಬರಿಯಾಗುವುದರಲ್ಲಿ ಏನೂ ಸಂದೇಹವಿಲ್ಲ :—

ಟಿಪ್ಪೂಸುಲ್ತಾನನು ಪಟ್ಟಕ್ಕೆ ಬಂದ ತರುಣ ; ಆಗ ಅಯಾಸ್ ಖಾನನೆಂಬ ಅಧಿಕಾರಿಯು ದ್ರೋಹಿಯಾಗಿ ತನ್ನ ವಶದಲ್ಲಿದ್ದ ನಗರ ಮಂಗಳೂರುಗಳನ್ನು ಇಂಗ್ಲಿಷರ ವಶಮಾಡಿ ಹಣಕಾಸನ್ನು ಹೊತ್ತುಕೊಂಡು ಬೊಂಬಾಯಿಗೆ ಓಡಿಹೋದನು. ಹೀಗೆ ಇಂಗ್ಲಿಷರ ಕೈಗೆ ಸಿಕ್ಕಿದ ನಗರದ ಕೋಟೆಯನ್ನು ವಶಮಾಡಿಕೊಳ್ಳಲು ಸುಲ್ತಾನನ ಸೇನೆಯು ಅದಕ್ಕೆ ಮುತ್ತಿಗೆಹಾಕಿತು. ಈ ಮಧ್ಯೆ ಅಯಾಸ್‌ಖಾನನ ಕಾಲದಲ್ಲಿ ಕಿಲ್ಲೆದಾರನಾಗಿದ್ದ ಕಾಸಿಂಖಾನನೆಂಬವನು ಸುಲ್ತಾನನಿಗೆ ದ್ರೋಹಿಯಾಗಿ ಇಂಗ್ಲಿಷರಿಗೆ ಸಹಾಯಮಾಡಿ ಅವರಿಂದ ಅಲ್ಲಿಯ ಲೆಫ್ಟಿನೆಂಟ್ ಗೌರ್ನರ್ ಅಧಿಕಾರವನ್ನು ಪಡೆದು ಇದ್ದುಕೊಂಡಿದ್ದನು. ಸುಲ್ತಾನನ ಸೇನೆಯು ಕೋಟೆಗೆ ಮುತ್ತಿಗೆ ಹಾಕಿದ್ದನ್ನು ನೋಡಿ ತನಗೆ ಉಳಿಗಾಲವಿಲ್ಲವೆಂದು ತಿಳಿದು, ಸೇನಾಪತಿಯಾದ ಮಹಮ್ಮದ್ ಅಲಿಯಿಂದ ಅಭಯವನ್ನು ತೆಗೆದುಕೊಂಡು ಅವನಿಗೆ ಶರಣಾಗತನಾದನು.

---

ಸುಲಿಗೆಕೋರರಾದ ಬ್ರಾಹ್ಮಣರು ತಮ್ಮ ಮನಸ್ಸು ಬಂದಂತೆ ತಾಲ್ಲೂಕುಗಳನ್ನು ಕೊಳ್ಳೆ ಹೊಡೆದು ಬಂದದ್ದರಲ್ಲಿ ಅರ್ಧವನ್ನು ಅಸೂಫರಿಗೂ ಅಮಿಾಲರಿಗೂ ಕೊಟ್ಟು ಉಳಿದ ಅರ್ಧವನ್ನು ತಾವು ಇಟ್ಟುಕೊಳ್ಳುತ್ತಿದ್ದರು.

ಸುಲ್ತಾನನಿಗೆ ಬೇರೆ ಕಡೆಗಳಿಂದ ಇವೆಲ್ಲಾ ತಿಳಿದುಬಂದರೂ ಈ ಅಪ್ರಾಮಾಣಿಕರ ಆಣೆ ಭಾಷೆಗಳನ್ನು ಕೇಳಿಕೊಂಡು ಅಪರಾಧಿಗಳಾದವರನ್ನು ಶಿಕ್ಷಿಸಲೂ ಇಲ್ಲ, ಅವರ ದುರ್ಮಾರ್ಗಕ್ಕಾಗಿ ಕೋಪವನ್ನು ತೋರಿಸಲೂ ಸಹ ಇಲ್ಲ."
—"ಮೈಲ್ಸ್"ರವರ ಟಿಪ್ಪೂಸುಲ್ತಾನನ ಚರಿತ್ರೆ (ಪಾರ್ಸಿಗ್ರಂಥದ ಭಾಷಾಂತರ) ಪುಟ ೨೩೦-೨೩೨.

ಉದಾರಬುದ್ಧಿಯುಳ್ಳ ಸೇನಾಪತಿಯೂ ಮರೆಹೊಕ್ಕವನನ್ನು ಶಿಕ್ಷಿಸದೆ ತನ್ನ ಹತ್ತಿರದಲ್ಲಿಯೇ ಇಟ್ಟುಕೊಂಡು ಅವನನ್ನು ಸ್ನೇಹಿತನಂತೆ ಕಾಣು ತ್ತಿದ್ದನು. ಇದೆಲ್ಲವೂ ಟಿಪ್ಪುವಿಗೆ ತಿಳಿಯಿತು.

ಸುಲ್ತಾನನು ಕೋಪೋದ್ದೀಪ್ತನಾಗಿ ಒಂದುದಿನ ಅವನನ್ನು ಕರೆಸಿಕೊಂಡು " ನಗರದ ಕೋಟೆಯಲ್ಲಿ ಬೇಕಾದಷ್ಟು ಆಹಾರಸಾಮಗ್ರಿ ಗಳೂ ಯುದ್ಧಸಾಮಗ್ರಿಗಳೂ ಸೈನ್ಯವೂ ಇರಬೇಕಾದರೆ ಶತ್ರುಗಳ ಕೈಗೆ ಅದು ವಶವಾದದ್ದು ಹೇಗೆ? ಒಬ್ಬ ಕೃತಘ್ನನೂ ನೀಚನೂ ಆದ ಗುಲಾ ಮನು ದ್ರೋಹಮಾಡಿ ದಂಗೆಯೆದ್ದ ಮಾತ್ರದಿಂದ ಆ ಕೋಟೆಯ ಅಧಿಕಾರದಲ್ಲಿ ನಿಯಮಿಸಲ್ಪಟ್ಟಿದ್ದ ಸದ್ವಂಶಸಂಭೂತನಾದ ನೀನು ಕರ್ತವ್ಯಬುದ್ಧಿಯಿಂದ ಪ್ರತಿನಿಂತು ಒಂದುದಿನದ ಮಟ್ಟಿಗಾದರೂ ಶತ್ರು ಗಳನ್ನು ಎದುರಿಸುವುದಕ್ಕೆ ಏಕೆ ಪ್ರಯತ್ನಪಡಲಿಲ್ಲ?" ಎಂದು ಕೇಳಿ ದನು.

ಅವನು ಉತ್ತರವಾಗಿ " ಪ್ರಭು, ಬೇಕಾದಷ್ಟು ಸಾಧನ ಸಾಮಗ್ರಿ ಗಳಿದ್ದರೂ, ನಾಯಕರೂ ಇತರ ಅಧಿಕಾರಿಗಳೂ ದ್ರೋಹಿಯಾದ ಅಯಾಸ್‌ಖಾನನ ಮಾತನ್ನು ಕೇಳಿ ನನ್ನ ಮಾತಿಗೆ ಪ್ರತಿಯಾಗಿ ನಡೆದು ನನಗೆ ತಿಳಿಯದಂತೆ ಗೋಪ್ಯವಾಗಿ ಶತ್ರುಗಳೊಡನೆ ಪಿತೂರಿ ನಡೆಸಿ ಅವರನ್ನು (ಇಂಗ್ಲಿಷರನ್ನು) ಕೋಟೆಯೊಳಕ್ಕೆ ಕರೆದುಕೊಂ ಡರು. ಸುಲ್ತಾನರ ಗುಲಾಮನಾದ ನಾನು ಉಪಾಯ ತೋರದೆ ಸನ್ನಿಧಿಗೆ ಬರಬೇಕೆಂದು ಹೊರಟೆ; ಆದರೆ ಶತ್ರುಗಳು ತಡೆದುಬಿಟ್ಟರು" ಎಂದನು.

ಸುಲ್ತಾನನು, " ನೀನು ಹೇಳುವುದು ನಿಜವೇ ಎಂದು ಇಟ್ಟು ಕೊಂಡರೂ, ನಾಯಕರ ತುಂಟತನಕ್ಕೆ ಮೊದಲೇ ನೀನೇಕೆ ಸಿದ್ಧ ನಾಗಿರಲಿಲ್ಲ? ಆ ವರ್ತಮಾನವನ್ನು ಮೊದಲೇ ಏಕೆ ಸನ್ನಿಧಿಗೆ ಹೇಳಿ ಕಳುಹಿಸಲಿಲ್ಲ? ಅಲ್ಲದೆ ಕೋಟೆಯನ್ನು ಬಿಟ್ಟುಕೊಡುವುದೇ ಆಗ್ಯೆ ವಿವೇಕ ವಾದ್ದೆಂದು ನೀನು ತಿಳಿದಿದ್ದರೆ, ಸರ್ಕಾರದ ಹಣಕಾಸುಗಳನ್ನು ಶತ್ರು ಗಳು ನಿರಾತಂಕವಾಗಿ ದೋಚಿಕೊಂಡು ಹೋಗುವುದಕ್ಕೆ ಏಕೆ ಅವಕಾಶ ಕೊಟ್ಟೆ? ಮತ್ತು ನಿನ್ನ ಆಸ್ತಿಯನ್ನು ಎಷ್ಟು ಜಾಗರೂಕತೆಯಿಂದ ನೋಡಿ

ಕೊಂಡೆಯೋ ಸರ್ಕಾರದ ದುಡ್ಡನ್ನೂ ಹಾಗೇ ಏಕೆ ನೋಡಿಕೊಳ್ಳಲಿಲ್ಲ? ಈ ವಿಚಾರದಲ್ಲಿಯಾದರೂ ನೀನು ಅಪ್ರಾಮಾಣಿಕನೂ ಕೃತಘ್ನನೂ ಆದ ಹಾಗಾಯಿತು" ಎಂದನು. ಹೀಗೆ ಅವನ ತಪ್ಪನ್ನು ನಿಶ್ಚಯಿಸಿ ಅವನ ಚರ್ಮವನ್ನು ಸುಲಿಸಬೇಕೆಂದು ಫೌಜುಕಛೇರಿ ಭಕ್ಷಿಯಾದ ಸೇಟ್ ಅಲ್ಲಾವುದ್ದೀನಗೆ ಆಜ್ಞಾಪಿಸಿ ಅವನ ಸಹಾಯಕ್ಕೆ ಕೆಲವು ಸವಾರರನ್ನೂ ಸಿಪಾಯಿಗಳನ್ನೂ ಕೊಟ್ಟನು. ಭಕ್ಷಿಯೂ ಸಪರಿವಾರನಾಗಿ ವಧಸ್ಥಾನಕ್ಕೆ ಹೋಗಿ ಅಪರಾಧಿಗೆ ಹೇಳಿ ಕಳುಹಿಸಲು ಮಹಮ್ಮದಾಲಿಯು ಅವನನ್ನು ಕರೆದುಕೊಂಡುಬಂದು " ಇವನು ನನ್ನ ರಕ್ಷಣೆಯಲ್ಲಿದ್ದಾನೆ, ನೀವು ಅವನ ತಪ್ಪನ್ನು ಕ್ಷಮಿಸಬೇಕು; ಇಲ್ಲವೇ, ನನ್ನನ್ನು ಮೊದಲು ಕೊಂದು ಆಮೇಲೆ ಈತನನ್ನು ಕೊಲ್ಲಬೇಕು" ಎಂದು ಹೇಳಿದನು.

ಈ ವರ್ತಮಾನವು ಸುಲ್ತಾನನಿಗೆ ತಲುಪಲು, ಅಪರಾಧಿಯನ್ನು ಮಹಮ್ಮದಾಲಿಗೋಸ್ಕರ ಅಂದಿಗೆ ಕ್ಷಮಿಸಿದ್ದನೆಂದೂ ಆದರೆ ಅವನನ್ನು ತನ್ನ ವಶಕ್ಕೆ ಕೊಡಬೇಕೆಂದೂ ಹೇಳಿ ಕಳುಹಿಸಿದನು. ಆಮೇಲೆ ಮಹಮ್ಮದಾಲಿಯನ್ನು ಕರೆಸಿ, ಎಷ್ಟೆಷ್ಟೋ ಹೇಳಿದನು.—ಅವನು ಅಡ್ಡಿ ಬಂದರೆ ಸರ್ಕಾರದ ಕಾರ್ಯವು ಜರುಗುವುದು ಕಷ್ಟವೆಂದೂ ಮಿಕ್ಕವರಾದರೂ ಅವರವರ ಕರ್ತವ್ಯವನ್ನು ನಡೆಸಿಕೊಂಡು ಹೋಗುವ ಹಾಗೆ ಮಾಡುವಂತೆ ಇಂಥ ಒಂದೊಂದು ಉದಾಹರಣೆ ಆವಶ್ಯಕವೆಂದೂ, ಅದರಲ್ಲಿಯೂ ಹೊಸ ಸರ್ಕಾರದಲ್ಲಿ ಬಿಗಿ ತಪ್ಪಬಾರದೆಂದೂ, ಎರಡು ಗಂಟೆಯ ಹೊತ್ತು ಉಪನ್ಯಾಸ ಮಾಡಿದನು. ಆದರೂ ಮಹಮ್ಮದಾಲಿ ಮಾತ್ರ ಮೊದಲಿನ ಹಾಗೇ ಮೊಂಡುತನ ಮಾಡಿಕೊಂಡು, ಸುಲ್ತಾನನ ಮಾತಿಗೆ ಲಕ್ಷ್ಯಮಾಡದೆ ಅವನ ಅಪ್ಪಣೆಯನ್ನೂ ನಿರೀಕ್ಷಿಸದೆ ಹೊರಟು ಹೋದನು.

ಸುಲ್ತಾನನಿಗೆ ಇಂಥ ಅಗೌರವಸೂಚಕವಾದ ನಡತೆಯಿಂದ ಬಹಳ ಅಸಮಾಧಾನವಾದರೂ ಅವನಿಂದ ಹಿಂದೆ ಆಗಿದ್ದ ಉಪಕಾರವನ್ನು ಸ್ಮರಿಸಿಕೊಂಡು ಆ ದಿನ ಸುಮ್ಮನಿದ್ದನು. ಮರುದಿನ ಇದ್ದಕ್ಕಿದ್ದಹಾಗೆ ಅವನ ಕೋಪಾಗ್ನಿಯು ಹತ್ತಿ, ಭಕ್ಷಿಗೆ ಮೊದಲಿನಂತೆ ಅಪ್ಪಣೆಮಾಡಿದನು. ಅವನು ಬಂದಿಯನ್ನು ಕರೆದುಕೊಂಡು ಹೋಗಲು ಮಹಮ್ಮ

ದಾಲಿಯು ಒಂದು ಆನೆಯಮೇಲೆ ಬಂದು ಬಂದಿಯನ್ನು ವಧಸ್ಥಾನ ದಿಂದ ಬಿಡಿಸಿಕೊಂಡು ಹೋಗಿ ಅವನನ್ನು ಆನೆಯಮೇಲೆ ಕೂರಿಸಿ ಕೊಂಡು 'ನನ್ನ ಕಡೆಗೆ ಬರುವುದಕ್ಕೆ ಇಷ್ಟವುಳ್ಳ ಜನರೆಲ್ಲರೂ ಬನ್ನಿ!' ಎಂದು ಕೂಗಿದನು. ಆಗ ಇನ್ನೂರು ಮುನ್ನೂರು ಜನ ರಿಸಾಲದಾರರು ಅವನ ಕಡೆಗೆ ಸೇರಿಕೊಳ್ಳಲು ಎಲ್ಲರೂ ಶ್ರೀರಂಗಪಟ್ಟಣದ ಕಡೆಗೆ ಹೊರ ಟರು. ಕೂಡಲೆ ಮೊದಲಿನಿಂದಲೂ ಮುಹಮ್ಮದಾಲಿಯಮೇಲೆ ಹೊಟ್ಟೆಯುಕಿಚ್ಚಿದ್ದ ಅವನ ಶತ್ರುಗಳು ಸುಲ್ತಾನನ ಹತ್ತಿರಕ್ಕೆ ಹೋಗಿ ಮುಹಮ್ಮದಾಲಿಯು ದಂಗೆಯೆದ್ದು ಕೊಚ್ಚಿನ್‌ಗೆ ಹೋಗುತ್ತಿರುವನೆಂದೂ ಅಲ್ಲಿಂದ ಬೊಂಬಾಯಿಗೆ ಹೋಗುವನೆಂದೂ ಆದ್ದರಿಂದ ಅವನನ್ನು ಜೀವ ಸಹಿತ ಬಿಟ್ಟರೆ ರಾಜ್ಯಕ್ಕೇ ಅಪಾಯ ಬರಬಹುದೆಂದೂ ಹೇಳಿದರು.

ಸುಲ್ತಾನನು ಇದನ್ನು ಕೇಳಿ ಅವನನ್ನು ಹಿಡಿದು ತರುವಂತೆ ಸಿಪಾಯಿಗಳನ್ನು ಅಟ್ಟಿದ್ದಲ್ಲದೆ ತಾನೇ ಕಳವಳಪಡುತ್ತಾ ಸ್ವಂತವಾಗಿ ಅವರ ಜೊತೆಯಲ್ಲಿ ಹೊರಟನು. ಮುಹಮ್ಮದಾಲಿಯು ಗುಂಪು ಸಿಕ್ಕಲು ಕಾಸಿಂಅಲ್ಲಿಗೆ ಹಿಂದೆ ವಿಧಿಸಿದ್ದ ಶಿಕ್ಷೆಯನ್ನೇ ಪುನಃ ವಿಧಿಸಿ ಮುಹಮ್ಮ ದಾಲಿಗೆ ಬಲವಾದ ಬೇಡಿಯನ್ನು ತೊಡಿಸಿ ಶ್ರೀರಂಗಪಟ್ಟಣಕ್ಕೆ ಕಳು ಹಿಸಿದನು. ಅವನ ಜೊತೆಯಲ್ಲಿ ಹೋದ ಸವಾರರಲ್ಲಿ ಕೆಲವರನ್ನು ಕೊಲ್ಲಿಸಿ ಮತ್ತೆ ಕೆಲವರ ಕೈಮೂಗುಗಳನ್ನು ಕತ್ತರಿಸಿಸಿ ಓಡಿಸಿಬಿಟ್ಟನು. ಅವರು ಮುಹಮ್ಮದಾಲಿಯ ಹಿಂದೆ "ಅಯ್ಯೋ! ಹಾಳು ದಂಗೆಕೋರ! ನಮ್ಮ ನಾಶಕ್ಕೆ ಕಾರಣವಾದೆಯಲ್ಲೋ: ನಿನ್ನ ಮೇಲೆ ನಮಗೆ ಇದ್ದ ಅವಿವೇಕ ವಾದ ಪ್ರೀತಿಗೆ ನಮ್ಮ ಮೂಗು ಕೈಗಳನ್ನು ಬಲಿಕೊಡಬೇಕಾಯಿ ತಲ್ಲೋ!" ಎಂದು ಎರಡು ಮೂರು ಮಜಲಿನವರೆಗೂ ಅರಚುತ್ತ ಹೋದರು. ಇವರ ಕೂಗು ಮುಹಮ್ಮದಾಲಿಯ ಕಿವಿಗೆ ಬಿದ್ದ ಕೂಡಲೆ ಅವನು ಬಹಳ ಸಂಕಟಪಟ್ಟು ರಾತ್ರಿಯವರೆಗೂ ಹೇಗೆ ಹೇಗೋ ಜೀವ ವನ್ನು ಬಿಗಿ ಹಿಡಿದುಕೊಂಡಿದ್ದು ರಾತ್ರಿ ತನ್ನ ನಿತ್ಯಕರ್ಮಗಳನ್ನು ಮಾಡಿ ಮುಗಿಸಿದಮೇಲೆ ನಾಲಗೆ ಹಿರಿದುಕೊಂಡು ಪ್ರಾಣಬಿಟ್ಟನು. (ಸುಲ್ತಾ ನನು ವಿಷಕೊಟ್ಟನೆಂದು ಕೆಲವರೂ, ಮುಹಮ್ಮದಾಲಿಯೇ ವಜ್ರವನ್ನು ತೆಯ್ದು ಕುಡಿದು ಪ್ರಾಣ ಕಳೆದುಕೊಂಡನೆಂದು ಕೆಲವರೂ ಹೇಳು

ತ್ತಾರೆ.) ಸುಲ್ತಾನನು ಅವನ ಮನೆಯನ್ನು ಶೋಧನೆ ಮಾಡಿಸಿದನು. ಅಲ್ಲಿದ್ದ ಸಾಮಾನುಗಳಲ್ಲಿ ಬೀಗ ಹಾಕಿದ್ದ ಒಂದು ಸಣ್ಣ ಪೆಟ್ಟಿಗೆಯಿತ್ತು. ಅದನ್ನು ಒಡೆಸಿ ನೋಡಲು ಒಳಗೆ ಇಂಗ್ಲಿಷ್ ಅಧಿಕಾರಿಗಳು ತಮ್ಮನ್ನು ಸೇರಿಕೊಳ್ಳಬೇಕೆಂದೂ ಸೇರಿಕೊಂಡರೆ ಬೇಕಾದ ಜಹಗೀರನ್ನು ಹಾಕಿಸಿಕೊಡುವಂತೆಯೂ ಅವನಿಗೆ ಬರೆದಿದ್ದ ಕಾಗದಗಳು ಸಿಕ್ಕಿದುವು. ಪಾಪ! ಅದನ್ನೆಲ್ಲಾ ತುಚ್ಛವಾಗಿ ಎಣಿಸಿ ಅವರ ಕೀಳುತನವನ್ನು ಖಂಡಿಸಿ ಉತ್ತರವನ್ನು ಬರೆದಿದ್ದರೂ ಈ ಕಾಗದಗಳನ್ನು ಮಾತ್ರ ತನ್ನ ಸರಳನಿಷ್ಕಪಟಭಾವದಿಂದ ಹರಿಯದೆ ಇಟ್ಟಿದ್ದನು. ಹುಳುಕನ್ನೇ ಹುಡುಕುತ್ತಿದ್ದ ಸುಲ್ತಾನನಿಗೆ ದೊಡ್ಡ ದ್ರೋಹವನ್ನು ಹೊರಿಸುವುದಕ್ಕೆ ತಕ್ಕ ಸಾಧನಗಳು ಸಿಕ್ಕಿದುವು. ಆದ್ದರಿಂದ ಮಹಮ್ಮದಾಲಿಯ ಶವವನ್ನು ಪಾಳೆಯದಿಂದ ಆಚೆಗೆ ಎಳೆದುಹಾಕಿಬಿಡಬೇಕೆಂದು ಅಪ್ಪಣೆಮಾಡಿ ಅವನ ಮಕ್ಕಳನ್ನು ತನ್ನ ಗುಲಾಮರನ್ನಾಗಿ ನೇಮಿಸಿಕೊಂಡನು. ಅವನ ಹೆಂಡತಿಯನ್ನು ತನ್ನ ಗುಲಾಮರಲ್ಲಿ ಒಬ್ಬನಿಗೆ ಕೊಡಿಸಿದನು. ಯೋಗ್ಯನೂ ಅಧರ್ಮಭೀರುವೂ ಆದ ಆ ಗುಲಾಮನು ಆಕೆಯನ್ನು ತಾಯಿಯೆಂದು ಕರೆಯುತ್ತಾ ಆಕೆಯಲ್ಲಿ ತಾಯಿಗೆ ತಕ್ಕ ಗೌರವವನ್ನಿಟ್ಟು ಕೊಂಡು ತಾನು ಮಗನಂತೆ ನಡೆದುಕೊಳ್ಳುತ್ತಿದ್ದನು.

ಟಿಪ್ಪುಸುಲ್ತಾನನ ತಾಯಿಯು ಈ ಸಂಗತಿಗಳನ್ನೆಲ್ಲಾ ಕೇಳಿ ಬಹಳ ದುಃಖಪಟ್ಟು ಮಗನ ಮುಂಗೋಪವನ್ನು ದೂಷಿಸಿ ಸೇನಾಪತಿಯ ಹೆಂಡತಿಯನ್ನು ಕರೆಸಿ ತನ್ನ ಹತ್ತಿರ ಇರುವಂತೆ ಏರ್ಪಾಟು ಮಾಡಿದಳು.

ಮಹಮ್ಮದಾಲಿಯು ಬಹಳ ಉದಾರಿಯೆಂದೂ ಬಡವರ ರಕ್ಷಕನೆಂದೂ ಪ್ರಸಿದ್ಧಿಯನ್ನು ಪಡೆದಿದ್ದನು. ತಿಂಗಳುಗಟ್ಟಲೆ ಮತ್ತು ವರ್ಷಗಟ್ಟಲೆ ನಲವತ್ತು ಐವತ್ತು ಜನ ಫಕೀರರು ಅವನೊಡನೆ ಡೇರೆಯಲ್ಲಿ ವಾಸಮಾಡಿಕೊಂಡಿರುತ್ತಿದ್ದರು. ಎಷ್ಟೋವೇಳೆ ಅವನು ಆನೆ ಕುದುರೆ ಪಲ್ಲಕ್ಕಿ ಮುಂತಾದ ಹೈದರ್ ನವಾಬನು ಇನಾಮಾಗಿ ಕೊಟ್ಟ, ಪದಾರ್ಥಗಳನ್ನೆಲ್ಲಾ ಧರ್ಮಾರ್ಥವಾಗಿ ಕೊಟ್ಟುಬಿಡುತ್ತಿದ್ದನು. ಇದನ್ನು ತಿಳಿದಿದ್ದ ನವಾಬನು ಅವುಗಳನ್ನು ಪಡೆದವರಿಂದ ತಾನು ಕೊಂಡು

ಕೊಂಡು ಪುನಃ ಸಂದರ್ಭ ಬಂದಾಗ ಸೇನಾಪತಿಗೆ ಇನಾಮಾಗಿ ಕೊಡುತ್ತಿದ್ದನು. ಫಕೀರರು ಅರಮನೆಯ ಹತ್ತಿರ ಬಂದು ದಾನಧರ್ಮಕ್ಕಾಗಿ ಪೀಡಿಸಿದರೆ ಹೈದರನು "ಆ ಲೌಡೀಕನ ಹತ್ತಿರಕ್ಕೆ ಹೋಗಿ!" ಎಂದು ಹೇಳುವುದು ಸಾಧಾರಣವಾಗಿತ್ತು. ಮಹಮ್ಮದಾಲಿಯೂ ತನಗೆ ನವಾಬನು ತೋರಿಸಿದ ಗೌರವಕ್ಕೂ ವಿಶ್ವಾಸಕ್ಕೂ ಮಿತಿಮೀರಿ ಸಂತೋಷಪಟ್ಟು, ಹಣ ಬಟ್ಟೆ ತಟ್ಟೆ ಪಾತ್ರೆ ಮುಂತಾಗಿ ಏನಿದ್ದರೆ ಅದನ್ನು ಕೊಟ್ಟು ಕಳುಹಿಸಿಬಿಡುತ್ತಿದ್ದನು.

ಅವನ ಮರಣಾನಂತರ ಸುಲ್ತಾನನು ಅವನ ಆಸ್ತಿಯನ್ನೆಲ್ಲಾ ಶೋಧಿಸಿದನು. ಅವನ ಸ್ವಂತ ಕೈಪೆಟ್ಟಿಗೆಯನ್ನು ನೋಡಲು, ಅದರಲ್ಲಿ ಕೆಲವು ಹಳೆಯ ಬಟ್ಟೆಗಳು, ಒಂದು ಫಕೀರನ ಕುಲಾವಿ, ಅವನ ಗುರು ಕೊಟ್ಟಿದ್ದ ಒಂದು ನಿಲುವಂಗಿ ನಲವತ್ತು ತಾಮ್ರದ ಆನೆಯ ದುಡ್ಡುಗಳು—ಇಷ್ಟುಮಾತ್ರ ಸಿಕ್ಕಿದುವು.

ಟಿಪ್ಪುಸುಲ್ತಾನನಾದ ಮೇಲೆ ಮುಮ್ಮಡಿ ಕೃಷ್ಣರಾಜ ಒಡೆಯರು. ಅವರ ಆಳಿಕೆಯ ವಿಚಾರವನ್ನು ಆಗಲೇ ಸ್ವಲ್ಪ ಹೇಳಿದ್ದೇನೆ. ಇದನ್ನು ಕಣ್ಣಾರಕಂಡು ಬಲ್ಲ ಅನೇಕ ಜನ ವೃದ್ಧರು ಈಗಲೂ ಜೀವಂತರಾಗಿದ್ದಾರೆ. ಅವರೊಡನೆ ಆಗಿನ ಕಾಲದ ಪ್ರಸ್ತಾಪವನ್ನೆತ್ತಿದರೆ ಸಾಕು, ಅನಾಯಾಸವಾಗಿ ಎಷ್ಟೋ ಸಂಗತಿಗಳು ತಿಳಿಯುಬರುವುವು. ಇಲ್ಲಿ ಅಂಥ ವಿಷಯಗಳನ್ನು ತೆಗೆದುಕೊಳ್ಳದೆ, ಮೈಸೂರು ಚರಿತ್ರೆಯ ಮೇಲೆ ಈಗ ದೊರೆಯುವ ಗ್ರಂಥಗಳಲ್ಲಿ ಬರುವ ಕೆಲವು ದೊಡ್ಡ ದೊಡ್ಡ ಕಥೆಗಳನ್ನು ಮಾತ್ರ ಇಲ್ಲಿ ಸೂಚಿಸಿದ್ದೇನೆ. ಈ ಸಿದ್ಧವಾದ ಕಥೆಗಳನ್ನು ಬಿಟ್ಟರೂ ಕಾದಂಬರಿಯನ್ನು ಬರೆಯುವುದಕ್ಕೆ ಸಾಮರ್ಥ್ಯವಿರತಕ್ಕವನು ಸುಲಭವಾಗಿ ಬೆಳೆಸಬಹುದಾದ ಅನೇಕ ಸಂಗತಿಗಳು ದೊರೆಯುತ್ತವೆ. ಗಂಗರಾಜ (ವಿಷ್ಣುವರ್ಧನನ ಮಂತ್ರಿ), ಖಂಡೇರಾಯ, ಪೂರ್ಣಯ್ಯ, ಜಗದೇವರಾಯ, ಮಾಗಡಿಯ ಕೆಂಪೇಗೌಡ, ಬಸವಾಪಟ್ಟಣದ ಕೆಂಗೇಹನುಮ, ಇಕ್ಕೇರಿಯ ಶಿವಪ್ಪನಾಯಕ, ಅಂಚೆ ಶ್ಯಾಮಯ್ಯ, ಕೃಷ್ಣರಾಯ (ಟಿಪ್ಪುವಿನ ಕಾಲದ), ಮೀರ್ ಸಾದಕ್, ಮೆದಕೆರೆ ನಾಯಕ, ಮಿರ್ಜ ಆಲಿಖಾನ್, ಮುಂತಾದ ಒಬ್ಬೊಬ್ಬರೂ ಒಂದೊಂದು ಸೊಗಸಾದ

ಕಥೆಗೆ ನಾಯಕರಾಗಬಹುದು. ಅವರು ಮಾಡುವ ಒಂದೊಂದು ಕೆಲಸವೇ ಅದಕ್ಕೆ ವಸ್ತುವಾಗಬಹುದು.

ಇವೆಲ್ಲಕ್ಕಿಂತಲೂ ಮುಂಚೆ ನಡೆದ ಮತ್ತೊಂದು ಕಥೆಯಿದೆ. ಕಾವ್ಯ ದೃಷ್ಟಿಯಿಂದ ಅದು ಬಹಳ ಉತ್ತಮವಾಗಿರುವುದರಿಂದ ಅದನ್ನು ಕೊನೆಗೆ ಇಟ್ಟುಕೊಂಡಿದ್ದೇನೆ. ಇದು ಗಂಗರಾಜನ ಕಥೆ. ಅದನ್ನು ಬುಕನನ್ ಸಾಹೇಬನ ಗ್ರಂಥದಿಂದ ತರ್ಜಮೆ ಮಾಡಿ ಇಲ್ಲಿ ಬರೆದಿದ್ದೇನೆ :—

" ಸುಮಾರು ಆರುನೂರ ವರ್ಷಗಳ ಕೆಳಗೆ ಆನೆಗೊಂದಿ ವಂಶದವನಾದ ಗಂಗರಾಜನು ವಿಜಯನಗರದ ರಾಜನಿಂದ ಆ (ಶಿವಸಮುದ್ರ) ಪ್ರಾಂತವನ್ನು ಆಳುವುದಕ್ಕಾಗಿ ಕಳುಹಿಸಲ್ಪಟ್ಟನು ; ಅದರ ಹತ್ತಿರವಿದ್ದ ಸ್ಥಳಗಳನ್ನೆಲ್ಲಾ ಪರೀಕ್ಷಿಸಿ ನೋಡಲು, ವಾಸಕ್ಕೆ ಯೋಗ್ಯವಾದ ನಗರವನ್ನು ಸ್ಥಾಪಿಸುವುದಕ್ಕೆ ಶಿವಸಮುದ್ರ ದ್ವೀಪವೇ ಉತ್ತಮವಾದ್ದೆಂದು ಕಂಡುಬಂತು. ಆಗ ಅಲ್ಲಿ ಎರಡು ಮೂರು ಸಣ್ಣ ಹಳ್ಳಿಗಳಿದ್ದುವು. ಅಲ್ಲಿನ ಜನರು ಆ ರಾಜಪುತ್ರನಿಗೆ ತಾವು ಮುನೀಶ್ವರನ ಅಪ್ಪಣೆಯಿಂದ ಅಲ್ಲಿ ವಾಸಮಾಡುತ್ತಿದ್ದರೆಂದೂ ಅವನ ಅಪ್ಪಣೆಯಿಲ್ಲದೆ ಪಟ್ಟಣವನ್ನು ಕಟ್ಟಿದರೆ ಅದು ಹಾಳಾಗುವುದು ಖಂಡಿತವೆಂದೂ ಹೇಳಿದರು. ಅದರಂತೆ ಆತನು ಮುನೀಶ್ವರನ ಅನುಗ್ರಹವನ್ನು ಪಡೆಯುವ ಉದ್ದೇಶದಿಂದ ಬಲಿಪೂಜೆ ನೈವೇದ್ಯಗಳನ್ನು ಮಾಡಿ ಪ್ರಾರ್ಥಿಸುತ್ತಿರಲು, ಮುನೀಶ್ವರನು ಕಾಣಿಸಿಕೊಂಡು ಶಂಖದ ಸದ್ದನ್ನು ಕೇಳಿದಕೂಡಲೆ ಹೊಸಪಟ್ಟಣವನ್ನು ಸ್ಥಾಪನೆ ಮಾಡಬಹುದೆಂದು ಅಪ್ಪಣೆಯನ್ನಿತ್ತನು. ನಗರಸ್ಥಾಪನೆಗೆ ಎಲ್ಲಾ ಸಲಕರಣೆಗಳೂ ಸಿದ್ಧವಾಗಿರಲು ಒಂದು ದಿನ ನತದೃಷ್ಟನಾದ ದಾಸಯ್ಯನೊಬ್ಬನು ಆ ಕಡೆ ಹೋಗುತ್ತಾ ತಮ್ಮ ಪದ್ಧತಿಯಂತೆ ಶಂಖವನ್ನು ಊದಿದನು. ಇದೇ ಮುನೀಶ್ವರನು ಹೇಳಿದ ಶಂಖದ ಸದ್ದೆಂದು ಎಲ್ಲರೂ ಭಾವಿಸಿ ನಗರಸ್ಥಾಪನೆಯನ್ನು ಮಾಡಿದರು. ಸುಮಾರು ಅರ್ಧ ಗಂಟೆಯಮೇಲೆ ಮುನೀಶ್ವರನು ಶಂಖವನ್ನೂದಿದನು. ಅದನ್ನು ಕೇಳಿ ರಾಜನು ಗಾಬರಿಯಾಗಿ ಮುನೀಶ್ವರನನ್ನು ಪ್ರಾರ್ಥಿಸಲು ಅವನು ಪ್ರತ್ಯಕ್ಷನಾಗಿ ಆ ನಗರವು ಶುಭಮುಹೂರ್ತದಲ್ಲಿ ಪ್ರತಿಷ್ಠಿತವಾಗದೆ ಇದ್ದ

ದ್ದರಿಂದ ಅದು ಬಹುಕಾಲ ನಿಲ್ಲಲಾರದೆಂದೂ ಆದರೂ ಮೂರು ತಲೆಯುವರೆಗೂ ನಡೆದು ಬರುವುದೆಂದೂ ವರ ಕೊಟ್ಟನು. ಗಂಗರಾಜನು ಅದರಂತೆ ಆ ನಗರದಲ್ಲಿ ಸುಖದಿಂದಾಳುತ್ತ ಕಾಲಗತಿಯನ್ನೈದಲು ಅವನ ಮಗ ನಂಜರಾಜನು ಪಟ್ಟಕ್ಕೆ ಬಂದನು. ಇವನು ತಿರಸ್ಕರಣೀ ವಿದ್ಯೆಯನ್ನರಿತ ಒಬ್ಬ ಹೊಲೆಯ ಸೇವಕನೊಡನೆ ಊಟ ಮಾಡಿಬಿಟ್ಟನು. ಬ್ರಾಹ್ಮಣರನ್ನು ಇದಕ್ಕೇನು ಮಾಡಬೇಕೆಂದು ಕೇಳಲು ಅವರು ದೇಹತ್ಯಾಗವೇ ಇದಕ್ಕೆ ತಕ್ಕ ಪ್ರಾಯಶ್ಚಿತ್ತವೆಂದು ಹೇಳಿದರು. ಅದಕ್ಕೆ ಅನುಸಾರವಾಗಿ ಅವನು ತನ್ನ ಮಗನ ವಶಕ್ಕೆ ರಾಜ್ಯವನ್ನು ಕೊಟ್ಟು ತನ್ನ ಹೆಂಡತಿಯನ್ನು ಜೊತೆಯಲ್ಲಿ ಕರೆದುಕೊಂಡು ಕುದುರೆಯನ್ನು ಹತ್ತಿಕೊಂಡು ಹೋಗಿ ಆ ಕುದುರೆಗೆ ಕಣ್ಣುಕಟ್ಟಿ ಗಂಗನಚುಕ್ಕಿಯೊಳಕ್ಕೆ ಹಾರಿಸಿ ಬಿದ್ದು ದೇಹತ್ಯಾಗ ಮಾಡಿದನು.

ಅವನ ಮಗ ಗಂಗರಾಜನು ನಗರವನ್ನು ವಿಸ್ತರಿಸಿ ಅಟ್ಟಹಾಸದಿಂದ ಆಳುತ್ತಿದ್ದನು. ಅವನಿಗೆ ಇಬ್ಬರು ಹೆಣ್ಣುಮಕ್ಕಳು; ಅವರಲ್ಲಿ ಒಬ್ಬಳನ್ನು ಸತ್ಯಾಗಾಲದ ಹತ್ತಿರ ಈಗ ಪಾಳಾಗಿರುವ ಕಿಲಿಮಲ್ಲಿಯ ರಾಜನಿಗೂ ಮತ್ತೊಬ್ಬಳನ್ನು ಮದ್ದೂರಿನ ಹತ್ತಿರವಿರುವ ನಗರಕೆರೆಯ ಬುಕ್ಕರಾಜನಿಗೂ ಮದುವೆ ಮಾಡಿಕೊಟ್ಟಿದ್ದನು. ಇವರು ತಮ್ಮ ತಂದೆಯ ಐಶ್ವರ್ಯ ಸಾಮರ್ಥ್ಯಗಳು ತಮ್ಮ ಗಂಡಂದಿರಿಗಿಲ್ಲವೆಂದು ಅವರನ್ನು ಪದೇ ಪದೇ ಮೂದಲಿಸುತ್ತ ಇದ್ದರು. ಆದ್ದರಿಂದ ಅವರು ಹೆಂಡಿರ ಕಾಟವನ್ನು ತಡೆಯಲಾರದೆ ತಾವು ಗಂಗರಾಜನಿಗೆ ಯಾವುದರಲ್ಲಿಯೂ ಕಡಮೆಯಿಲ್ಲವೆಂದು ತೋರಿಸುವುದಕ್ಕಾಗಿ ದೊಡ್ಡ ಸೈನ್ಯವನ್ನು ಸೇರಿಸಿ ಶಿವಸಮುದ್ರಕ್ಕೆ ಮುತ್ತಿಗೆ ಹಾಕಿದರು. ಈ ಮುತ್ತಿಗೆಯು ಹನ್ನೆರಡು ವರ್ಷಗಳ ಕಾಲ ನಡೆಯಿತು. ಆದರೂ ಶಿವಸಮುದ್ರದ ಕೋಟೆಯೊಳಗೆ ಹೋಗುವುದು ಸಾಧ್ಯವಾಗಲಿಲ್ಲ. ಆಗ ಇವರು ಗಂಗರಾಜನ ದಳವಾಯಿಯೊಡನೆ ಒಳಸಂಚುಮಾಡಿ ಅವನನ್ನು ಸ್ವಾಮಿದ್ರೋಹಕ್ಕೆ ಪ್ರೇರೇಪಿಸಿದರು. ಈ ದ್ರೋಹಿಯು ಕೋಟೆಗೆ ಹೋಗುತ್ತಿದ್ದ ಒಂದೇ ಒಂದು ಸೇತುವೆಯ ಮೇಲಿದ್ದ ಕಾವಲುಗಾರರನ್ನು ತೆಗೆಸಿಬಿಟ್ಟನು. ಆದ್ದರಿಂದ ಇವರು (ಶತ್ರುಗಳು) ಒಂದು ದಿನ ಊರೊಳಗೆ ಹಠಾತ್ತಾಗಿ

ನುಗ್ಗಿಬಿಟ್ಟರು. ಆಗ, ದಳವಾಯಿಯು ರಾಜನೊಡನೆ ಚತುರಂಗ ವನ್ನು ಆಡುತ್ತ ಅವನ ಮನಸ್ಸನ್ನು ಆಟದಲ್ಲಿಯೇ ನೆಟ್ಟಿರುವಂತೆ ನೋಡಿಕೊಳ್ಳುತ್ತಿದ್ದನು. ಕೊನೆಗೆ ಶಿಪಾಯಿಗಳ ಅವಾಂತರ ಕಿವಿಗೆ ಬೀಳಲು ರಾಜನು ಆಟವನ್ನು ಬಿಟ್ಟಿದ್ದನು. ಅವನು ಸೆರೆಸಿಕ್ಕ ಬೇಕೆಂದು ಏರ್ಪಾಡು ಮಾಡಿದ್ದ ಮಂತ್ರಿಯು ಅದೆಲ್ಲಾ ಮಕ್ಕಳ ಆಟ ಪಾಟದ ಗದ್ದಲವಿರಬಹುದೆಂದು ಸೂಚಿಸಿ ಅಲ್ಲಿಯೇ ಅವನನ್ನು ನಿಲ್ಲಿಸಿ ಕೊಳ್ಳುವುದಕ್ಕೆ ಪ್ರಯತ್ನಪಟ್ಟನು. ಆದರೆ ರಾಜನು ಕತ್ತಿಯನ್ನು ಹಿರಿದು ನುಗ್ಗಿ ತನ್ನ ಹೆಂಗಸರು ಮಕ್ಕಳನ್ನೆಲ್ಲಾ ಕೊಂದು ಶತ್ರುಗಳ ಸೈನ್ಯಕ್ಕೆ ನುಗ್ಗಿ ಕಾದಿ ವೀರಸ್ವರ್ಗವನ್ನು ಪಡೆದನು.

ಇದಾದ ಮೇಲೆ ಅಳಿಯಂದಿರು ತಮ್ಮ ದುಷ್ಕೃತ್ಯಕ್ಕೆ ಹೇಸಿ ಗಂಗನಚುಕ್ಕಿಯಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಂಡರು. ಅವರ ಹೆಂಡಿರು ಇಷ್ಟೆಲ್ಲಾ ಅನರ್ಥಕ್ಕೆ ತಾವೇ ಕಾರಣರೆಂಬುದನ್ನು ಅರಿತು ಸಂಕಟಪಟ್ಟು ತಮ್ಮ ಗಂಡಂದಿರನ್ನು ಹಿಂಬಾಲಿಸಿದರು. ಅನಂತರ ನೆರೆಯ ರಾಜ್ಯಗಳಲ್ಲಿದ್ದ ಚನ್ನಪಟ್ಟಣದ ಜಗದೇವರಾಯನೂ ತಲಕಾಡಿನ ಶ್ರೀರಂಗರಾಜನೂ ಬಂದು ಅಲ್ಲಿಯ ಐಶ್ವರ್ಯವನ್ನು ತಮ್ಮ ರಾಜ್ಯಕ್ಕೆ ಗುಡಿಸಿಕೊಂಡುಹೋದರು. ಅಲ್ಲಿಂದ ಈಚೆಗೆ ಮುನೀ ಶ್ವರನು ಒಬ್ಬರ ಆತಂಕವೂ ಇಲ್ಲದೆ ಆ ದ್ವೀಪದಲ್ಲಿ ವಾಸಮಾಡಿಕೊಂಡಿ ದ್ದಾನೆ."

ಈ ಕಥೆಯು ರೈಸ್‌ಸಾಹೇಬರ ಮೈಸೂರು ಗೆಜೆಟಿಯರ್‌ನಲ್ಲಿಯೂ ಮ|| ಎಂ. ಶಾಮರಾಯರ ಮೈಸೂರು ಚರಿತ್ರಸಾರದಲ್ಲಿಯೂ ಕಂಡು ಬರುತ್ತದೆ. ಮೊದಲು ನಾನು ಈ ಕಥೆಯನ್ನು ಓದಿದ್ದು ಈ ಕನ್ನಡ ಪುಸ್ತಕದಲ್ಲಿಯೇ; ಆದರೆ ಅದರಲ್ಲಿ ಇದು ಅಷ್ಟು ವಿಸ್ತಾರವಾಗಿಲ್ಲ. ಅಲ್ಲಿಂದ ಮುಂದಕ್ಕೆ, ಇಂಥ ಕಥೆಗಳು ಇನ್ನೂ ಅನೇಕವಾಗಿ ಸಿಕ್ಕಬಹು ದೆಂದೂ, ಇಂಥ ವಸ್ತುಗಳು ಸಿಕ್ಕಿದರೆ ಷೇಕ್ಸ್‌ಪಿಯರಿನ ನಾಟಕಗಳಿಗೂ ಸರ್ ವಾಲ್ಟರ್ ಸ್ಕಾಟ್‌ನ ಕಾದಂಬರಿಗಳಿಗೂ ಯಾವ ಅಂಶದಲ್ಲಿಯೂ ಕಡಮೆಯಲ್ಲದ ಗ್ರಂಥಗಳು ಆಗಬಹುದೆಂದೂ ಮನಸ್ಸಿಗೆ ತೋರಿ ಮೈಸೂರು ಚರಿತ್ರೆಯ ಮೇಲಣ ಗ್ರಂಥಗಳನ್ನೆಲ್ಲ ಓದುತ್ತಬಂದೆನು. ಈ ಉಪನ್ಯಾಸವು ಆ ಓದಿನ ಫಲವಾಗಿದೆ.

ಇದುವರೆಗೆ ಮೈಸೂರು ಚರಿತ್ರೆಯ ಮೇಲೆ ಬರೆಯಬಹುದಾದ ಕಾದಂಬರಿಗಳಿಗೆ ಇರತಕ್ಕ ಸಾಮಗ್ರಿಗಳನ್ನು ಸೂಚಿಸಿದ್ದಾಯಿತು. ಇಷ್ಟರಿಂದಲೇ ಕಾದಂಬರಿಗಳಾಗುವುದಿಲ್ಲ. ಇವೆಲ್ಲಾ ಸುಣ್ಣ ಮಣ್ಣು ಕಲ್ಲುಗಳ ಹಾಗೆ; ಇವುಗಳಿಂದ ದಿವ್ಯಭವನವಾಗಬೇಕಾದರೆ ಕುಶಲನಾದ ಕಾರೇಗಾರನಾಗಬೇಕು. ಇಲ್ಲದಿದ್ದರೆ ಅವು ಸುಣ್ಣ ಮಣ್ಣು ಕಲ್ಲುಗಳೇ. ಇಂಥವರು ಕನ್ನಡ ದೇಶದ ಭಾಗ್ಯೋದಯದಿಂದ ಹುಟ್ಟಬೇಕು. ಅಂಥವರಿಗಾಗಿ ಯಾವ ನಿಯಮಗಳನ್ನೂ ವಿಧಿಸಕೆಲಸವಿಲ್ಲ. ಅಂಥವರು ಹುಟ್ಟುವವರೆಗೆ "ಚಾಪಲಾಯ ಪ್ರಚೋದಿತ" ರಾಗಿ ಮೈಸೂರು ಚರಿತ್ರೆಯ ಮೇಲೆ ಕಥೆಗಳನ್ನು ಬರೆಯುವುದಕ್ಕೆ ಹೊರಡುವವರು ಮುಂದೆ ಹೇಳುವ ಕೆಲವು ಸಲಹೆಗಳನ್ನು ಗಮನಿಸಬಹುದು :—

(೧) ಮೊದಲು ಒಳ್ಳೆಯ ಸಾಹಿತ್ಯವನ್ನು, ಅದರಲ್ಲಿಯೂ ಪ್ರಸಿದ್ಧವಾಗಿರುವ ಐತಿಹಾಸಿಕ ಕಾದಂಬರಿಗಳನ್ನು, ಸರಿಯಾಗಿ ವ್ಯಾಸಂಗ ಮಾಡಿ ಅವುಗಳ ರಮಣೀಯತೆಯ ಗುಟ್ಟನ್ನು ಗ್ರಹಿಸಬೇಕು. ಸತ್ಸಂಗದಿಂದಲೂ ಸಜ್ಜನರ ಉದಾಹರಣೆಯಿಂದಲೂ ಧರ್ಮವು ತಿಳಿಯುವಂತೆ ಸ್ಮೃತಿ ಸೂತ್ರಗಳಿಂದೆಂದಿಗೂ ತಿಳಿಯುವುದಿಲ್ಲ.

(೨) ಮೈಸೂರಿನ ಚರಿತ್ರೆಯ ಮೇಲೆ ದೊರಕುವ ಗ್ರಂಥಗಳನ್ನೆಲ್ಲಾ ಚೆನ್ನಾಗಿ ವ್ಯಾಸಂಗ ಮಾಡಬೇಕು; ಒಂದರಲ್ಲಿಲ್ಲದ ವಿಷಯವು ಮತ್ತೊಂದರಲ್ಲಿ ಸಿಕ್ಕುವುದು.

(೩) ಕೆಲವು ಸಣ್ಣ ಸಣ್ಣ ಸಾಮಾಜಿಕ ಧಾರ್ಮಿಕ ಮುಂತಾದ ಸಂಗತಿಗಳು ಕಥೆಯನ್ನು ಪುಷ್ಟೀಕರಿಸಿ ಅದಕ್ಕೆ ನೈಸರ್ಗಿಕ ಗುಣವನ್ನು ಕೊಡುವುದಕ್ಕೆ ಸಹಕಾರಿಯಾಗುತ್ತವೆ. ಇಂಥವುಗಳನ್ನು ಸಂಗ್ರಹಿಸಿ ಸಮಯೋಚಿತವಾಗಿ ಉಪಯೋಗಿಸಬೇಕು.

(೪) ಕೈಲಾದಮಟ್ಟಿಗೆ, ತಾವು ಬರೆಯತಕ್ಕ ಗ್ರಂಥಗಳಲ್ಲಿ ಬರತಕ್ಕ ಸ್ಥಳಗಳನ್ನು ನೋಡಿಕೊಂಡು ಬರಬೇಕು. ಅವು ಹಿಂದಿನ ಕಥೆಯನ್ನು ಕಣ್ಣಿಗೆ ಕಟ್ಟುವುವಲ್ಲದೆ, ಅನೇಕ ಭಾವವಿಶೇಷಗಳು ಹೊಸ ಹೊಸದಾಗಿ ಉದ್ಭವಿಸುವಂತೆ ಮಾಡುವುವು.

(೫) ಕರ್ಣಾಟಕ ದೇಶದ ಪ್ರಸಿದ್ಧ ಸ್ಥಳಗಳಲ್ಲಿಯಾದರೂ

ಸಂಚಾರವಮಾಡಿ ಜನಜೀವನವನ್ನೂ ದೇಶಸ್ಥಿತಿಯನ್ನೂ ಸ್ವಂತ ವಾಗಿ ನೋಡಿ ಅನುಭವಕ್ಕೆ ತಂದುಕೊಳ್ಳಬೇಕು. ಇಷ್ಟು ಹೊರತು "ಕಾದಂಬರಿಯಾಗಬೇಕಾದರೆ ಹೀಗೆ ಬರೆಯಬೇಕು ; ಹಾಗೆ ಬರೆಯ ಬೇಕು" ಎಂದು ವಿಧಿಸುತ್ತಾ ಹೋದರೆ ಅದರಿಂದ ಹೆಚ್ಚು ಉಪಯೋಗ ವಾಗಲಾರದು. ಅದರಿಂದ ಒಂದು ವಿಧದಲ್ಲಿ ಕವಿಗಳಿಗೆ ಮಾರ್ಗ ತೋರುವುದಕ್ಕೆ ಬದಲು ಬಂಧನಗಳೇ ಕಲ್ಪಿತವಾದಂತಾಗು ತ್ತದೆ. ಪ್ರತಿಭಾಶಾಲಿಗಳೂ ರಸಿಕರೂ ಆದ ಕವಿ ಪುಂಗವರು ಸೂತ್ರ ನಿಯಮಗಳನ್ನು ಲಕ್ಷ್ಯವೇ ಮಾಡರು. "ಸ್ವತಂತ್ರರಾದ ಗ್ರಂಥ ಕರ್ತರಿಗೆ ಮೇಲುಪಂಕ್ತಿಯನ್ನು ಹಾಕುವ ಧೈರ್ಯ ಯಾರಿಗಿದೆ? ಅದರಲ್ಲೂ ಮಹಾಕವಿಗಳಿಗೆ ಬುದ್ಧಿ ಹೇಳುವವರಾರು?" ಅವರು ನಮ್ಮ ನಿಯಮಗಳನ್ನು ಕೇಳಲಿ, ಕೇಳದಿರಲಿ, ಅವರ ಕೈಗೆ ಸಿಕ್ಕಿದ ಕಸವೂ ರಸವಾಗುವುದು. ಅಂಥವರ ಪ್ರತಿಭೆಗೆ ಗೋಚರವಾದ ಕೂಡಲೆ, ನಿರ್ಜೀವವಾದ ಅಸ್ಥಿಪಂಜರದಂತಿರುವ ತುಂಡುತುಂಡು ಐತಿಹಾಸಿಕ ವೃತ್ತಾಂತಗಳು ಪುಷ್ಟವಾದ ದೇಹವನ್ನು ಪಡೆದು ಜೀವಕಳೆಯಿಂದ ತುಂಬಿ ದೇದೀಪ್ಯಮಾನವಾಗಿ ಬೆಳಗುವುವು. ಆದರೆ ಅದರಲ್ಲಿ ಚರಿತ್ರ ಶಾಸ್ತ್ರ ಜ್ಞರು ಮೆಚ್ಚುವ ಶುಷ್ಕತತ್ವವು ಇರುವುದಿಲ್ಲ. ನಿಜ ; ಇಂಥ ನಿರ್ಜೀವ ವಾದ ಚರಿತ್ರೆಗಳು ನಿರ್ಜೀವರಾದ ಪಂಡಿತರಿಗೆ ಆನಂದದಾಯಕವಾಗು ವುವೇ ಹೊರತು ಸಂಸಾರ ಸುಖವನ್ನನುಭವಿಸುತ್ತಿರುವ ಜನಸಾಮಾನ್ಯ ಕ್ಕಲ್ಲ. ವಿನ್‌ಸೆಂಟ್‌ಸ್ಮಿತ್ ಸಾಹೇಬರು ಬರೆದ ಹಿಂದೂ ದೇಶದ ಚರಿತ್ರೆ ಯನ್ನು ಓದುವವರು ಯಾರು? ಕಣ್ಣಿಗೆ ಕನ್ನಡಕವನ್ನು ಕಟ್ಟಿಕೊಂಡು ಪ್ರತಿಷ್ಠೆಯನ್ನು ಸಂಪಾದಿಸುವುದಕ್ಕೆ "ರಿಸರ್ಚ್" (ಸಂಶೋಧನ ಕಾರ್ಯವ)ನ್ನೂ ದೊಡ್ಡ ತರಗತಿಗಳಿಗೆ ಪಾಠ ಹೇಳುವುದಕ್ಕೆ ಟಿಪ್ಪ ಣಿಯನ್ನೂ ಮಾಡುವ ಚರಿತ್ರ ವಿದ್ಯಾವಿಶಾರದರು; ಜನಸಾಮಾನ್ಯರಲ್ಲ. ಇವರಿಗೆ ರುಚಿಸುವ ಹಿಂದೂ ದೇಶದ ಚರಿತ್ರೆಯು ರಾಮಾಯಣ ಭಾರತಗಳಲ್ಲಿದೆ. ಇವರು ವಿನ್‌ಸೆಂಟ್‌ಸ್ಮಿತ್ ಸಾಹೇಬರಿಗೆ ಗೌರವ ಕೊಡರು. ಆತನು ಬರೆದ ಚರಿತ್ರೆಯನ್ನೂ ಟಿಪ್ಪಣಿಗಳನ್ನೂ ಓದರು. ಆದರೆ ರಾಮಾಯಣ ಭಾರತಗಳನ್ನು ಮಾತ್ರ ಓದಿ, ಅತ್ತುಕರೆದು ನಕ್ಕು

ನಲಿದು ಅಶ್ರುಗಳನ್ನು ಸೂಸಿ ಆ ಗ್ರಂಥಗಳನ್ನು ಪೂಜಿಸಿ ಶ್ರೀರಾಮನಿಗೆ ಪಟ್ಟಾಭಿಷೇಕಗಳ ಮೇಲೆ ಪಟ್ಟಾಭಿಷೇಕಗಳನ್ನು ಮಾಡಿಬಿಡುವರು; ತಮಗೇ ಪಟ್ಟಾಭಿಷೇಕವಾದಷ್ಟು ಉತ್ಸಾಹದಿಂದ ಗಂಧ ಪುಷ್ಪ ವಸ್ತ್ರ ಭಕ್ಷ್ಯಭೋಜ್ಯಾದಿಗಳಲ್ಲಿ ನಿರ್ದಾಕ್ಷಿಣ್ಯವಾಗಿಯೂ ನಿಸ್ಸಂಕೋಚವಾಗಿಯೂ ಸುಖಪಟ್ಟುಬಿಡುವರು.

ಕನ್ನಡಿಗರು ಹೀಗೆ ಮೈಸೂರು ದೇಶದ "ಚರಿತ್ರೆ" ಯನ್ನು ಅಸಡ್ಡೆಮಾಡಿಯಾದರೂ ಅದರ ಮೇಲಣ ಕಥೆಗಳನ್ನೂ ಕಾದಂಬರಿಗಳನ್ನೂ ಓದಬೇಕೆನ್ನುವ ಹಾಗಾಗುವುದೇ? ಆ ಕಾಲವು ಬರುವುದು ಯಾವಾಗ?

೧೯೨೦.

---

# ಅನುಬಂಧ

## ಈ ಉಪನ್ಯಾಸವನ್ನು ಬರೆಯುವುದಕ್ಕಾಗಿ ನೋಡಿದ ಮೈಸೂರು ಚರಿತ್ರೆಯ ಮೇಲಣ ಗ್ರಂಥಗಳು


1. The History of the reign of Tipu Sultan being a Continuation of the Neshani Hydari written by Mir Hussein Alikhan Kirmani (1802 A.D.) Translated from an original Persian Manuscript . . . . . by Col. W. Miles (1864)

*2. The History of Hyder Shah (alias Hyder Ali Bahadur)·and an abridged account of the life of his son Tipu Sultan (First edition 1784) by M.M.D.L.T.

3. An account of the Campaign in Mysore (1799) by Sir Alexander Allan.

4. Buchanan's Travels (1807, 1870)

5. Stewarts' Descriptive Catalogue of the oriental library of the Late Tippu Sultan of Mysore (to which are prefixed memoirs of Hyder Ali Khan and his son Tipu Sultan.)

6. Select letters of Tipu Sultan, arranged and translated by William Kirkpatrick (1811)

7. The life of Hyder Ali by Francis Robson (1786).

8. Hyder Ali and Tippu Sultan by L. B. Bowring (Rulers of India Series).

9. Memoirs of Tippu Sultan—by an officer in the East India Service (1819).


---

* ೩೮ ಪುಸ್ತಕಗಳನ್ನು ಓದಿ ಅವುಗಳ ಆಧಾರದ ಮೇಲೆ ಈ ಗ್ರಂಥವನ್ನು ರಚಿಸಿದುದಾಗಿ ಈ ಗ್ರಂಥಕರ್ತರು ತಿಳಿಸುತ್ತಾರೆ.

10. A Review of the Origin Progress and Result of the decisive war with the late Tippu Sultan in Mysore—by James Salmond (London 1800).

11. A Review of the origin and conduct of the war with Tippu Sultan—by Alexander Beatson.

12. Narrative of the Campaign in India terminating with war with Tippu Sultan in 1792—by Major Dirom.

13. Wilks's History of Mysore. 2 Vols (1810).

14. Mysore Gazetteer.

15. ಚಾಮರಾಜೇಂದ್ರ ಒಡೆಯರವರ ವಂಶರತ್ನಾಕರ.

16. ಮ॥ರಾ॥ ಶಾಮರಾಯರ ಮೈಸೂರು ಚರಿತ್ರಸಾರ.*

17. ಹೈದರ್ ನಾಮ.

ಇತ್ಯಾದಿ.

---

* ಮ॥ ಶಾಮರಾಯರು ಈಚೆಗೆ (1936) Modern Mysore ಎಂಬ ಎರಡು ಸಂಪುಟಗಳ ಇಂಗ್ಲಿಷ್ ಗ್ರಂಥವನ್ನು ಬರೆದು ಪ್ರಕಟಿಸಿದರು.

# ಅಲಂಕಾರ ಶಾಸ್ತ್ರದ ಚರಿತ್ರೆ

## ಪೀಠಿಕೆ

ಸಂಸ್ಕೃತ ಶಾಸ್ತ್ರಗಳ ಈಗಿನ ಸ್ಥಿತಿಯು ಒಣಗಿದ ಹಣ್ಣುಗಳ ಸ್ಥಿತಿಯಂತಿದೆ. ಅವುಗಳಲ್ಲಿ ರುಚಿಯಿದ್ದರೂ ರಸವಿದ್ದರೂ ಹಸಿಯಿಲ್ಲ; ಆ ಹಣ್ಣುಗಳು ದಿನದಿನಕ್ಕೆ ವಿಚಿತ್ರ ಬಣ್ಣಗಳನ್ನು ಧರಿಸಿ ಬೆಳೆದು ಪರಿಪಾಕಕ್ಕೆ ಬರುವ ಹಾಗಿಲ್ಲ; ಈಗ ಹೇಗೆ ಇವೆಯೋ ಮುಂದೆಯೂ ಇದೇ ರೂಪದಲ್ಲಿಯೇ ಇರಬೇಕು; ಇಲ್ಲವೇ ನಷ್ಟವಾಗಿ ಹೋಗಬೇಕು. ಬೇಕಾದರೆ ನಾವು ಅವುಗಳ ಸಿಪ್ಪೆಯನ್ನು ಸುಲಿದು ರಸವನ್ನು ಸ್ವೀಕರಿಸಬಹುದು; ಒಳಗಿನ ತಿರುಳನ್ನು ತೆಗೆದು ಅಲಂಕಾರವಾಗಿಡಬಹುದು; ಕುಸುರಿಗಳನ್ನೂ ಕಾಳನ್ನೂ ಎಣಿಸಬಹುದು; ಸಾಲಾಗಿ ಸಲಕ್ಷಣವಾಗಿ ಜೋಡಿಸಿ ಇಡಬಹುದು ಅಷ್ಟೇ. ಈ ಸ್ಥಿತಿಯು ಇಂದಿನದಲ್ಲ; ಈಗ ಕೆಲವು ಶತಮಾನಗಳಿಂದ ಬರುತ್ತಿದೆ. ಶಂಕರಾಚಾರ್ಯರೇ ಮುಂತಾದವರು ಹೊಸ ಶಾಸ್ತ್ರಗಳಿಗೂ ದರ್ಶನಗಳಿಗೂ ಪ್ರವರ್ತಕರಾಗದಿದ್ದರೂ, ಅವರು ಬರೆದಿರುವ ಭಾಷ್ಯ ಮುಂತಾದವುಗಳ ಉದ್ದಾಮ ಸರಣಿಯೂ ಅವರ ಅಪಾರ ಬುದ್ಧಿಶಕ್ತಿಯಿಂದ ಮಾಡಿರುವ ಅರ್ಥಗಳೂ ಅವರಿಗೆ ಮೂಲ ಗ್ರಂಥ ಕರ್ತೃಗಳಿಗೆ ಸಲ್ಲುವ ಗೌರವವನ್ನು ತರುವುವಾಗಿವೆ; ಈಚಿಗೆ ಅಂಥವರೂ ಹುಟ್ಟುವುದು ಕಡಮೆಯಾಗಿ ಸಂಸ್ಕೃತ ವಾಙ್ಮಯಕ್ಕೆ ಘೋರ ಗ್ರೀಷ್ಮವು ಬಂದು ತಗಲಿ ಅದರ ಕಲ್ಪತರುಗಳೆಲ್ಲ ಒಣಗಿ ಹೋಗುತ್ತಾ ಬಂದುವು. ಹೊಸ ಹೊಸದಾಗಿ ಬಿಡುತ್ತಿದ್ದ ಚಿಗುರು ಹೂಗಳು ಹೋದುವು. ಕಾಯಿ ಹೀಚುಗಳು ಒಣಗಿ ಬಿದ್ದುವು. ಪಕ್ವವಾಗಿದ್ದರೂ ದೃಢವಾಗಿ ಅಂಟಿಕೊಂಡಿದ್ದ ಕೆಲವು ಹಣ್ಣುಗಳು ಮಾತ್ರ ಅಂತಸ್ಸಾರ ಬಲದಿಂದ ಕೊಳೆಯದೇ ನಿಂತುವು. ಅವು ಒಣಗಿದರೂ ಅವುಗಳ ಸಾರವು ಮತ್ತಷ್ಟು ಸಾರತರವಾಯಿತು. ಅಲ್ಲಿಂದೀಚೆಗೆ ನಾವು ಮಾಡುತ್ತಿರುವುದು—ಹೊಸ ಹಣ್ಣುಗಳನ್ನು ಮರದಲ್ಲಿ ಬಿಡಿಸುವುದಲ್ಲ; ಈ ಒಣಗಿದ ಹಣ್ಣುಗಳನ್ನು ಬಿಡಿಸಿ ಕಾಳನ್ನೂ ಕುಸುರಿಯನ್ನೂ

ಅರಿಸಿಕೊಳ್ಳುವುದು; ಅವುಗಳನ್ನು ಕಣ್ಣಿಗೆ ಒಪ್ಪುವ ರೀತಿಯಲ್ಲಿ ಜೋಡಿಸಿ ಇಡುವುದು—ಇಷ್ಟೇಯೆ. ಆದ್ದರಿಂದ ಕೆಲವು ಶತಮಾನಗಳಿಂದ ಈಚಿಗೆ ನೋಡಿದರೆ ಪ್ರತಿಯೊಂದು ಶಾಸ್ತ್ರದಲ್ಲಿಯೂ ಪರಿಷ್ಕಾರ, ಮಂಡನ, ವ್ಯಾಖ್ಯಾನ, ಅನುವಾದ, ಸಂಗ್ರಹ ಇವು ಕಂಡುಬರುತ್ತವೆಯೇ ವಿನಾ ಹೊಸ ಹೊಸ ಅಭಿಪ್ರಾಯಗಳು ಮತಗಳು ಪ್ರಮೇಯಗಳು ಇವು ಕಂಡುಬರುವುದಿಲ್ಲ. ಇನ್ನು ಸ್ಫೋಟವಾದ, ಪರಮಾಣುವಾದ, ಸದಸದ್ವಾದ, ಅಭಿವ್ಯಕ್ತಿವಾದ, ವಿವರ್ತವಾದ, ಕಾವ್ಯಾತ್ಮವಾದ ಮುಂತಾದ ಅಪೂರ್ವ ಬುದ್ಧಿ ಶಕ್ತಿ ಪರಿಚಾಯಕವಾದ ವಾದಗಳು ಹುಟ್ಟುವ ಸಂಭವವು ತೋರುವುದಿಲ್ಲ.

ಅನಂತವೃಕ್ಷ ಪರಂಪರೆಗೆ ಕಾರಣವಾಗಬಹುದಾದ ಬೀಜಕೋಶವನ್ನು ತಮ್ಮಲ್ಲಿ ಧರಿಸಿದ್ದರೂ ಈ ಹಣ್ಣುಗಳು ಈಗ ಒಣಗಿನಿಂತಿವೆ. ಆದರೂ ಇವು ಒಂದಾನೊಂದು ಕಾಲದಲ್ಲಿ ಜೀವಂತವಾದ ವೃಕ್ಷಗಳಲ್ಲಿ ಬಿಟ್ಟಿರಬೇಕೆಂಬುದೂ ಮೊದಲು ಕಾಯಿ ಹೂಗಳಾಗಿರಬೇಕೆಂಬುದೂ ಸ್ಪಷ್ಟವಾಗಿದೆ. ಆದರೆ ಕಾಲವು ತನ್ನ ಭೂತಾಂಧಕಾರಜವನಿಕೆಯನ್ನು ಬಿಟ್ಟು ಎಲ್ಲವನ್ನೂ ಮರೆಮಾಡಿದೆ. ಸಂಸ್ಕೃತದಲ್ಲಿ ಅನೇಕ ಶಾಸ್ತ್ರಗಳಿಗೆ ಆದಿಯೇ ಗೊತ್ತಾಗುವುದಿಲ್ಲ. ಒಂದು ವಿಧದಲ್ಲಿ ವೇದವೇ ಆದಿಯೆಂದು ಒಪ್ಪಿಕೊಳ್ಳುವುದು ಸಾಧ್ಯವಾದರೂ ಮೂಲ ಮಾತ್ರ ಕಂಡು ಮುಂದೆ ಬಹುದೂರ ಗುಪ್ತಗಾಮಿನಿಯಾಗಿ ಪ್ರವಹಿಸುವ ನದಿಯಂತೆ ಈ ಶಾಸ್ತ್ರಗಳೂ ಹುಟ್ಟಿ ಬೆಳೆದು ಬಂದಿವೆ.

## ಅಲಂಕಾರಶಾಸ್ತ್ರ

ಅಲಂಕಾರಶಾಸ್ತ್ರವು ಈ ನಿಯಮಕ್ಕೆ ಅಪವಾದವಾಗಿಲ್ಲ. ಇದು ಯಾವಾಗ ಹುಟ್ಟಿತೋ ಹೇಗೆ ಹುಟ್ಟಿತೋ ಗೊತ್ತಾಗಿ ಹೇಳುವುದಕ್ಕಾಗುವುದಿಲ್ಲ. ಅಂತು ಭಾಷೆ ಹುಟ್ಟಿದ ಮೇಲೆ ವ್ಯಾಕರಣವು ಬರುವಂತೆ, ಅಲಂಕಾರಶಾಸ್ತ್ರವೂ ಕಾವ್ಯ ನಾಟ್ಯಗಳು ಹುಟ್ಟಿದ ಮೇಲೆ ಬಂದಿರಬೇಕು. ವೇದ ಮೊದಲು ಮಾಡಿಕೊಂಡು ಪ್ರಾಚೀನ ಗ್ರಂಥಗಳಲ್ಲಿ ಕಾವ್ಯಗಳೆಂದು ಕರೆಯಬಹುದಾದ ಅನೇಕ ಭಾಗಗಳಿವೆ. ಆದರೆ ಇಷ್ಟು

ರಿಂದಲೇ ವೇದಗಳನ್ನು ಕಾವ್ಯವೆಂದು ಯಾರೂ ಕರೆಯುವುದಿಲ್ಲ. ಶ್ರೀಮದ್ರಾಮಾಯಣವನ್ನು "ಆದಿ ಕಾವ್ಯ" ವೆಂದು ಕರೆಯುವುದು ಸಂಪ್ರದಾಯ. ಆದರೆ ಇದಕ್ಕೆ ಹಿಂದೆಯೇ ಅನೇಕ ಕಾವ್ಯಗಳು ಹುಟ್ಟಿರ ಬೇಕು; ಪಾಣಿನಿಯು ಕಾವ್ಯಗಳನ್ನು ಬರೆದಿದ್ದಂತೆಯೂ ಪತಂಜಲಿಯ ಕಾಲದಲ್ಲಿ 'ಕಂಸವಧ' 'ಬಲಿಬಂಧ' ಎಂಬ (ದೃಶ್ಯ?) ಕಾವ್ಯಗಳಿ ದ್ದಂತೆಯೂ ಗೊತ್ತಾಗುತ್ತದೆ. ಇಂಥ ಹೂವು ಹೀಚುಗಳು ಎಷ್ಟೋ ಹುಟ್ಟಿದ ಮೇಲೆ ರಾಮಕಥಾಮೃತವನ್ನು ಸೂಸುವ ಆದಿ ಕಾವ್ಯ ಫಲವು ಬಿಟ್ಟಿರಬೇಕು. ಆದ್ದರಿಂದ ನಿಷ್ಕೃಷ್ಟವಾಗಿ 'ಕಾವ್ಯ' ವೆಂದು ಹೇಳಬಹುದಾದ ಗ್ರಂಥವು ಸಂಸ್ಕೃತದಲ್ಲಿ ಯಾವಾಗ ಹುಟ್ಟಿತೋ ಅದರ ಲಕ್ಷಣ ವಿಚಾರವು ಯಾವಾಗ ಆರಂಭವಾಯಿತೋ ಆದನ್ನು ನಿರ್ಧರಿಸಿ ಹೇಳುವುದಕ್ಕೆ ಸಾಧನಗಳಿಲ್ಲ.

ಇಲ್ಲಿ ಅಲಂಕಾರವೆಂದರೇನು, ಅಲಂಕಾರಶಾಸ್ತ್ರವೆಂದರೇನು ಎಂಬ ವಿಚಾರವಾಗಿ ಎರಡು ಮಾತನ್ನು ಹೇಳುವುದು ಅನುಚಿತವಾಗಲಾರದು. ಅಲಂಕಾರವೆಂಬ ಶಬ್ದಕ್ಕೆ ಸಾಮಾನ್ಯವಾಗಿ ಅನುಪ್ರಾಸ ಉಪಮಾ ಮುಂತಾದ ಶಬ್ದಾರ್ಥ ವೈಚಿತ್ರ್ಯಗಳೆಂದು ಒಂದು ಅರ್ಥ; ಕಾವ್ಯದಲ್ಲಿ ಆನಂದದಾಯಕವಾಗಿರುವ ಸೌಂದರ್ಯ ಅಥವಾ ರಮಣೀಯತೆಯೆಂದು ಮತ್ತೊಂದು ಅರ್ಥ.* ಅಲಂಕಾರಶಾಸ್ತ್ರವು ಈ ಸೌಂದರ್ಯವನ್ನೂ ಅದಕ್ಕೆ ಸಂಬಂಧಪಟ್ಟ ಶಬ್ದಾರ್ಥ ವೈಚಿತ್ರ್ಯಗಳನ್ನೂ ವಿಚಾರಮಾಡಿ ಅದರ ಸ್ವರೂಪ ಲಕ್ಷಣ ಮುಂತಾದವುಗಳನ್ನು ತಿಳಿಸುತ್ತದೆ. ಈ ಶಾಸ್ತ್ರಕ್ಕೇ ಸಾಹಿತ್ಯಶಾಸ್ತ್ರವೆಂದೂ ಲಕ್ಷಣಶಾಸ್ತ್ರವೆಂದೂ ಈ ವಿಷಯ ಗಳನ್ನು ತಿಳಿಸುವ ಗ್ರಂಥಗಳಿಗೆ ಲಕ್ಷಣ ಗ್ರಂಥಗಳೆಂದೂ ಹೆಸರು ವಾಡಿಕೆ ಯಲ್ಲಿ ಬಂದಿದೆ.

## ಭರತನ ನಾಟ್ಯಶಾಸ್ತ್ರ

ಈಗ ನಮಗೆ ದೊರೆತಿರುವ ಲಕ್ಷಣ ಗ್ರಂಥಗಳಲ್ಲೆಲ್ಲಾ ಭರತನ

---

* ವಾಮನಸೂತ್ರ :—ಕಾವ್ಯಂ ಗ್ರಾಹ್ಯಮಲಂಕಾರಾತ್ ; ಸೌಂದರ್ಯಮ ಲಂಕಾರಃ.

ನಾಟ್ಯಶಾಸ್ತ್ರವೇ ಪ್ರಾಚೀನವಾಗಿ ತೋರುತ್ತದೆ.* ಇದಕ್ಕೆ ಹಿಂದೆ, ಶಿಲಾಲಿ ಕೃಶಾಶ್ವ ಎಂಬವರು 'ನಟಸೂತ್ರ' ಗಳನ್ನು ಬರೆದಿದ್ದರಂತೆ. ಆದರೆ ಈಗ ಅವು ಇಲ್ಲ. ಅಗ್ನಿಪುರಾಣವೇ ಪ್ರಾಚೀನವೆಂದು ಕೆಲವರ ಅಭಿಪ್ರಾಯ. ಇವೆರಡು ಪಕ್ಷಗಳಿಗೂ ಸಾಧಕಬಾಧಕಗಳಿವೆ. ಆದರೆ ಭರತನ ನಾಟ್ಯಶಾಸ್ತ್ರವೇ ಪ್ರಾಚೀನವಾದದ್ದೆಂದು ಹೇಳುವುದಕ್ಕೆ ಯುಕ್ತಿಗಳೂ ಗಮಕಗಳೂ ಕಾರಣಗಳೂ ಇವೆ. ಇವುಗಳನ್ನು ತಿಳಿಸುವುದಕ್ಕೆ ಮೊದಲು ಸ್ವಲ್ಪಮಟ್ಟಿಗಾದರೂ ಈ ಗ್ರಂಥಗಳ ಪರಿಚಯವನ್ನು ಮಾಡಿಕೊಡುವುದು ಆವಶ್ಯಕ.

ನಮಗೆ ಈಗ ದೊರೆಯುವ ಭರತ ನಾಟ್ಯಶಾಸ್ತ್ರವು ನಿರ್ಣಯ ಸಾಗರ ಮುದ್ರಾಲಯದಲ್ಲಿ ಸುಮಾರು ಮುವ್ವತ್ತು ವರ್ಷಗಳ ಕೆಳಗೆ ಅಚ್ಚಾಗಿ ಪ್ರಕಟವಾದ ಗ್ರಂಥ. ಇದರಲ್ಲಿ ಗ್ರಂಥಪಾತಗಳೂ ತಪ್ಪುಗಳೂ ಹೇರಳವಾಗಿವೆ; ಅನೇಕ ಕಡೆಗಳಲ್ಲಿ ಹಿಂದೆ ಬಂದ ವಿಷಯಗಳೇ ಸ್ವಲ್ಪ ಹೆಚ್ಚುಕಡಮೆಯಾಗಿ ಮತ್ತೆ ಮತ್ತೆ ಬರುತ್ತವೆ. ಇದನ್ನು ನೋಡಿದರೆ ಕಾಲಕ್ರಮದಲ್ಲಿ ಮೂಲಗ್ರಂಥಕ್ಕೆ ಮೇಲಿಂದ ಮೇಲೆ ವಿಷಯಗಳು ಬಂದು ಸೇರಿದುವೆಂದು ಹೇಳಬೇಕಾಗಿದೆ. ಈ ಗ್ರಂಥದ ಮುಕ್ಕಾಲು ಮೂರು ವೀಸ ಭಾಗವೆಲ್ಲಾ ಶ್ಲೋಕರೂಪವಾಗಿಯೂ (ಅನುಷ್ಟುಪ್ ಶ್ಲೋಕವಲ್ಲದೆ ಅಲ್ಲಲ್ಲಿ ಇತರ ವೃತ್ತಗಳೂ ಬರುವುದುಂಟು) ಕೆಲವು ಭಾಗಗಳು ಮಾತ್ರ ವಿವರಣದಂತಿರುವ ಗದ್ಯರೂಪವಾಗಿಯೂ ಇವೆ. ಈ ಗದ್ಯಭಾಗಗಳ ಸ್ವರೂಪವನ್ನು ನೋಡಿದರೂ ಇವು ಈಚೆಗೆ ಸೇರಿದವೆಂಬ ಸಂಶಯವು ಹುಟ್ಟುತ್ತದೆ. ಈ ಗ್ರಂಥದಲ್ಲಿ ವರ್ಣಿತವಾಗಿರುವ ಅನೇಕ ಸಂಗತಿಗಳು ಈಗ ನಷ್ಟಪ್ರಾಯವಾಗಿರುವುದರಿಂದಲೂ ಕೆಲವೆಡೆಗಳಲ್ಲಿ ಅರ್ಥಮಾಡಿಕೊಳ್ಳುವುದು ಕಷ್ಟವಾದದ್ದರಿಂದಲೂ ಮೂಲಗ್ರಂ

---

* ಕಾಲನಿರ್ಣಯಮಾಡುವುದರಲ್ಲಿ ನಿಷ್ಣಾತರಾದ ಪಾಶ್ಚಾತ್ಯ ವಿದ್ವಾಂಸರೂ ಈ ಗ್ರಂಥದ ಕಾಲ ಇಂಥಾದ್ದೇ ಎಂದು ನಿಷ್ಕರ್ಷಿಸಿಲ್ಲ; ಇದು ಪ್ರಾಯಶಃ ಕ್ರಿಸ್ತ ಶಕದ ಆದಿಭಾಗದ ಅಥವಾ ಅದಕ್ಕೂ ಹಿಂದಿನದಿರಬಹುದೆಂಪು ಭಾರತೀಯ ಇತಿಹಾಸ ಸಂಶೋಧಕರಾದ ರ್ಯಾಪ್ಸನ್ ಸಾಹೇಬರು ಹೇಳುತ್ತಾರೆ.—ಎನ್ಸೈಕ್ಲೊಪೀಡಿಯ ಆಫ್ ರಿಲಿಜನ್ ಅಂಡ್ ಎಥಿಕ್ಸ್, ಸಂ. ೪, ಪು. ೮೮೬.

ಥದ ಭಾವವೇ ಕನ್ನಡದಲ್ಲಿ ತದ್ವತ್ತಾಗಿ ಬರುವಂತೆ ತಿಳಿಸಬಹುದೆಂದು ಶಪಥಮಾಡಿ ಹೇಳುವುದಕ್ಕಾಗುವುದಿಲ್ಲ. ಅಲ್ಲದೆ ಮೂಲಗ್ರಂಥಕ್ಕೆ ಅಕ್ಷರಶಃ ಮಾಡಿದ ಭಾಷಾಂತರವು ಎಲ್ಲರಿಗೂ ಒಂದೇ ಸಮನಾಗಿ ಉಪಯುಕ್ತವಾಗಿಯಾಗಲಿ ಸ್ವಾರಸ್ಯವಾಗಿಯಾಗಲಿ ಇರುವುದಿಲ್ಲ. ಆದ್ದರಿಂದ ಈ ಗ್ರಂಥವನ್ನೇ ಇಟ್ಟುಕೊಂಡು ಯಾವುದು ಆವಶ್ಯಕ ಮತ್ತು ಉಪಯುಕ್ತವೆಂದು ತೋರುತ್ತದೆಯೋ ಅದನ್ನು ಮಾತ್ರ ಯಥಾಮತಿಯಾಗಿಯೂ ಯಥೋಚಿತವಾಗಿಯೂ ಕನ್ನಡದಲ್ಲಿ ತಿಳಿಸುತ್ತಹೋಗುತ್ತೇನೆ. ಹೀಗೆ ಮೊದಲು ಭರತನ ನಾಟ್ಯಶಾಸ್ತ್ರ ಗ್ರಂಥದ ಸ್ವರೂಪವು ತಿಳಿದು ಅದರ ಪರಿಚಯವು ಸ್ವಲ್ಪಮಟ್ಟಿಗೆ ಆದಮೇಲೆ ಅಲಂಕಾರಶಾಸ್ತ್ರಕ್ಕೆ ಸಾಕ್ಷಾತ್ತಾಗಿ ಸಂಬಂಧಪಟ್ಟು ರಸ ಭಾವ ಅಲಂಕಾರ ಗುಣ ಮುಂತಾದ ಅಂಶಗಳನ್ನು ತಿಳಿಸುವ ಎರಡು ಮೂರು ಅಧ್ಯಾಯಗಳನ್ನು ಓಲೆಯ ಪ್ರತಿಗಳ ಸಹಾಯದಿಂದ ಶೋಧಿಸಿ ಸಂಸ್ಕೃತ ಮೂಲವನ್ನೂ ಅದಕ್ಕೆ ಕನ್ನಡ ಅರ್ಥವನ್ನೂ ಕೊಡುತ್ತೇನೆ. ಇದರಿಂದ ಭರತ ನಾಟ್ಯಶಾಸ್ತ್ರಕ್ಕೂ ಇತರ ಲಕ್ಷಣಗ್ರಂಥಗಳಿಗೂ ಇರುವ ವೈಲಕ್ಷಣ್ಯವು ಗೊತ್ತಾಗುತ್ತದೆ; ಇವುಗಳಲ್ಲಿ ಯಾವುದು ಹಿಂದು ಯಾವುದು ಮುಂದು ಎಂದು ವಿಚಾರ ಮಾಡುವುದಕ್ಕೆ ಬೇಕಾದ ಸಾಧನಗಳೂ ಸಿಕ್ಕುತ್ತವೆ; ಮತ್ತು ಈಗ್ಗೆ ಎರಡು ಸಾವಿರ ವರ್ಷಗಳ ಹಿಂದೆ ನಮ್ಮ ದೇಶದಲ್ಲಿ ಸಂಗೀತ ಸಾಹಿತ್ಯಗಳೂ ರಂಗವಿಧಾನ ನಾಟ್ಯಪ್ರಯೋಗ ಪ್ರದರ್ಶನ ಕ್ರಮಗಳೂ ಎಷ್ಟು ಮಟ್ಟಿಗೆ ಅಭಿವೃದ್ಧಿಹೊಂದಿದ್ದುವು ಎಂದು ಗೊತ್ತಾಗುತ್ತದೆ.

ಈ ಗ್ರಂಥವು ಭಗವದ್ಗೀತೆ ಮುಂತಾದವುಗಳ ಹಾಗೆ ಪ್ರಶ್ನೋತ್ತರ ರೂಪವಾಗಿದೆ; ಇದರ ಆರಂಭವನ್ನು ನೋಡಿದರೆ ಋಷಿಗಳು ನಾಟ್ಯ ವಿಚಾರವನ್ನು ತಿಳಿಸಬೇಕೆಂದು ಕೇಳಿಕೊಂಡಹಾಗೂ ಅದಕ್ಕೆ ಭರತ ಮುನಿಯು ಉತ್ತರಕೊಟ್ಟಹಾಗೂ, ಅದನ್ನು ಬೇರೊಬ್ಬರು ಬರೆದಿಟ್ಟರುವಂತೆಯೂ ಗೊತ್ತಾಗುತ್ತದೆ. ಇದರಲ್ಲಿ ಮುವ್ವತ್ತೇಳು ಅಧ್ಯಾಯಗಳಿವೆ; ಇವುಗಳಲ್ಲಿ ಮೊದಲನೆಯ ಐದು ಅಧ್ಯಾಯಗಳು ಪೀಠಿಕಾರೂಪವಾಗಿಯೂ ಕೊನೆಯ ಎರಡು ಅಧ್ಯಾಯಗಳು ಉಪಸಂಹಾರ ರೂಪವಾಗಿಯೂ ಇವೆ; ಮಧ್ಯೆ ಇರುವ ಮಿಕ್ಕ ಮುವ್ವತ್ತು ಅಧ್ಯಾಯಗಳು ರಂಗವಿಚಾರಗಳನ್ನು ನಿರೂಪಿಸುತ್ತವೆ.

ಪೀಠಿಕಾ ಭಾಗದಲ್ಲಿ ನಾಟ್ಯದ ಉತ್ಪತ್ತ್ಯುದ್ದೇಶಗಳು ಮಂಟಪ ವಿಧಾನ ಪೂರ್ವರಂಗವಿಧಾನ ಎಂಬ ಮುಖ್ಯವಾದ ಮೂರು ಅಂಶ ಗಳಿವೆ.

## ನಾಟ್ಯದ ಉತ್ಪತ್ತಿ (ಅಧ್ಯಾಯ ೧)

ನಾಟ್ಯವಿದ್ಯೆಯು ವೇದಕ್ಕೆ ಸಮಾನ; ಅದರಿಂದಲೇ ಇದಕ್ಕೆ ನಾಟ್ಯವೇದವೆಂದೂ ಹೆಸರು. ಇದು ಬ್ರಹ್ಮನಿಂದ ಸಾಕ್ಷಾತ್ತಾಗಿ ನಿರ್ಮಿತ ವಾದದ್ದು. ಹಿಂದೆ ತ್ರೇತಾಯುಗದ ಆರಂಭದಲ್ಲಿ ಜನಗಳು ಗ್ರಾಮ್ಯತೆಗೆ ಬಿದ್ದು ಕಾಮಕ್ರೋಧಾದಿಗಳಿಂದ ಅಂಧರಾಗಿ ನುಗ್ಗುತ್ತಿರಲು, ಜಂಬೂ ದ್ವೀಪವನ್ನೆಲ್ಲಾ ಯಕ್ಷರಾಕ್ಷಸಾದಿಗಳು ಆಕ್ರಮಿಸಿಕೊಂಡರು. ಆಗ ಮಹೇಂದ್ರಾದಿ ದೇವತೆಗಳು ಬ್ರಹ್ಮನನ್ನು ಕುರಿತು "ದೃಶ್ಯವೂ ಶ್ರವ್ಯವೂ ಆಗಿರುವ ಯಾವುದಾದರೂ ಒಂದು 'ಕ್ರೀಡೆ' ಯನ್ನು ಸೃಷ್ಟಿಮಾಡಿ ಕೊಡಬೇಕು. ಈಗ ಇರುವ ಚತುರ್ವೇದಗಳನ್ನು ಎಲ್ಲಾ ಜಾತಿಗಳವರೂ ಉಪಯೋಗಿಸಿಕೊಳ್ಳುವ ಹಾಗಿಲ್ಲ" ಎಂದು ಕೇಳಿದರು. ಆಗ ಬ್ರಹ್ಮನು ಋಗ್ವೇದದಿಂದ 'ಪಾಠ್ಯ' (ಸಾಹಿತ್ಯ) ವನ್ನೂ ಯಜುರ್ವೇದದಿಂದ 'ಅಭಿನಯ'ವನ್ನೂ ಸಾಮವೇದದಿಂದ 'ಗೀತ' ವನ್ನೂ ಅಥರ್ವಣ ವೇದದಿಂದ 'ರಸ'ಗಳನ್ನೂ ತೆಗೆದುಕೊಂಡು ಎಲ್ಲಾ ವರ್ಣದವರೂ ಅನುಭವಿಸಿ ಸುಖಪಡಬಹುದಾದ ಐದನೆಯ (ನಾಟ್ಯ) ವೇದವನ್ನು ಸೃಷ್ಟಿಸಿದನು.* ಇದನ್ನು ಭರತನು ಬ್ರಹ್ಮನ ಆಜ್ಞೆಯ ಪ್ರಕಾರ ಮಹೇಂದ್ರವಿಜಯೋತ್ಸವದಲ್ಲಿ ಪ್ರಯೋಗಿಸಿ ದೇವಾಸುರರ ಯುದ್ಧ ವನ್ನು ತೆಗೆದುಕೊಂಡು ಅದರಲ್ಲಿ ದೇವತೆಗಳು ರಾಕ್ಷಸರನ್ನು ಛಿನ್ನಭಿನ್ನ ವಾಗಿ ಮಾಡಿ ಓಡಿಸಿದುದರ 'ಅನುಕೃತಿ' ಯನ್ನು ಅಭಿನಯಿಸಿದನು. ಬ್ರಹ್ಮಾದಿ ದೇವತೆಗಳು ಇದನ್ನು ನೋಡಿ ಸಂತೋಷಗೊಂಡು ಭರತನಿಗೆ

---

* ಜಗ್ರಾಹ ಪಾಠ್ಯಮೃಗ್ವೇದಾತ್ ಸಾಮಭ್ಯೋ ಗೀತಮೇವ ಚ ।
ಯಜುರ್ವೇದಾದಭಿನಯಾನ್ ರಸಾನಾಥರ್ವಣಾದಪಿ ॥ ೧–೧೭ ॥

ಧ್ವಜ, ಛತ್ರಿ, ಬೀಸಣಿಗೆ, ಸಿಂಹಾಸನ, ಕಿರೀಟ ಮುಂತಾದ ನಾನಾ 'ಉಪಕರಣ'ಗಳನ್ನು ಕೊಟ್ಟು ಬಹುಮಾನ ಮಾಡಿದರು. ಗಂಧರ್ವಾದಿಗಳು ಅವನ ಮಕ್ಕಳಿಗೆ ವಾಕ್ಸಂಪತ್ತು ಭಾವ ರಸ ರೂಪ ಬಲ ಆಭರಣ ಮುಂತಾದವುಗಳನ್ನು ಕೊಟ್ಟರು. ಆದರೆ ಈ ನಾಟ್ಯವು ರಾಕ್ಷಸರಿಗೆ ಮಾತ್ರ ರುಚಿಸದಿರಲು ಅವರು ಗದ್ದಲಮಾಡಿ ನಾಟ್ಯವು ಮುಂದೆ ನಡೆಯುದಂತೆ ವಿಘ್ನಗಳನ್ನು ತಂದು ಒಡ್ಡಿದರು. ದೇವೇಂದ್ರನು ಎದ್ದು ಅವರನ್ನು ಧ್ವಂಸಮಾಡಿದನು. ಇದನ್ನೆಲ್ಲಾ ಭರತನು ಬ್ರಹ್ಮನಲ್ಲಿ ವಿಜ್ಞಾಪಿಸಿಕೊಳ್ಳಲು, ಬ್ರಹ್ಮನು ವಿಶ್ವಕರ್ಮನನ್ನು ಕರೆದು ಅವನಿಂದ 'ನಾಟ್ಯಗೃಹ'ವನ್ನು ನಿರ್ಮಾಣ ಮಾಡಿಸಿ ಅದರ ರಕ್ಷಣೆಗಾಗಿ ನಾಟ್ಯಶಾಲೆಯ ಒಂದೊಂದು ಭಾಗದಲ್ಲಿ ಒಬ್ಬೊಬ್ಬ ದೇವತೆಯನ್ನು ನಿಯಮಿಸಿ ರಂಗಪೀಠದಲ್ಲಿ ತಾನೇ ನೆಲಸಿದನು. (ಇದಕ್ಕಾಗಿಯೇ ರಂಗದಲ್ಲಿ ಹೂವನ್ನು ಎರಚುವುದು.)

## ನಾಟ್ಯದ ಉದ್ದೇಶ

ಈ ಮಧ್ಯೆ, ದೇವತೆಗಳ ಪ್ರಾರ್ಥನೆಯಂತೆ ಬ್ರಹ್ಮನು ವಿಘ್ನಕಾರಿಗಳಾದ ದೈತ್ಯರನ್ನು ಕರೆದು ಒಳ್ಳೆಯ ಮಾತಿನಲ್ಲಿ ಅವರನ್ನು ಸಮಾಧಾನ ಮಾಡಲೆಳಸಿ ಅವರು ವಿಘ್ನಮಾಡಿದ್ದಕ್ಕೆ ಕಾರಣವನ್ನು ಕೇಳಿದನು. ಅವರೂ ಶಾಂತಭಾವದಿಂದಲೇ "ಲೋಕ ಪಿತಾಮಹ! ದೇವತೆಗಳ ಇಷ್ಟದಂತೆ ನೀನು ಸೃಷ್ಟಿಸಿದ ನಾಟ್ಯವೇದವು ನಮ್ಮ ಸೋಲನ್ನು ವರ್ಣಿಸಿ ನಮಗೆ ಅಪಮಾನ ಮಾಡುವುದಾಗಿದೆ; ಇದು ಸರಿಯಲ್ಲ; ದೇವತೆಗಳು ಹೇಗೋ ಹಾಗೇ ನಾವೂ ನಿನ್ನಿಂದ ಹಿಂದೆ ಉತ್ಪನ್ನರಾದವರು" ಎಂದರು. ಬ್ರಹ್ಮನು ಇದನ್ನು ಕೇಳಿ "ಅಯ್ಯಾ ದೈತ್ಯರೇ, ನಿಮ್ಮ ಕೋಪವನ್ನೂ ದುಃಖವನ್ನೂ ಬಿಡಿ; ಇದು ದೇವತೆಗಳಿಗೆ ಒಳ್ಳೆಯದು ರಾಕ್ಷಸರಿಗೆ ಕೆಟ್ಟದ್ದು ಎಂಬ ಭಾವನೆಯನ್ನು ಬಿಡಿ. ನಾನು ಸೃಷ್ಟಿಸಿರುವ ಈ ನಾಟ್ಯವೇದಕ್ಕೆ ಭಾವ ಕರ್ಮಗಳೇ ವಿಷಯ; ಆದರೆ ಅವು ಕೇವಲ ನಿಮ್ಮ ಭಾವಗಳೂ ಅಲ್ಲ ದೇವತೆಗಳ ಭಾವಗಳೂ ಅಲ್ಲ; ಇದರಲ್ಲಿ ಮೂರು ಲೋಕದ ಭಾವಗಳೂ ಬರುತ್ತವೆ; ಕೆಲವು ಕಡೆಗಳಲ್ಲಿ ಆಟ ಕೆಲವು ಕಡೆಗಳಲ್ಲಿ ಕೂಟ; ಕೆಲವು ಕಡೆಗಳಲ್ಲಿ ಹಾಸ್ಯ ಕೆಲವು ಕಡೆಗಳಲ್ಲಿ

ಯುದ್ಧ ; ಕೆಲವು ಕಡೆಗಳಲ್ಲಿ ಕಾಮ ಕೆಲವು ಕಡೆಗಳಲ್ಲಿ ಕೊಲೆ ಇವು ಬರುತ್ತವೆ. ಇದರಿಂದ ಧಾರ್ಮಿಕರಿಗೆ ಧರ್ಮ ಕಾಮುಕರಿಗೆ ಕಾಮ; ಅವಿನೀತರಿಗೆ ಶಾಸ್ತಿ ಮತ್ತರಿಗೆ ದಮನ; ಅಜ್ಞರಿಗೆ ಜ್ಞಾನ ವಿದ್ವಾಂಸರಿಗೆ ಪಾಂಡಿತ್ಯ; ಐಶ್ವರ್ಯವಂತರಿಗೆ ವಿನೋದ, ದುಃಖಪೀಡಿತರಾದವರಿಗೆ ಧೈರ್ಯ; ಅನುಜೀವಿಗಳಿಗೆ ಸಂಪಾದನೆ, ಚಿತ್ತಕ್ಷೋಭವಿರತಕ್ಕವರಿಗೆ ಸ್ಥೈರ್ಯ ಇವು ದೊರೆಯುತ್ತವೆ. ಹೀಗೆ ನಾಟ್ಯವು ಉತ್ತಮ ಮಧ್ಯಮಾಧಮರು ದೇವದಾನವರು ಮುನಿಮನುಷ್ಯರು ಇವರೆಲ್ಲರ ನಾನಾ ಭಾವಗಳನ್ನೂ ನಾನಾ ಕರ್ಮಗಳನ್ನೂ ನಾನಾ ಸ್ಥಿತಿಗತಿಗಳನ್ನೂ ತೆಗೆದುಕೊಂಡು ಲೋಕವೃತ್ತಾಂತವನ್ನು ಅನುಕರಣಮಾಡಿ ಲೋಕಕ್ಕೆ ಪ್ರೀತಿಹಿತಗಳನ್ನು ಉಂಟುಮಾಡುತ್ತದೆ. * (ಸುಖದುಃಖಗಳಿಂದ ಕೂಡಿದ ಲೋಕ ಸ್ವಭಾವವನ್ನು ಆಂಗಿಕಾದ್ಯಭಿನಯದಿಂದ ಪ್ರದರ್ಶಿಸುವಿಕೆಯೇ ನಾಟ್ಯ ; †) ಆದ್ದರಿಂದ ನೀವು ದೇವತೆಗಳ ಮೇಲೆ ಕೋಪಿಸಿಕೊಳ್ಳಬಾರದು"—ಎಂದು ಮುಂತಾಗಿ ಹೇಳಿ ಸಮಾಧಾನಮಾಡಿ, 'ಪ್ರೇಕ್ಷಾ' ಅಥವಾ ನಾಟ್ಯಕ್ಕೆ ಮೊದಲು ವಿಘ್ನವಿಘಾತಾರ್ಥವಾಗಿ ರಂಗದೇವತೆಗಳನ್ನು ಕ್ರಮವರಿತು ಪೂಜೆಮಾಡಬೇಕೆಂದು ವಿಧಿಸಿದನು.

### ಮಂಟಪ ವಿಧಾನ (ಅ. ೨-೩)

ಎರಡನೆಯ ಅಧ್ಯಾಯದಲ್ಲಿ ನಾಟ್ಯ ಶಾಲೆಯ ಭೇದಗಳು ಅವುಗಳನ್ನು ಕಟ್ಟುವ ಕ್ರಮ ವಾಸ್ತುಪೂಜೆ ಮುಂತಾದವುಗಳು ಹೇಳಲ್ಪಟ್ಟಿವೆ.

ನಾಟ್ಯಶಾಲೆ ಅಥವಾ "ಪ್ರೇಕ್ಷಾಗೃಹವು" ವಿಕೃಷ್ಟ (ಉದ್ದ) ಚತುರಸ್ರ (ಚೌಕ) ತ್ರ್ಯಸ್ರ (ತ್ರಿಕೋಣ) ಎಂದು ಮೂರು ಆಕಾರಗಳು

---

* ನಾನಾ ಭಾವೋಪಸಂಪನ್ನಂ ನಾನಾವಸ್ಥಾಂತರಾತ್ಮಕಂ ।
ಲೋಕವೃತ್ತಾನುಕರಣಂ ನಾಟ್ಯಮೇತನ್ಮಯಾ ಕೃತಂ ॥ ೧-೭೭ ॥
ಉತ್ತಮಾಧಮಮಧ್ಯಾನಾಂ ನರಾಣಾಂ ಕರ್ಮಸಂಶ್ರಯಂ ।
ಹಿತೋಪದೇಶಜನನಂ ಧೃತಿಕ್ರೀಡಾಸುಖಾದಿಕೃತ್ ॥ ೧-೭೮ ॥

† ಯೋಽಯಂ ಸ್ವಭಾವೋ ಲೋಕಸ್ಯ ಸುಖದುಃಖಸಮನ್ವಿತಃ ।
ಸೋಽಂಗಾದ್ಯಭಿನಯೋಪೇತೋ ನಾಟ್ಯಮಿತ್ಯಭಿಧೀಯತೇ ॥ ೧-೮೫ ॥

ಳ್ಳದ್ದು ಮತ್ತು ಜ್ಯೇಷ್ಠ ಮಧ್ಯಮ ಕನಿಷ್ಠ ಎಂದು ಮೂರು ಅಳತೆಯುಳ್ಳದ್ದು; ಜ್ಯೇಷ್ಠವು ದೇವತೆಗಳು ಉಪಯೋಗಿಸುವುದು; ಮಧ್ಯಮವು ರಾಜರು ಉಪಯೋಗಿಸುವುದು; ಕನಿಷ್ಠವು ಸಾಮಾನ್ಯ ಜನರು ಉಪಯೋಗಿಸುವುದು. ಜ್ಯೇಷ್ಠವು ೧೦೮ ಹಸ್ತ ಉದ್ದವಾದದ್ದು ; ಮಧ್ಯಮವು ೬೪ ಹಸ್ತ ಉದ್ದವಾದದ್ದು ; ಕನಿಷ್ಠವು ೩೨ ಹಸ್ತ* ಉದ್ದವಾದದ್ದು. ನಾಟ್ಯ ಮಂಟಪವು ೩೨ ಅಥವಾ ೬೪ ಹಸ್ತಕ್ಕೆ ಹೆಚ್ಚು ಉದ್ದವಾಗಬಾರದು ; ಏಕೆಂದರೆ ಆಗ ನಾಟ್ಯವು ಅವ್ಯಕ್ತವಾಗುತ್ತದೆ; ಮಾತುಗಳು (ಪಾಠ್ಯ) ಚೆನ್ನಾಗಿ ಕೇಳಿಸದೆಯೂ ಸೂಕ್ಷ್ಮವಾದ ಲಾಸ್ಯವು ಎಲ್ಲರಿಗೂ ಕಾಣದೆಯೂ ಹೋಗುತ್ತದೆ ; ಮಧ್ಯಮದಲ್ಲಿ ಮಾತೂ ಹಾಡೂ ಚೆನ್ನಾಗಿ ಕೇಳುತ್ತವೆ.

ಪ್ರಮಾಣಕ್ಕೆ ಅನುಸಾರವಾದ ಭೂಮಿಯನ್ನು ತೆಗೆದುಕೊಂಡು ಅದರ ಎಂಟನೆಯ ಒಂದು ಭಾಗವನ್ನು 'ರಂಗಶೀರ್ಷ' ಮತ್ತು ಅದರ ಹಿಂದೆ 'ನೇಪಥ್ಯಗೃಹ' ಇವುಗಳಿಗಾಗಿ ಗುರುತು ಮಾಡಿಕೊಳ್ಳಬೇಕು. ಆಮೇಲೆ ವಿಧ್ಯುಕ್ತವಾಗಿ ಸ್ಥಾಪನಕರ್ಮವನ್ನು ಆರಂಭಿಸಿ ಗೋಡೆ ಕಂಬ ಮತ್ತರವಾಣಿ ರಂಗಪೀಠ (stage) ರಂಗಶೀರ್ಷ ನೇಪಥ್ಯಗೃಹ (ವೇಷದ ಕೊಠಡಿ) ಇವುಗಳನ್ನೂ, ಪ್ರೇಕ್ಷಕರು ಕುಳಿತುಕೊಳ್ಳುವುದಕ್ಕಾಗಿ ಇಟ್ಟಿಗೆ ಮರ ಮುಂತಾದವುಗಳಿಂದ ಸೋಪಾನಾಕಾರವಾದ ಪೀಠವನ್ನೂ (ಗ್ಯಾಲರಿ ?) ಕಟ್ಟಬೇಕು.† ಗೋಡೆಗಳಿಗೆ ಸುಣ್ಣಬಣ್ಣಗಳನ್ನು ಬಳಿದು ಅವುಗಳ ಮೇಲೆ ಮನುಷ್ಯರನ್ನೂ ಲತೆಗಳನ್ನೂ ನಾನಾ ಚಿತ್ರಗಳನ್ನೂ ಚಿತ್ರಿಸಿ ಮಂಟಪವನ್ನು ನಾನಾ ಅಲಂಕಾರಗಳಿಂದ ಅಲಂಕರಿಸಬೇಕು. ರಂಗಪೀಠವು ಕಲ್ಲು ಹುಲ್ಲುಗಳಿಲ್ಲದ ಪುಡಿಯಾದ ಕರಿಯ ಮಣ್ಣನ್ನು ಹಾಕಿ (ಎತ್ತರವಾಗಿಯೂ) ಉಬ್ಬಿಲ್ಲದೆಯೂ ಸಮನಾಗಿಯೂ ಇರುವಂತೆ ಮಾಡಿದ್ದಾಗಿರಬೇಕು. ಹೀಗೆ ನಾಟ್ಯ ಮಂಟಪದಲ್ಲಿ 'ಬೆಟ್ಟದ ಗುಹೆ ಇದ್ದಹಾಗೆ' ಎರಡು 'ಭೂಮಿ' ಗಳಿರ

---

* ಒಂದು ಹಸ್ತಕ್ಕೆ ೨೪ ಅಂಗುಲ (೨-೧೮)

† ಸ್ತಂಭಾನಾಂ ಬಾಹ್ಯತಶ್ಚಾಪಿ ಸೋಪಾನಾಕೃತಿ ಪೀಠಕಂ ।
ಇಷ್ಟಕಾದಾರುಭಿಃ ಕಾರ್ಯಂ ಪ್ರೇಕ್ಷಕಾಣಾಂ ನಿವೇಶನಂ ॥ ೨-೬೯-೮೦ ॥

ಬೇಕು. ಕಂಬ ನಾಗದಂತ ಕಿಟಕಿ ಮುಂತಾದವುಗಳಾವುದನ್ನೂ ಕಬ್ಬಿಣದಿಂದ ಮಾಡಕೂಡದು; ಕಿಟಕಿಗಳು ಸ್ವಲ್ಪವಾಗಿದ್ದು ಗಾಳಿ ಬಹುವಾಗಿ ಬೀಸದಂತಿದ್ದರೆ ಕುತಪದ* (ಮೃದಂಗಾದಿ ವಾದ್ಯಗಳ) ಸ್ವರವು ಗಂಭೀರವಾಗಿ ಕೇಳುತ್ತದೆ.

ನಾಟಕಶಾಲೆಯನ್ನು ಕಟ್ಟಿ ಮುಗಿದ ಮೇಲೆ ಅಲ್ಲಿ ಏಳು ದಿವಸಗಳವರೆಗೆ ಹಸುಗಳನ್ನು ಬಿಟ್ಟಿದ್ದು ಬ್ರಾಹ್ಮಣರಿಂದ ಜಪತಪಗಳನ್ನು ಮಾಡಿಸಿ, ಅನಂತರ ನಾಟ್ಯಾಚಾರ್ಯನು ಶುಚಿಯಾಗಿ ಅದನ್ನು ಪ್ರವೇಶಿಸಿ ಕುತಪಜರ್ಜರಗಳನ್ನೂ ರಂಗದೇವತೆಗಳನ್ನೂ ಯಥಾವಿಧಿಯಾಗಿ ಪೂಜೆಮಾಡಿ ಅನಂತರ ನಾಟ್ಯವನ್ನು ಪ್ರಯೋಗಿಸಬೇಕು.

ನಾಲ್ಕನೆಯ ಅಧ್ಯಾಯದಲ್ಲಿ—ಭರತನು ಈಶ್ವರನ ಮುಂದೆ ನಾಟ್ಯವನ್ನು ಪ್ರದರ್ಶಿಸಲು ಅವನು ಸಂತೋಷಪಟ್ಟು ತಂಡುವಿನ ಮೂಲಕ ಅಂಗಹಾರಗಳು ಕರಣಗಳು ರೇಚಕ ಮುಂತಾದವುಗಳನ್ನೆಲ್ಲಾ ತಿಳಿಸಿ 'ತಾಂಡವಲಕ್ಷಣ' ವನ್ನು ವಿವರಿಸಿದನೆಂದು 'ತಾಂಡವ' ದ ಉತ್ಪತ್ತಿಯು ಹೇಳಲ್ಪಟ್ಟಿದೆ.

## ಪೂರ್ವರಂಗ ವಿಧಾನ (ಅ. ೫.)

ನಾಟ್ಯವು ಕ್ರಮವಾಗಿ ಆರಂಭವಾಗುವುದಕ್ಕೆ ಮುಂಚೆ ರಂಗದಲ್ಲಿ ನಡೆಯುವ ಕಾರ್ಯಕಲಾಪಕ್ಕೆ "ಪೂರ್ವರಂಗ"ವೆಂದು ಹೆಸರು:— ಗಾಯಕರೂ ವಾದಕರೂ ತಮ್ಮ ತಮ್ಮ ವಾದ್ಯ ವಿಶೇಷಗಳೊಡನೆ ಬಂದು ಸಿದ್ಧರಾಗಲು ಸೂತ್ರಧಾರನು ವಿದೂಷಕ ಪಾರಿಪಾರ್ಶ್ವಕರೊಡನೆ ರಂಗವನ್ನು ಪ್ರವೇಶಿಸಿ, ನೃತ್ಯಗೀತಗಳೊಡನೆ ಹೋಗಿ ರಂಗಪೀಠದ ಅಧಿದೇವತೆಯಾದ ಬ್ರಹ್ಮನನ್ನೂ ಇತರ ದೇವತೆಗಳನ್ನೂ ನಮಸ್ಕರಿಸಿ ನಾಂದಿಯನ್ನು ಹೇಳಿ "ಚಾರಿ" "ಮಹಾಚಾರಿ" (ನೃತ್ಯವಿಶೇಷ)ಗಳನ್ನು ಪ್ರಯೋಗಿಸುವನು. ವಿದೂಷಕನ ಹಾಸ್ಯಜನಕವಾದ ಅಸಂಬದ್ಧ ಪ್ರಲಾಪವು ನಡೆದು ಆಮೇಲೆ "ಕಾವ್ಯವಸ್ತುವು" ಸೂಚಿಸಲ್ಪಡುವುದು. ಇದಾದ ಮೇಲೆ ಮೂವರೂ ಹೊರಟುಹೋಗುವರು. ಇದೇ ಪೂರ್ವರಂಗ. ಇದರಲ್ಲಿ 'ಶುದ್ಧ' 'ಚಿತ್ರ' ಎಂದು ಎರಡು ಭೇದಗಳಿವೆ.

* ಮೂಲಗ್ರಂಥದಲ್ಲಿ ೩೪ ನೆಯ ಅಧ್ಯಾಯ (ಪುಟ ೪೨೯) ನ್ನು ನೋಡಿ.

ನೃತ್ತಗೀತಗಳಲ್ಲಿ ಅತಿಪ್ರಸಂಗವು ಕೂಡದು; ಅದರಿಂದ ಪ್ರಯೋಕ್ತೃಗಳಿಗೂ ಪ್ರೇಕ್ಷಕರಿಗೂ ಬೇಸರವಾಗುವುದು; ಬೇಸರವಾದರೆ ರಸಭಾವಗಳು ಸ್ಪಷ್ಟವಾಗಿ ಆಗುವುದಿಲ್ಲ.

## ನಾಟ್ಯ—"ರಂಗಸಂಗ್ರಹ."

ನಾಟ್ಯಕ್ಕೆ ರಸ ಭಾವ ಅಭಿನಯ ಧರ್ಮಿ ವೃತ್ತಿ ಪ್ರವೃತ್ತಿ ಸಿದ್ಧಿ ಸ್ವರ ಆತೋದ್ಯ ಗಾನ ಎಂದು ಹತ್ತು ಅಂಗಗಳು. ಇವುಗಳನ್ನು ಒಟ್ಟಿಗೆ "ರಂಗಸಂಗ್ರಹ"ವೆಂದು ಕರೆಯುಬಹುದು.*

## ೧-೨ ರಸ ಮತ್ತು ಭಾವಗಳು (ಅ. ೬-೭)

ಆರನೆಯ ಅಧ್ಯಾಯದಲ್ಲಿ ರಸಗಳೂ ಏಳನೆಯ ಅಧ್ಯಾಯದಲ್ಲಿ ಭಾವಗಳೂ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಈ ಭಾಗಗಳ ಮೂಲವೂ ಅದರ ಕನ್ನಡ ಅರ್ಥವೂ ಮುಂದೆ ಬರುವುದರಿಂದ ಅವುಗಳ ವಿವರವನ್ನು ಇಲ್ಲಿ ಹೇಳಿಲ್ಲ.

## ೩. ಅಭಿನಯ (ಅ. ೮-೧೨, ೧೪-೧೯, ೨೧-೨೬)

ಅಭಿನಯವು ಆಂಗಿಕ ವಾಚಿಕ ಆಹಾರ್ಯಕ ಸಾತ್ವಿಕ ಎಂದು ನಾಲ್ಕು ವಿಧ. ನಾಟ್ಯದ ನಾನಾ ಭೇದಗಳೆಲ್ಲಾ ಇದರಲ್ಲಿಯೇ ಅಡಕವಾಗುತ್ತವೆ. (ಇವುಗಳಲ್ಲಿ ಸಾತ್ವಿಕಾಭಿನಯವು ಭಾವಪ್ರಕರಣದಲ್ಲಿಯೇ ಬರುತ್ತದೆ.)

### (೧) ಆಂಗಿಕಾಭಿನಯ (ಅ. ೮-೧೨)

ಆಂಗಿಕಾಭಿನಯವು 'ಶಾರೀರ' 'ಮುಖಜ' 'ಚೇಷ್ಟಾಕೃತ' ಎಂದು ಮೂರು ವಿಧ. ಕೈ ಕಣ್ಣು ಮುಂತಾದ ಅಂಗೋಪಾಂಗಗಳ †

---

* ರಸಾಭಾವಾಹ್ಯಭಿನಯಾ ಧರ್ಮೀವೃತ್ತಿಪ್ರವೃತ್ತಯಃ ।
ಸಿದ್ಧಿಸ್ಸ್ವರಾಸ್ತಥಾತೋದ್ಯಂ ಗಾನಂ ರಂಗಸ್ಯ ಸಂಗ್ರಹಃ ॥ ೬-೧೦ ॥

† ತಸ್ಯ ಶಿರೋಹಸ್ತೋರಃ ಪಾರ್ಶ್ವಕಟೀಪಾದತಃ ಷಡಂಗಾನಿ ।
ನೇತ್ರಭ್ರೂನಾಸಾಧರ ಕಪೋಲ ಚಿಬುಕಾನ್ಯುಪಾಂಗಾನಿ ॥ ೮-೧೨ ॥

ಚಲನೆಗಳು ಶಾರೀರ ಮತ್ತು ಮುಖಜ; ಸಂಚಾರಿ ಕರಣ ಖಂಡ * ಮಂಡಲ ಮುಂತಾದ ನೃತ್ತ ವಿಶೇಷಗಳು † ಮತ್ತು 'ಗತಿಗಳು' ಚೇಷ್ಟಾಕೃತ. ಇವುಗಳ ಲಕ್ಷಣ ವಿನಿಯೋಗ ಇವು ೮–೧೨ ಅಧ್ಯಾಯಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ.

## (೨) ವಾಚಿಕಾಭಿನಯ (ಅ. ೧೪–೧೯)

### ಛಂದಸ್ಸು—ಸಂಸ್ಕೃತಪಾಠ್ಯ (ಅ. ೧೪–೧೬)

ಹದಿನಾಲ್ಕು ಮತ್ತು ಹದಿನೈದನೆಯ ಅಧ್ಯಾಯಗಳು ಛಂದಸ್ಸನ್ನು ಹೇಳುತ್ತವೆ. ಈ ಭಾಗದಲ್ಲಿ 'ಉಕ್ತಿ' ಮುಂತಾದ ಸಮ ಅರ್ಧಸಮ ವಿಷಮವೃತ್ತಗಳು ಆರ್ಯಾಭೇದಗಳು ಇವುಗಳ ಲಕ್ಷಣ ಉದಾಹರಣೆ ಇವೆಲ್ಲಾ ಕೊಡಲ್ಪಟ್ಟಿವೆ. ಇಲ್ಲಿ ಗಮನಿಸಬೇಕಾದ ಎರಡು ಅಂಶಗಳಿವೆ:—(೧) ಉದಾಹರಣೆಗಳೆಲ್ಲಾ ಪ್ರಾಯಶಃ ಸ್ತ್ರೀ ಸಂಬಂಧವಾಗಿ ಶೃಂಗಾರಾತ್ಮಕವಾಗಿವೆ. (೨) ಈಗಿನ ಮಹಾಕಾವ್ಯಗಳಲ್ಲಿಯೂ ನಾಟಕಗಳಲ್ಲಿಯೂ ಪ್ರಸಿದ್ಧವಾಗಿಲ್ಲದಿರುವ ವೃತ್ತಗಳೇ ಹೆಚ್ಚು.

### ಲಕ್ಷಣ ಅಲಂಕಾರ ಗುಣದೋಷಗಳು

ಹದಿನಾರನೆಯ ಅಧ್ಯಾಯದಲ್ಲಿ ೩೬ 'ಲಕ್ಷಣಗಳೂ'§ ಉಪಮಾ

---

* ರತ್ನಾವಳೀನಾಟಿಕೆಯಲ್ಲಿ "ದ್ವಿಪದೀಖಂಡ" ವೆಂಬ ನೃತ್ತವು ಬರುತ್ತದೆ.

† ಏಕಪಾದೇ ಪ್ರಚಾರೋ ಯಃ ಸಂಚಾರೀತ್ಯಭಿಧೀಯತೇ ।
ದ್ವಿಪಾದಪ್ರವಣಂ ಯತ್ತು ಕರಣಂ ನಾಮ ತದ್ಭವೇತ್ ॥
ಕರಣಾನಾಂ ಸಮಾಯೋಗಃ ಖಂಡ ಇತ್ಯಭಿಧೀಯತೇ ।
ಖಂಡೈಸ್ತ್ರಿಭಿಶ್ಚತುರ್ಭಿರ್ವಾ ಸಂಯುಕ್ತಂ ಮಂಡಲಂ ಭವೇತ್
॥ ೧೦–೨, ೩ ॥

§ ವಿಭೂಷಣ ಅಕ್ಷರಸಂಗತಿ ಶೋಭಾ ಅಭಿಮಾನ ಗುಣಕೀರ್ತನ ವಿಶೇಷಣ ಉದಾಹರಣ ನಿರುಕ್ತ ಗುಣಾನುವಾದ ಅತಿಶಯ ಹೇತು ಸಾರೂಪ್ಯ ಮಿಥ್ಯಾಧ್ಯವಸಾಯ ಸಿದ್ಧಿ ಪದೋಚ್ಚಯ ಆಕ್ರಂದ ಮನೋರಥ ಆಖ್ಯಾನ ಯಾಚ್ಞಾ ಪ್ರತಿಷೇಧ ಪೃಚ್ಛಾ ದೃಷ್ಟಾಂತ ಭಾಸನ ಸಂಶಯ ಆಶೀಃ ಪ್ರಿಯ ಕಪಟಸಂಘಾತ ಕ್ಷಮಾ ಪ್ರಾಪ್ತಿ ಪಶ್ಚಾತ್ತಾಪ ಅನುವೃತ್ತಿ ಉಪಪತ್ತಿ ಯುಕ್ತಿ ಕಾರ್ಯ ಅನುನೀತಿ ಪರಿದೇವನ. (ಅ. ೧೬ ಶ್ಲೋ. ೮–೪).

ದೀಪಕ ರೂಪಕ ಯಮಕ ಎಂಬ ನಾಲ್ಕೇ ನಾಲ್ಕು ಅಲಂಕಾರಗಳೂ,* ಹತ್ತು ಕಾವ್ಯ ದೋಷಗಳೂ,† ಹತ್ತು ಕಾವ್ಯಗುಣಗಳೂ§ ರಸಾನುಸಾರಿಯಾದ ಇವುಗಳ ಪ್ರಯೋಗವೂ ಹೇಳಲ್ಪಟ್ಟಿವೆ. ಈ ಭಾಗವೂ ಅಲಂಕಾರ ಶಾಸ್ತ್ರಕ್ಕೆ ಸಾಕ್ಷಾತ್ತಾಗಿ ಸಂಬಂಧಪಟ್ಟಿರುವುದರಿಂದ ಇದರ ಮೂಲವೂ ಕನ್ನಡ ಭಾಷಾಂತರವೂ ಮುಂದೆ ಬರುತ್ತದೆ.

ಪ್ರಾಕೃತಪಾಠ್ಯ (ಅ. ೧೭)

"ಸಂಸ್ಕಾರ ಗುಣವರ್ಜಿತ"ವಾದದ್ದು ಪ್ರಾಕೃತ; ಸಮಾನ ವಿಭ್ರಷ್ಟ ದೇಶೀ ಎಂದು ಶಬ್ದಗಳು ಮೂರು ವಿಧ; ಕೆಲವು ನಿಯಮಗಳನ್ನನುಸರಿಸಿ ಸಂಸ್ಕೃತದಿಂದ ಶಬ್ದಗಳು 'ಅಪಭ್ರಂಶ' (ವಿಭ್ರಷ್ಟ)ಗಳಾಗುತ್ತವೆ. (ಆ ನಿಯಮಗಳು ಕೊಡಲ್ಪಟ್ಟಿವೆ). ನಾಟ್ಯಭಾಷೆಯು ಅತಿಭಾಷೆ ಆರ್ಯಭಾಷೆ ಜಾತಿಭಾಷೆ ಜಾತ್ಯಂತರ ಭಾಷೆ ಎಂದು ನಾಲ್ಕುವಿಧ; ಅತಿಭಾಷೆಯು ದೇವತೆಗಳದು; ಆರ್ಯಭಾಷೆಯು ರಾಜರದು; ಜಾತಿಭಾಷೆಯು ಊರುಕೇರಿಗಳಲ್ಲಿ ಪ್ರಚಾರದಲ್ಲಿರುವುದು. ಜಾತ್ಯಂತರೀ ಭಾಷೆಯು ನಾಟ್ಯಧರ್ಮಿಯನ್ನನುಸರಿಸಿ ಮೃಗಪಕ್ಷಿಗಳು ಉಪಯೋಗಿಸತಕ್ಕದ್ದು. ಜಾತಿ ಭಾಷೆಯು ಸಂಸ್ಕೃತ ಪ್ರಾಕೃತವೆಂದು ಎರಡು ವಿಧ. ರಾಜರು ಮುಂತಾದವರಿಗೆ ಸಂಸ್ಕೃತ 'ಪಾಠ್ಯ' ವನ್ನೂ ಹುಡುಗರು

---

* ಉಪಮಾ ದೀಪಕಂ ಚೈವ ರೂಪಕಂ ಯಮಕಂ ತಥಾ ।
ಕಾವ್ಯಸ್ಯೈತೇ ಹ್ಯಲಂಕಾರಾಶ್ಚತ್ವಾರಃ ಪರಿಕೀರ್ತಿತಾಃ ॥೧೭-೪೧॥

† ಗೂಢಾರ್ಥಮರ್ಥಾಂತರಮರ್ಥಹೀನಂ ಭಿನ್ನಾರ್ಥಮೇಕಾರ್ಥಮಭಿಪ್ಲುತಾರ್ಥಂ ।
ನ್ಯಾಯಾದಪೇತಂ ವಿಷಮಂ ವಿಸಂಧಿ ಶಬ್ದಚ್ಯುತಂ ವೈ ದಶ ಕಾವ್ಯದೋಷಾಃ ॥೧೭-೮೪॥

§ ಶ್ಲೇಷಃ ಪ್ರಸಾದಃ ಸಮತಾ ಸಮಾಧಿ ಮಾಧುರ್ಯಮೋಜಃ ಪದಸೌಕುಮಾರ್ಯಂ ।
ಅರ್ಥಸ್ಯ ಚ ವ್ಯಕ್ತಿರುದಾರತಾ ಚ ಕಾಂತಿಶ್ಚ ಕಾವ್ಯಾರ್ಥಗುಣಾ ದಶೈತೇ ॥೧೭-೯೨॥

ಹೆಂಗಸರು ಮುಂತಾದವರಿಗೆ ಪ್ರಾಕೃತ 'ಪಾಠ್ಯ' ವನ್ನೂ ಕೊಡಬೇಕು. (ಪ್ರಾಕೃತ) ಭಾಷೆಗಳು ಮಾಗಧಿ ಅವಂತಿಜಾ ಪ್ರಾಚ್ಯಾ ಶೂರಸೇನೀ ಮಾಗಧೀ ಬಾಹ್ಲೀಕಾ ದಾಕ್ಷಿಣಾತ್ಯಾ ಎಂದು ಏಳು ವಿಧ. * ಇವುಗಳನ್ನು ನಾಟಕದಲ್ಲಿ ಪಾತ್ರಗಳನ್ನನುಸರಿಸಿ ಉಪಯೋಗಿಸಬೇಕು; ಮತ್ತು ಆಯಾ ಪಾತ್ರಗಳನ್ನನುಸರಿಸಿ ಅವರವರ ಹೆಸರು ಒಬ್ಬರು ಮತ್ತೊಬ್ಬರನ್ನು ಸಂಬೋಧಿಸುವ ರೀತಿ ಇವುಗಳನ್ನು ಕವಿಯು ನಿಷ್ಕರ್ಷಿಸಬೇಕು.

ಪಾಠ್ಯಗುಣಗಳು : ಇವು ಯಾವುವೆಂದರೆ,

ಸ್ವರಗಳು (೭)—ಸ ರಿ ಗ ಮ ಇತ್ಯಾದಿ.

ಸ್ಥಾನಗಳು (೩)—ಉರಸ್ಸು, ಕಂಠ, ಶಿರಸ್ಸು.

ವರ್ಣಗಳು (೪)—ಉದಾತ್ತ, ಅನುದಾತ್ತ, ಸ್ವರಿತ, ಕಂಪಿತ.

ಕಾಕುಗಳು (೨)—ಸಾಕಾಂಕ್ಷಾ, ನಿರಾಕಾಂಕ್ಷಾ.

ಅಲಂಕಾರಗಳು (೬)—ಉಚ್ಚ, ದೀಪ್ತ, ಮಂದ್ರ, ನೀಚ, ಹ್ರಸ್ವ, ವಿಲಂಬಿತ.

ಅಂಗಗಳು (೬)—ವಿಚ್ಛೇದ, ಉಪಸರ್ಪಣ, ವಿಸರ್ಗ, ಅನುಬಂಧ, ದೀಪನ, ಪ್ರಶಮನ. (ಇವುಗಳ ಅರ್ಥವನ್ನೂ ಪ್ರಯೋಗವನ್ನೂ ಮೂಲ ಗ್ರಂಥದಿಂದ ತಿಳಿದುಕೊಳ್ಳಬಹುದು.) ಇವುಗಳೆಲ್ಲವನ್ನೂ ರಸಾನುಗುಣವಾಗಿ ಉಪಯೋಗಿಸಬೇಕು.

ವಿರಾಮ :—ಇದರಂತೆಯೇ ವಿರಾಮವನ್ನೂ (ಮಾತನ್ನು ನಿಲ್ಲಿಸುವಿಕೆ) ಸರಿಯಾಗಿ ಉಪಯೋಗಿಸಬೇಕು. ಅದು ಅರ್ಥವನ್ನು ಚೆನ್ನಾಗಿ ತಿಳಿಸುತ್ತದೆ.

ದಶರೂಪಕಗಳು :—ಹದಿನೆಂಟನೆಯ ಅಧ್ಯಾಯದಲ್ಲಿ ನಾಟಕ ಮುಂತಾದ ಹತ್ತು ರೂಪಕಗಳೂ ಅವುಗಳ ಲಕ್ಷಣವೂ ಹೇಳಲ್ಪಟ್ಟವೆ. †

---

* ಮಾಗಧ್ಯವಂತಿಜಾ ಪ್ರಾಚ್ಯಾ ಶೂರಸೇನ್ಯರ್ಧಮಾಗಧೀ ।
ಬಾಹ್ಲೀಕಾ ದಾಕ್ಷಿಣಾತ್ಯಾಚ ಸಪ್ತಭಾಷಾಃ ಪ್ರಕೀರ್ತಿತಾಃ ॥ ೧೭–೪೮ ॥

† ಈ ಅಧ್ಯಾಯದಲ್ಲಿಯೂ ಪುನಃ ಛಂದಸ್ಸೂ ಅದರ ಭೇದಗಳೂ ಹೇಳಲ್ಪಟ್ಟವೆ. ಈ ಭಾಗವು ಪ್ರಾಯಶಃ ಪ್ರಕ್ಷಿಪ್ತವಾಗಿರಬಹುದು.

ಇತಿವೃತ್ತ (ಅ. ೧೯):—ನಾಟ್ಯಶರೀರಕ್ಕೆ 'ಇತಿ ವೃತ್ತ' ವೆಂದು ಹೆಸರು. ಇದು ಆಧಿಕಾರಿಕ (ಉದ್ದಕ್ಕೂ ಬರತಕ್ಕ ಮುಖ್ಯವಾದ ಕಥೆ) ಪ್ರಾಸಂಗಿಕ (ಮಧ್ಯೆ ಬಂದು ಹೋಗುವ ಸಣ್ಣ ಕಥೆ) ಎಂದು ಎರಡು ವಿಧ. ಇದರಲ್ಲಿ ಪ್ರಾರಂಭ ಪ್ರಯತ್ನ ಮುಂತಾದ ಐದು "ಅವಸ್ಥೆ"ಗಳು, ಬೀಜ ಬಿಂದು ಮುಂತಾದ ಐದು "ಅರ್ಥಪ್ರಕೃತಿಗಳು", ಮುಖ ಪ್ರತಿಮುಖ ಮುಂತಾದ ಐದು "ಸಂಧಿಗಳು", ಈ ಸಂಧಿಗಳ ಅಂಗಗಳು, ಸಂಧ್ಯಂತರಗಳು ಇವೆಲ್ಲಾ ಇವೆ. (ಬೇಕಾದವರು ಮೂಲಗ್ರಂಥವನ್ನು ನೋಡಿ ಇವುಗಳ ಲಕ್ಷಣಗಳನ್ನು ತಿಳಿದುಕೊಳ್ಳಬಹುದು.)

## (೩) ಆಹಾರ್ಯಾಭಿನಯ (ಅ. ೨೧)

ಆಹಾರ್ಯಾಭಿನಯವೆಂದರೆ "ನೇಪಥ್ಯಜವಿಧಿ" —ನಾಟ್ಯಪ್ರದರ್ಶನಕ್ಕೆ ಬೇಕಾದ ವೇಷ ಭೂಷಾದಿಗಳ ರಚನೆ. ನೇಪಥ್ಯವು ಪುಸ್ತ, ಅಲಂಕಾರ, ಅಂಗರಚನಾ, ಸಜ್ಜೀವ ಎಂದು ನಾಲ್ಕುವಿಧ.

ಪುಸ್ತ: —ನಾಟ್ಯಕ್ಕೋಸ್ಕರವಾಗಿ ಮಾಡುವ ವಾಹನ ವಿಮಾನಾದಿಗಳೂ ಬಂಡೆ ಬೆಟ್ಟಗಳೂ ಧ್ವಜಕವಚಾದಿಗಳೂ ಪುಸ್ತ. ಇದು ಸಂಧಿಮ ವ್ಯಾಜಿಮ ವೇಷ್ಟಿತ ಎಂದು ಮೂರು ವಿಧ. ಹಲಗೆ ಚರ್ಮ ಬಟ್ಟೆ ಇವುಗಳನ್ನು ಸೇರಿಸಿ ಆಯಾ ಪದಾರ್ಥಗಳ ಆಕಾರ ರೂಪಗಳನ್ನುಂಟುಮಾಡುವುದು 'ಸಂಧಿಮ'; ಯಂತ್ರಗಳಿಂದ ಮಾಡುವುದು 'ವ್ಯಾಜಿಮ'; ಬಟ್ಟೆಗಳನ್ನು ಸುತ್ತಿಮಾಡುವುದು 'ವೇಷ್ಟಿತ'.

ಅಲಂಕಾರ :—ಅಲಂಕಾರವೆಂದರೆ ಅಂಗೋಪಾಂಗಗಳಲ್ಲಿ ಹಾಕಿಕೊಳ್ಳುವ ಮಾಲ್ಯ ಆಭರಣ ಉಡುಪು ಇವು. ಇವುಗಳಲ್ಲಿ ಮಾಲ್ಯವು, ವಿಷ್ಟಿಮ ವಿತತ ಸಂಘಾತ್ಯ ತೇಪಿತ ಪ್ರಲಂಬಿತ ಎಂದು ಐದು ವಿಧ. ಆಭರಣವು ಆವೇಧ್ಯ (ಕುಂಡಲ ಮುಂತಾದ್ದು) ಬಂಧನೀಯ (ಡಾಬು ಮುಂತಾದ್ದು) ಕ್ಷೇಪ್ಯ (ನೂಪುರ ಮುಂತಾದ್ದು) ಆರೋಪ್ಯಕ (ವಸ್ತ್ರ ಮುಂತಾದ್ದು) ಎಂದು ನಾಲ್ಕು ವಿಧ.

ಇವುಗಳಲ್ಲದೆ ಕಟಕ ಮುಕುಟ ಮುಂತಾದ ಅನೇಕ ಆಭರಣ

ಗಳಿವೆ. ಅವುಗಳಲ್ಲಿ ಒಂದೊಂದನ್ನು ಒಂದೊಂದು ದೇಶದಲ್ಲಿ ಧರಿಸುತ್ತಾರೆ. ಇವುಗಳನ್ನು ಔಚಿತ್ಯವರಿತು ನಾಟ್ಯದಲ್ಲಿ ಉಪಯೋಗಿಸಬೇಕು. *

## ಅಂಗರಚನಾ

### ೧. ಬಣ್ಣಗಳು ಮತ್ತು ಅವುಗಳ ಉಪಯೋಗ

ಬಣ್ಣವು ಸ್ವಭಾವಜ, ಸಂಯೋಗಜ, ಉಪವರ್ಣ ಎಂದು ಮೂರು ವಿಧ. ಬಿಳುಪು ಕಪ್ಪು ಹಳದಿ ಕೆಂಪು ಇವು ಸ್ವಭಾವಜ; ಬಿಳುಪು ಹಳದಿ ಸೇರಿ ಆಗುವುದು ಪಾಂಡುವರ್ಣ; ಬಿಳುಪು ಕೆಂಪು ಸೇರಿ ಆಗುವುದು ಪದ್ಮವರ್ಣ; ಬಿಳುಪು ಕಪ್ಪು ಸೇರಿ ಆಗುವುದು ಕಾಪೋತವರ್ಣ; ಹಳದಿ ಕಪ್ಪು ಸೇರಿ ಆಗುವುದು ಹರಿತವರ್ಣ; ಕಪ್ಪು ಕೆಂಪು ಸೇರಿ ಆಗುವುದು ಕಾಷಾಯ ವರ್ಣ; ಕೆಂಪು ಹಳದಿ ಸೇರಿ ಆಗುವುದು ಗೌರ ವರ್ಣ—ಇವಿಷ್ಟೂ ಸಂಯೋಗಜ. ಇವಲ್ಲದೆ ಮೂರು ನಾಲ್ಕು ಬಣ್ಣಗಳು ಸೇರಿ ಆಗುವ ಉಪವರ್ಣಗಳು ಬಹಳವಾಗಿವೆ. ಇವುಗಳ ಸ್ವಭಾವವನ್ನೂ ಉಪಯೋಗವನ್ನೂ ತಿಳಿದುಕೊಂಡು ಆಯಾ ಪಾತ್ರಗಳ ದೇಶ ಜಾತಿ ವಯಸ್ಸು ಮುಂತಾದವುಗಳಿಗೆ ಅನುಗುಣವಾಗಿ ಉಪಯೋಗಿಸಬೇಕು. ಉದಾ—ರುದ್ರನಿಗೆ ಕೆಂಪು, ಬೃಹಸ್ಪತಿಗೆ ಬ್ರಾಹ್ಮಣರಿಗೆ ಕ್ಷತ್ರಿಯರಿಗೆ ಬಿಳುಪು; ಆಂಧ್ರರಿಗೂ ದ್ರಾವಿಡರಿಗೂ ಕಪ್ಪು; ಋಷಿಗಳಿಗೆ ಎಲಚಿಯ ಹಣ್ಣಿನ ಬಣ್ಣ.

### ೨. ಶ್ಮಶ್ರುಕರ್ಮ—(ಗಡ್ಡ ಮೀಸೆಗಳು)

ಗಡ್ಡ ಮೀಸೆಗಳನ್ನು ಪಾತ್ರಗಳ ದೇಶ ಕಾಲ ವಯಸ್ಸು ಮುಂತಾದವುಗಳಿಗೆ ಅನುಗುಣವಾಗಿ ಉಪಯೋಗಿಸಬೇಕು. ಇವು ಶುದ್ಧ ವಿಚಿತ್ರ ಶ್ಯಾಮ ರೋಮಶ ಎಂದು ನಾಲ್ಕು ವಿಧ. ಮಂತ್ರಿ ಪುರೋಹಿತಾದಿಗಳಿಗೆ ಶುದ್ಧ; ದುಃಖಿತರಾದವರಿಗೆ ಶ್ಯಾಮ; ರಾಜಕುಮಾರರು ಶೃಂಗಾರಿಗಳು ಮುಂತಾದವರಿಗೆ ವಿಚಿತ್ರ; ಋಷಿಗಳು ಬದ್ಧ ವೈರ

---

* ಅದೇಶಯುಕ್ತೋ ವೇಷೋ ಹಿ ನ ಶೋಭಾಂ ಜನಯಿಷ್ಯತಿ ।
ಮೇಖಲೋರಸಿ ಬದ್ಧೇವ ಹಾಸ್ಯಂ ಸಮುಪಪಾದಯೇತ್ ॥ ೨೧–೫೩ ॥

ವುಳ್ಳವರು ಮುಂತಾದವರಿಗೆ ರೋಮಶ—ಹೀಗೆ ಇವುಗಳನ್ನು ಉಪ ಯೋಗಿಸಬೇಕು.

೩. ವೇಷ—(ವಸ್ತ್ರವಿಧಿ)

ವೇಷವು ಶುದ್ಧ ಮಲಿನ ವಿಚಿತ್ರ ಎಂದು ಮೂರು ವಿಧ. ದೇವ ದಾನವರು, ರಾಜಮಂತ್ರಿಗಳು ಮುಂತಾದವರಿಗೆ ಶುದ್ಧ; ಪ್ರಮತ್ತರು ಪ್ರಯಾಣಿಕರು ಮುಂತಾದವರಿಗೆ ಮಲಿನ; ಹೀಗೆಯೇ ವಿಚಿತ್ರವನ್ನು "ಲೋಕಸ್ವಭಾವ"ವನ್ನು ಅನುಸರಿಸಿ ಉಪಯೋಗಿಸಬೇಕು. ಉದಾ–ಋಷಿಗಳಿಗೆ ಚೀರವಲ್ಕಲಾದಿಗಳು; ಶೂರರಿಗೆ ಯುದ್ಧ ಯೋಗ್ಯವಾದವು ಗಳು, ಇತ್ಯಾದಿ.

ಸಜ್ಜೀವ— ನಾಟ್ಯದಲ್ಲಿ ಪ್ರದರ್ಶಿಸಬೇಕಾಗುವ ಪ್ರಾಣಿಗಳ ರಚ ನೆಗೆ 'ಸಜ್ಜೀವ'ವೆಂದು ಹೆಸರು. ಇವು ಚತುಷ್ಪದ ದ್ವಿಪದ ಅಪದ (ಕಾಲಿಲ್ಲದ್ದು) ಎಂದು ಮೂರು ವಿಧ; ಇವುಗಳನ್ನು ಯುದ್ಧ (ಕ್ರೂರ ಮೃಗಾದಿಗಳ) ಹಿಂಸೆ ಮುಂತಾದವುಗಳಲ್ಲಿ ಉಪಯೋಗಿಸಬೇಕು.

(ಇದಾದ ಮೇಲೆ ನಾನಾ ಆಯುಧಗಳು ಅವುಗಳ ಪ್ರಮಾಣ, ಜರ್ಜರ ದಂಡಕಾಷ್ಠ ಇವುಗಳ ಲಕ್ಷಣ ಇವು ಹೇಳಲ್ಪಟ್ಟಿವೆ.)

ನಾಟ್ಯೋಪಕರಣಗಳು—ಲೋಕದಲ್ಲಿರುವ ನಾನಾ ಪದಾರ್ಥಗ ಳನ್ನು ಅನುಕರಣಮಾಡಿ ಆ ಪದಾರ್ಥಗಳಿಗೆ ಬದಲಾಗಿ ನಾಟ್ಯದಲ್ಲಿ ಪ್ರದರ್ಶಿಸುವ ವಸ್ತುಗಳಿಗೆ 'ನಾಟ್ಯೋಪಕರಣ'ಗಳೆಂದು ಹೆಸರು. ಮನೆ ಮಠ ವಾಹನ ಮುಂತಾದವುಗಳನ್ನೆಲ್ಲ ಸಾಕ್ಷಾತ್ತಾಗಿ ರಂಗಕ್ಕೆ ತರುವುದಕ್ಕಾಗುವುದಿಲ್ಲ. ಆದ್ದರಿಂದ ನಾಟ್ಯಧರ್ಮಿಯನ್ನನುಸರಿಸಿ ಇವು ಗಳನ್ನೆಲ್ಲಾ ಕೃತ್ರಿಮವಾಗಿ ಮಾಡಿಕೊಳ್ಳಬೇಕು. ಇವುಗಳನ್ನು ಎಂದೂ ಕಬ್ಬಿಣದಿಂದಾಗಲಿ ಗಟ್ಟಿಯಾಗಿರುವಂತಾಗಲಿ ಮಾಡಬಾರದು; ಏಕೆಂ ದರೆ ಅವು ಭಾರವೂ ಆಯಾಸಕರವೂ ಆಗುತ್ತವೆ. ಆದ್ದರಿಂದ ಬೆಟ್ಟ ಗುಡಿ ಆನೆ ಕುದುರೆ ಮುಂತಾದವುಗಳನ್ನು ಬಟ್ಟೆ ಚರ್ಮ ಬಿದಿರುದೆಬ್ಬೆ ಗಳು ಇವುಗಳಿಂದ ಹಗುರವಾಗಿರುವ ಹಾಗೆ ಮಾಡಬೇಕು—ಮೊದಲು ಬಿದಿರಿನಿಂದ ಮಾಡಿ ಅದನ್ನು ಹುಲ್ಲುಸೊಪ್ಪುಗಳಿಂದ ಮುಚ್ಚಿ, ಆಮೇಲೆ ಬಟ್ಟೆಗಳಿಂದಾಗಲಿ ಓಲೆಗರಿಗಳಿಂದಾಗಲಿ ತೆಳ್ಳಗಿರುವ ಹಲಗೆಗಳಿಂದಾ

ಗಲಿ ಬೇಕಾದ ಆಕಾರರೂಪಗಳಿಗೆ ತಂದುಕೊಳ್ಳಬೇಕು. ಆಭರಣ ಗಳನ್ನು ಬಂಗಾರ ರತ್ನ ಇವುಗಳಿಂದ ಮಾಡಬಾರದು. ಯುದ್ಧದಲ್ಲಿ ಯಾಗಲಿ ನೃತ್ಯದಲ್ಲಿ ಮೂರ್ಛೆಯನ್ನು ಅಭಿನಯಿಸುವಾಗಾಗಲಿ ಇಂಥವು ಗಳಿಂದ ಅಪಾಯವಾಗಬಹುದು. ಆದ್ದರಿಂದ ಇವುಗಳನ್ನು ಯಾವಾ ಗಲೂ ಅಭ್ರಕ (ಕಾಗೆ ಬಂಗಾರ) ಮೇಣ ಬೆಂಡು ಅರಗು ಮುಂತಾದವು ಗಳಿಂದ ಮಾಡಬೇಕು.

ಇವಿಷ್ಟೇ ಅಲ್ಲದೆ ಬುದ್ಧಿಯನ್ನು ಉಪಯೋಗಿಸಿ ಲೋಕಾನುಸಾರ ವಾಗಿರುವ ನಾನಾ ನಾಟ್ಯೋಪಕರಣಗಳನ್ನು ಒದಗಿಸಿಕೊಳ್ಳಬಹುದು.

### ಸಾಮಾನ್ಯಾಭಿನಯ ಇತ್ಯಾದಿ (ಅ. ೨೨–೨೪)

ಮುಂದಿನ ಮೂರು ಅಧ್ಯಾಯಗಳಲ್ಲಿ ವಾಚಿಕ ಆಂಗಿಕ ಸಾತ್ವಿಕ ರೂಪವಾದ ' ಸಾಮಾನ್ಯಾಭಿನಯ ', ಸತ್ವಕ್ಕೂ ಭಾವ ಹಾವ ಹೇಲಾ ಇವುಗಳಿಗೂ ಇರುವ ಸಂಬಂಧ* ಅವುಗಳ ಪ್ರಭೇದಗಳು ಮತ್ತು ಸ್ವರೂಪ, ನಾಯಕ ನಾಯಿಕೆಯರ ಭೇದಗಳು ಶೀಲ ಪ್ರಕೃತಿಗಳು ಅವರ ಲಕ್ಷಣ ಮತ್ತು ಪರಿವಾರ, ಸೂತ್ರಧಾರ ಪಾರಿಪಾರ್ಶ್ವಕ ಮುಂತಾ ದವರ ಗುಣಗಳು, ರಂಗದಲ್ಲಿ ಪ್ರತ್ಯಕ್ಷವಾಗಿ ಅಭಿನಯಿಸಬಾರದ ಸಂಗತಿ ಗಳು ಇವು ನಿರೂಪಿಸಲ್ಪಟ್ಟಿವೆ.

### ಚಿತ್ರಾಭಿನಯ (ಅ. ೨೫)

ಅಂಗಾಭಿನಯವಿಶೇಷಗಳಿಗೆ ಎಂದರೆ ಬಾಹ್ಯವಸ್ತುಗಳನ್ನು ಸೂಚಿಸುವ ಅಂಗಾಭಿನಯಗಳಿಗೆ 'ಚಿತ್ರಾಭಿನಯ'ವೆಂದು ಹೆಸರು. ಅಂಗಾಭಿನಯಗಳು ಆಂತರಿಕವಾದ ಭಾವಗಳಿಗೆ ಸೂಚಕಗಳಾಗುವು ವಲ್ಲದೆ (ಚಂದ್ರ ಸೂರ್ಯ ಹುಲಿ ಕರಡಿ ವಸಂತ ಹೇಮಂತ ಮುಂತಾದ) ಬಾಹ್ಯವಸ್ತುಗಳಿಗೂ ಸಂಕೇತಗಳಾಗುವುವು. ಇವುಗಳ ವಿವರ, ಹರ್ಷಾದಿಭಾವಗಳಿಗೆ ಅನುರೂಪವಾದ ಅಭಿನಯಗಳು, 'ಆಕಾಶವಚನ'

---

* ದೇಹಾತ್ಮಕಂ ಭವೇತ್ಸತ್ವಂ ಸತ್ವಾದ್ಭಾವಾಸ್ಸಮುತ್ಥಿತಾಃ ।
ಭಾವಾತ್ಸಮುತ್ಥಿತೋ ಹಾವೋ ಹಾವಾದ್ಧೇಲಾ ಸಮುತ್ಥಿತಾ ॥೨೨–೭॥

'ಜನಾಂತಿಕ' ಮುಂತಾದವುಗಳನ್ನು ಅಭಿನಯಿಸುವ ರೀತಿ ಇವೂ ಈ ಅಧ್ಯಾಯದಲ್ಲಿಯೇ ಹೇಳಲ್ಪಟ್ಟಿವೆ.

## ಪ್ರಕೃತಿ ವಿಕಲ್ಪನ (ಅ. ೨೬)

ಪ್ರಕೃತಿಯು ಅನುರೂಪಾ ವಿರೂಪಾ ರೂಪಾನುರೂಪಿಣೀ ಎಂದು ಮೂರುವಿಧ. ಹೆಂಗಸು ತನ್ನ ವಯಸ್ಸಿಗೆ ಅನುಗುಣವಾದ ಸ್ತ್ರೀ ಭಾವಗಳನ್ನು ಅಭಿನಯಿಸುವುದೂ ಗಂಡಸು ತನ್ನ ವಯಸ್ಸಿಗೆ ಅನುಗುಣವಾದ ಪುರುಷ ಭಾವಗಳನ್ನು ಅಭಿನಯಿಸುವುದೂ ಅನುರೂಪ. ಮುದುಕರು ಹುಡುಗರಂತೆ ಅಭಿನಯಿಸುವುದೂ ಹುಡುಗರು ಮುದುಕರಂತೆ ಅಭಿನಯಿಸುವುದೂ ವಿರೂಪಾ. ಗಂಡಸು ಹೆಂಗಸಿನ ಭಾವವನ್ನು ಅಭಿನಯಿಸುವುದು ರೂಪಾನುರೂಪಾ.

## ೪. ಧರ್ಮೀ (ಅ. ೧೩). *

"ಧರ್ಮಿ"ಯು ಲೋಕಧರ್ಮೀ ನಾಟ್ಯಧರ್ಮೀ ಎಂದು ಎರಡು ವಿಧ. ಲೋಕದ ನಡೆವಳಿಕೆಯನ್ನು ಅನುಸರಿಸಿ ಗದ್ಯದಲ್ಲಿ ಮಾತನಾಡುವುದು ಸ್ವಾಭಾವಿಕವಾಗಿ ನಡೆದಾಡುವುದು ಇವೆಲ್ಲಾ 'ಲೋಕಧರ್ಮಿ'. ತನ್ನ ಅಭಿಪ್ರಾಯವನ್ನು ಗಾನಮಾಡಿ ತಿಳಿಸುವುದು, ನರ್ತನಮಾಡಿಕೊಂಡು ತಿರುಗಾಡುವುದು, ಗಟ್ಟಿಯಾಗಿ ಹೇಳಿದ ಮಾತಾದರೂ ಅದನ್ನು ಕೇಳದಿರುವುದು, ಕೃತ್ರಿಮವಾದ ಆಯುಧ ಬೆಟ್ಟ ಗುಡ್ಡ ವಿಮಾನ ಇವೆಲ್ಲಾ 'ನಾಟ್ಯಧರ್ಮಿ.'

## ೫. ವೃತ್ತಿ (ಅ. ೨೦).

'ವೃತ್ತಿ'ಯೆಂದರೆ ಕಾವ್ಯ ನಾಟ್ಯಗಳಲ್ಲಿ ಅನುಸರಿಸುವ ರೀತಿಯೆಂದು ಹೇಳಬಹುದು. ಇದು ಭಾರತೀ ಸಾತ್ವತೀ ಕೈಶಿಕೀ ಆರಭಟೀ ಎಂದು ನಾಲ್ಕು ವಿಧ. ಮುಂದಿನ ಶ್ಲೋಕಗಳು ಇವುಗಳ ಲಕ್ಷಣವನ್ನು ತಿಳಿಸುತ್ತವೆ.

---

* ಧರ್ಮೀವೃತ್ತಿಪ್ರವೃತ್ತಿಗಳು ಅಭಿನಯಭಾಗದ ಮಧ್ಯದಲ್ಲಿ ಹದಿಮೂರು ಮತ್ತು ಇಪ್ಪತ್ತನೆಯ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿವೆ. ಅವುಗಳನ್ನು ಬೇರೆ ಮಾಡಿ "ರಂಗಸಂಗ್ರಹ"ವನ್ನು ಹೇಳಿರುವ ಶ್ಲೋಕದಲ್ಲಿ ಉಕ್ತವಾದ ಕ್ರಮವನ್ನು ಅನುಸರಿಸಿ ಇಲ್ಲಿ ಸೂಚಿಸಿದ್ದೇನೆ.

ಯಾ ವಾಕ್ಪ್ರಧಾನಾ ಪುರುಷಪ್ರಯೋಜ್ಯಾ ಸ್ತ್ರೀವರ್ಜಿತಾ ಸಂಸ್ಕೃತವಾಚ್ಯಯುಕ್ತಾ ।
ಸ್ವನಾಮಧೇಯೈರ್ಭರತೈಃ ಪ್ರಯುಕ್ತಾ ಸಾ ಭಾರತೀ ನಾಮ ಭವೇತ್ತು ವೃತ್ತಿಃ
॥೨೦–೨೫॥

ಯಾ ಸಾತ್ವತೇನೇಹ ಗುಣೇನ ಯುಕ್ತಾ ನ್ಯಾಯೇನ ವೃತ್ತೇನ ಸಮನ್ವಿತಾ ಚ ।
ಹರ್ಷೋತ್ಕಟಾ ಸಂಹೃತಶೋಕಭಾವಾ ಸಾ ಸಾತ್ವತೀ ನಾಮ ಭವೇತ್ತು ವೃತ್ತಿಃ
॥೨೦–೪೦॥

ಯಾ ಶ್ಲಕ್ಷ್ಣನೇಪಥ್ಯವಿಶೇಷಚಿತ್ರಾ ಸ್ತ್ರೀ ಸಂಯುತಾ ಯಾ ಬಹುನೃತ್ತಗೀತಾ ।
ಕಾಮೋಪಭೋಗಪ್ರಭವೋಪಚಾರಾ ತಾಂ ಕೈಶಿಕೀಂ ವೃತ್ತಿಮುದಾಹರಂತಿ
॥೨೦–೪೭॥

ಪ್ರಸ್ತಾವಪಾತಪ್ಲುತಲಂಘಿತಾನಿ ಛೇದ್ಯಾನಿ ಮಾಯಾಕೃತಮಿಂದ್ರಜಾಲಂ ।
ಚಿತ್ರಾಣಿ ಯುದ್ಧಾನಿ ಚ ಯತ್ರ ನಿತ್ಯಂ ತಾಂ ತಾದೃಶೀಮಾರಭಟೀಂ ವದಂತಿ
॥೨೦–೫೬॥

ಇವುಗಳಲ್ಲಿ ಭಾರತಿಯು ಬೀಭತ್ಸ ಕರುಣರಸಗಳಿಗೂ, ಸಾತ್ವತಿಯು ವೀರಾದ್ಭುತ ರಸಗಳಿಗೂ, ಕೈಶಿಕಿಯು ಹಾಸ್ಯ ಶೃಂಗಾರ ರಸಗಳಿಗೂ ಆರಭಟಿಯು ರೌದ್ರಭಯಾನಕ ರಸಗಳಿಗೂ ಅನುಕೂಲವಾದವು.*

## ೬. ಪ್ರವೃತ್ತಿ. (ಅ. ೧೩)

ದೇಶಾನುಸಾರಿಯಾದ ನಾಟ್ಯಪದ್ಧತಿಗೆ 'ಪ್ರವೃತ್ತಿ'ಯೆಂದುಹೆಸರು. ಇದು ಒಂದೊಂದು ದೇಶದಲ್ಲಿಒಂದೊಂದು ವಿಧವಾಗಿರುತ್ತದೆ. ದಕ್ಷಿಣ ದೇಶದ್ದು ನೃತ್ಯಗೀತ ವಾದ್ಯಗಳು ಬಹಳವಾಗಿಯೂ ಪ್ರಾಯಶಃ ಕೈಶಿಕೀ ವೃತ್ತಿಯನ್ನು ಅನುಸರಿಸಿಯೂ ಚತುರ ಮಧುರ ಲಲಿತವಾದ ಅಂಗಾಭಿನಯವುಳ್ಳದ್ದಾಗಿಯೂ ಇರುವಂತೆ ತಿಳಿಸಲ್ಪಟ್ಟಿದೆ. ಹೀಗೆ ನಾನಾ ದೇಶ ಪದ್ಧತಿಗಳನ್ನನುಸರಿಸಿ 'ಪ್ರವೃತ್ತಿ'ಗಳು ನಾನಾರೂಪವಾಗಬಹುದಾದರೂ ಮುಖ್ಯವಾಗಿ ಆವಂತೀ ದಾಕ್ಷಿಣಾತ್ಯಾ ಪಾಂಚಾಲೀ ಔಢ್ರಮಾಗಧೀ ಎಂಬ ನಾಲ್ಕೇ ವಿಧಿಗಳು ಅಂಗೀಕರಿಸಲ್ಪಟ್ಟಿವೆ.

* ರಸಗಳು ಎಂಟೇ ಎಂಬುದು ಈ ಗ್ರಂಥಕಾರನ ಮತ; ಆದ್ದರಿಂದ ಇಲ್ಲಿ ಶಾಂತರಸದ ಪ್ರಸ್ತಾಪ ಬಂದಿಲ್ಲ. ಮುಂದೆ ಬರುವ ರಸಾಧ್ಯಾಯದಲ್ಲಿ ಇದು ಸ್ಪಷ್ಟವಾಗುವುದು.

## ೭. ಸಿದ್ಧಿಗಳು (ಅ. ೨೭)

'ಸಿದ್ಧಿ'ಯು ದೈವೀ ಮಾನುಷೀ ಎಂದು ಎರಡು ವಿಧ; ಗಲಭೆಯಿಲ್ಲದೆ ಉತ್ಪಾತಾದಿಗಳಿಲ್ಲದೆ ಭಾವಾತಿಶಯದಿಂದೊಡಗೂಡಿ ನಾಟ್ಯವು ಸಂಪೂರ್ಣವಾಗಿ ನಡೆಯುವುದಕ್ಕೆ ದೈವೀಸಿದ್ಧಿಯೆಂದು ಹೆಸರು. ರಸಿಕರಾದ ಪ್ರೇಕ್ಷಕರು ರಸಾನುಭವ ಮಾಡಿ ಸ್ಮಿತ ಹಾಸ ರೋಮಾಂಚ ಕಣ್ಣೀರು ಮುಂತಾದವುಗಳನ್ನು ತೋರಿಸುವುದು ಮಾನುಷೀಸಿದ್ಧಿ.

ಈ ಅಧ್ಯಾಯದಲ್ಲಿ ಸಿದ್ಧಿಗಳೇ ಅಲ್ಲದೆ ಸಿದ್ಧಿಗೆ ಅಡಚಣೆಯಾಗಿ ಬರಬಹುದಾದ, ಪರಕೃತ ಮತ್ತು ಆತ್ಮಕೃತಗಳಾದ "ಘಾತ"ಗಳು ಅಥವಾ ನಾಟ್ಯಕ್ಕೆ ಬರಬಹುದಾದ ತೊಂದರೆಗಳು, ಪ್ರೇಕ್ಷಕರ ಲಕ್ಷಣ ಇವೂ ಹೇಳಲ್ಪಟ್ಟಿವೆ. ಇಲ್ಲಿ ಪ್ರೇಕ್ಷಕರಿಗೆ ಸಂಬಂಧಪಡುವ ಕೆಲವು ಶ್ಲೋಕಗಳನ್ನು ಕೊಡಬಹುದು :—

ನಾನಾಶೀಲಾಃ ಪ್ರಕೃತಯಃ ಶೀಲಾನ್ನಾಟ್ಯಂ ವಿನಿರ್ಮಿತಂ ।
ಉತ್ತಮಾಧಮಮಧ್ಯಾನಾಂ ವೃದ್ಧಬಾಲಕಯೋಷಿತಾಂ ॥
ತುಷ್ಯಂತಿ ತರುಣಾ ಕಾಮೇ ವಿದಗ್ಧಾಃ ಸಮಯಾನ್ವಿತೇ ।
ಅರ್ಥೇಷ್ವರ್ಥಪರಾಶ್ಚೈವ ಮೋಕ್ಷೇವಾಥ ವಿರಾಗಿಣಃ ॥
ಶೂರಾ ಭೀಭತ್ಸರೌದ್ರೇಷು ನಿಯುದ್ಧೇಷ್ವಾಹವೇಷು ಚ ।
ಧರ್ಮಾಖ್ಯಾನ ಪುರಾಣೇಷು ವೃದ್ಧಾಸ್ತುಷ್ಯಂತಿ ಸರ್ವದಾ ॥
ಏವಂ ಭಾವಾನುಕರಣೇ ಯೋ ಯಸ್ಮಿನ್ ಪ್ರವಿಶೇನ್ನರಃ ।
ಸ ತತ್ರ ಪ್ರೇಕ್ಷಕೋ ಜ್ಞೇಯೋ ಗುಣೈರೇತೈರಲಂಕೃತಃ ॥

ಅ. ೨೭ ಶ್ಲೋ. ೫೬-೫೯.

## ೮, ೯, ೧೦. ಸ್ವರಗಳು ಆತೋದ್ಯ ಮತ್ತು ಗಾನ (ಅ. ೨೮-೩೪)

ಮುಂದಿನ ಏಳು ಅಧ್ಯಾಯಗಳಲ್ಲಿ ಸ್ವರಗಳು ಮತ್ತು ಆತೋದ್ಯ (ವಾದ್ಯ) ಇವುಗಳ ವಿಚಾರವು ಬೆರಕೆಯಾಗಿ ಬರುತ್ತದೆ. ಸ್ವರ ಮತ್ತು ಗಾನದ ವಿಚಾರವಾಗಿ ಸಪ್ತಸ್ವರಗಳು, ವಾದಿ ಸಂವಾದಿ ಅನುವಾದಿ ಮತ್ತು ವಿವಾದಿ ಎಂದು ಅವುಗಳಲ್ಲಿರುವ ನಾಲ್ಕು ವಿಧ, 'ಗ್ರಾಮಗಳು' 'ಮೂರ್ಛನಾ' 'ಜಾತಿ'ಗಳು (ಅ. ೨೮), ರಸಗಳಿಗೂ ಇವುಗಳಿಗೂ

ಇರುವ ಸಂಬಂಧ, ವರ್ಣ ಅಲಂಕಾರಗಳು (ಅ. ೨೯) ತಾಳ (ಅ. ೩೧) ಧ್ರುವ (ಅ. ೩೨)* ಮುಂತಾದ ಸಂಗತಿಗಳು ಹೇಳಲ್ಪಟ್ಟಿವೆ.

'ಆತೋದ್ಯ'ವು (ವಾದ್ಯ) ತತ ಅವನದ್ಧ ಘನ ಸುಷಿರ ಎಂದು ನಾಲ್ಕು ವಿಧ. ತತವೆಂದರೆ ತಂತಿಯನ್ನು ಕಟ್ಟಿ ಮಾಡಿದ್ದು, ಅವನದ್ಧವೆಂದರೆ ಮದ್ದಲೆ ಮುಂತಾದದ್ದು, ಘನವೆಂದರೆ (ಪೊಳ್ಳಾಗಿರದೆ) ಗಟ್ಟಿಯಾಗಿರುವ ತಾಳ ಮುಂತಾದದ್ದು, ಸುಷಿರವೆಂದರೆ ಕೊಳವಿಯ ಹಾಗಿರುವ, ಕೊಳಲು ನಾಗಸ್ವರ ಮುಂತಾದದ್ದು. ಇವುಗಳ ವಿಚಾರವು ೨೮, ೩೦, ೩೪ನೆಯ ಅಧ್ಯಾಯಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ.

ನಾಟ್ಯದಲ್ಲಿ ಗಾನಕ್ಕೆ ಇರುವ ಪ್ರಾಶಸ್ತ್ಯವು ಮುಂದಿನ ಶ್ಲೋಕದಿಂದ ಗೊತ್ತಾಗುವುದು :—

ಗೀತೇ ಪ್ರಯತ್ನಃ ಪ್ರಥಮಂ ತು ಕಾರ್ಯಃ
ಶಯ್ಯಾಂ ಹಿ ನಾಟ್ಯಸ್ಯ ವದಂತಿ ಗೀತಮ್ ।
ಗೀತೇ ಚ ವಾದ್ಯೇ ಚ ಹಿ ಸುಪ್ರಯುಕ್ತೇ
ನಾಟ್ಯಪ್ರಯೋಗೋ ನ ವಿಪತ್ತಿಮೇತಿ ॥೩೩–೪೪೨॥

ಮುವ್ವತ್ತೈದನೆಯ ಅಧ್ಯಾಯದಲ್ಲಿ ಎಂಥೆಂಥವರು ಯಾವ ಯಾವ ಪಾತ್ರಗಳನ್ನು ವಹಿಸುವುದಕ್ಕೆ ಯೋಗ್ಯರು ಎಂಬ ವಿಚಾರವನ್ನು ತಿಳಿಸಿದ ಮೇಲೆ ಗ್ರಂಥವು ಮುಗಿದುಹೋಗುವುದು.

## ಉಪಸಂಹಾರ (ಅ. ೩೬–೩೭)

ಕಾಲಕ್ರಮದಲ್ಲಿ ನಾಟ್ಯವು ಗ್ರಾಮ್ಯವಾಗಿ ಪರಿಣಮಿಸಿ ನಟರು ಋಷಿಗಳನ್ನು ವಿಡಂಬನಮಾಡಿ† ಅವರ ಶಾಪಕ್ಕೆ ಗುರಿಯಾದರು.

* ೩೨ ನೆಯ ಅಧ್ಯಾಯದಲ್ಲಿ ಪುನಃ ಛಂದಸ್ಸು ಹೇಳಲ್ಪಟ್ಟಿವೆ.

† ಈಗಿನ ನಾಟಕಗಳಲ್ಲಿ ಮೇಲುಕೀಳೆಂಬ ಭೇದವಿಲ್ಲದೆ ಮಾತಾಡುತ್ತ ಜಗಳಗಂಟಿಗನಾದ ಕುಚೋದ್ಯ ಪ್ರಾಣಿಯಾಗಿ ಪರಿಣಮಿಸಿರುವ "ನಾರದ"ನು ಇದಕ್ಕೆ ಒಂದು ಉದಾಹರಣೆ. ಇದಕ್ಕೆ ನಟರಿಗೆ ಇನ್ನೂ ಶಾಪವೇಕೆ ಬಂದಿಲ್ಲವೋ! ನಟರು ಎಚ್ಚೆತ್ತುಕೊಳ್ಳುವುದು ಒಳ್ಳೆಯದು.

ನಹುಷನ ಪ್ರಾರ್ಥನೆಯಂತೆ ಭರತನ ಶಿಷ್ಯರು ಭೂಲೋಕಕ್ಕೆ ಬಂದು ಅವನ ಆಸ್ಥಾನದಲ್ಲಿ ನಾಟ್ಯವಾಡಿ ಅವನ ದೇಶದಲ್ಲಿ ಕೆಲವು ಕಾಲ ನಿಂತು ಪುತ್ರೋತ್ಪಾದನೆ ಮಾಡಿ ತಮ್ಮ ವಿದ್ಯೆಯನ್ನು ಭೂಲೋಕದಲ್ಲಿ ಪ್ರತಿಷ್ಠಿಸಿ ಹೊರಟುಹೋದರು.

*     *     *     *

ಪ್ರತಿಯೊಬ್ಬರೂ ತಮ್ಮ ತಮ್ಮ ವಸ್ತುಗಳನ್ನು ಹೊಗಳಿಕೊಳ್ಳುವುದು ಸ್ವಭಾವ. ಅದರಂತೆ ಈ ಗ್ರಂಥದ ಕೊನೆಯಲ್ಲಿ ಮಿಕ್ಕ ಕೆಲವು ಶ್ಲೋಕಗಳ ಜೊತೆಗೆ ಈ ಶ್ಲೋಕವೂ ಕಂಡುಬರುತ್ತದೆ :—

ನ ತಥಾ ಗಂಧಮಾಲ್ಯೇನ ದೇವಾ ಮುಹ್ಯಂತಿ ಪೂಜಿತಾಃ ।
ಯಥಾ ನಾಟ್ಯಪ್ರಯೋಗಸ್ಥೈಃ ನಿತ್ಯಂ ತುಷ್ಯಂತಿ ಮಂಗಳೈಃ ॥ ೩೭-೩೦ ॥

ಹೌದು ; ದೇವತೆಗಳು ಅಮೃತವನ್ನು ಕುಡಿದವರು ; ಅನಿಮಿಷರು ; ಅವರಿಗೆ ಊಟದ ಚಿಂತೆಯಿಲ್ಲ, ನಿದ್ರೆಯ ಯೋಚನೆಯಿಲ್ಲ ; ನಿತ್ಯವೂ ನಾಟಕ ನೋಡಿಕೊಂಡು ಸುಖಪಡುತ್ತಿರಬಹುದು !*

೧೯೨೩.

---

* ಈ ಪ್ರಬಂಧವನ್ನು ಬರೆದಾಗ, ನಾಟ್ಯಶಾಸ್ತ್ರದಿಂದ ಕೆಲವು ಭಾಗಗಳನ್ನು ಭಾಷಾಂತರಸಹಿತವಾಗಿ ಪ್ರಕಟಿಸಬೇಕೆಂಬ ಉದ್ದೇಶವಿತ್ತು. ಮೇಲೆ ಅದನ್ನು ಅಲ್ಲಲ್ಲೇ ಸೂಚಿಸಿದೆ. ಆದರೆ ಆ ಉದ್ದೇಶ ನೆರವೇರಲಿಲ್ಲ.

ಈ ಲೇಖನಕ್ಕೆ "ಅಲಂಕಾರ ಶಾಸ್ತ್ರದ ಚರಿತ್ರೆ" ಎಂಬ ಹೆಸರನ್ನು ಕೊಟ್ಟಿದೆ. ಇದನ್ನು ಬರೆದಾಗ ಇದೊಂದು ಲೇಖನಮಾಲೆಯಾಗಬೇಕೆಂಬ ಉದ್ದೇಶವಿತ್ತು. ಆದರೆ ಇಲ್ಲಿಂದ ಮುಂದೆ ಈ ವಿಷಯದ ಮೇಲೆ ಮತ್ತಾವ ಲೇಖನವೂ ಬರಲಿಲ್ಲವಾಗಿ ಈ "ಅಲಂಕಾರ ಶಾಸ್ತ್ರದ ಚರಿತ್ರೆ"ಯು ಬರಿಯ ನಾಟ್ಯಶಾಸ್ತ್ರದ ಪರಿಚಯದಲ್ಲಿ ಮುಗಿಯುವಹಾಗಾಯಿತು.

# ಪೂರ್ಣಕಲಾ

ಇದೊಂದು ಕಾದಂಬರಿ; ಕಾದಂಬರಿಗಳಲ್ಲಿ ಎಷ್ಟೋ ವಿಧಗಳುಂಟು; ಆದ್ದರಿಂದ ಇದನ್ನು ಎಂಥ ಕಾದಂಬರಿಯೆಂದು ಕರೆಯೋಣ? ಇದರಲ್ಲಿರುವ ನೀತಿಬೋಧೆಯು ಎದ್ದು ಕಾಣುವುದರಿಂದ, ಇದನ್ನು "ನೈತಿಕಕಾದಂಬರಿ" ಎಂದು ಕರೆಯಬೇಕೆಂದು ತೋರುತ್ತದೆ. ಆದರೆ "ನೈತಿಕ ಕಾದಂಬರಿ" ಎನ್ನುವುದೂ "ಗಂಡುಹೆಂಗಸು" ಎನ್ನುವುದೂ ಒಂದೆ! ಅದು ಹೇಗೆ ಎಂಬುದನ್ನು ಮುಂದೆ ವಿಚಾರ ಮಾಡುವೆವು.

ಕಾದಂಬರಿಗೆ ವಸ್ತು ಪಾತ್ರ ರಸ ಕಾಲ ದೇಶ ವರ್ತಮಾನ ರೀತಿ ನೀತಿ ಎಂದು ಮುಖ್ಯವಾಗಿ ಎಂಟು ಅಂಗಗಳುಂಟು. ಕಾದಂಬರೀಲೇಖಕರು ಇವೊಂದೊಂದಕ್ಕೂ ಸರಿಯಾದ ಪ್ರಾಶಸ್ತ್ಯವನ್ನೂ ಗಮನವನ್ನೂ ಕೊಡಬೇಕು. ಈ ಕಾಲದಲ್ಲಿ ಕೆಲವರು ನೀತಿಬೋಧೆಗೇ ಎಲ್ಲದಕ್ಕಿಂತಲೂ ಹೆಚ್ಚು ಪ್ರಾಶಸ್ತ್ಯ ಕೊಟ್ಟು ಅದೇ ಕಾವ್ಯದ ಮುಖ್ಯ ಉದ್ದೇಶವೆಂಬ ಅಭಿಪ್ರಾಯವನ್ನಿಟ್ಟುಕೊಂಡು ಶುಷ್ಕ ಉಪನ್ಯಾಸಕ್ಕೆ ಸಮನಾದ ಗ್ರಂಥಗಳನ್ನು ಬರೆದು ಅವನ್ನು ಕಾದಂಬರಿಗಳೆಂದೂ ನಾಟಕಗಳೆಂದೂ ಜನಗಳ ತಲೆಗೆ ಕಟ್ಟುತ್ತ ಅವು ಪಾಠಕರಿಗೆ ರುಚಿಸದೆ ಗ್ರಂಥಕೊಂಡುಕೊಳ್ಳುವಂತಾಗಲಿ ಚಂದಾಹಣವನ್ನು ಕೊಡುವಂತಾಗಲಿ ಅವರನ್ನು ಪ್ರೇರಿಸದಿದ್ದರೆ—ಕನ್ನಡಿಗರು ಅಭಿಮಾನಶೂನ್ಯರೆಂದೂ ನಿರುತ್ಸಾಹಿಗಳೆಂದೂ ಅರಸಿಕರೆಂದೂ ಕೂಗಿಕೊಳ್ಳುವುದು ರೂಢಿಯಾಗಿದೆ. ಈ ಗ್ರಂಥದಲ್ಲಿಯೂ ನೀತಿಬೋಧೆಯೇ ಬಹಳವಾಗಿರುವುದರಿಂದ ನೀತಿಯು ಕಾವ್ಯಸೌಂದರ್ಯಕ್ಕೂ ರಸಸ್ಫೂರ್ತಿಗೂ ಎಷ್ಟು ಹಾನಿಕರವಾಗಬಹುದೆಂಬುದನ್ನು ಇಲ್ಲಿ ವಿಚಾರಮಾಡುವೆವು.

ಅದಕ್ಕೆ ಮುಂಚೆ, 'ವಸ್ತು' 'ಪಾತ್ರ' ಎಂಬಂಶಗಳ ಮೇಲೆ ಎರಡು ಮಾತು ಆವಶ್ಯಕ. ವಸ್ತು ವಿಚಾರವಾಗಿ–ಈ ಗ್ರಂಥದಲ್ಲಿ ಸ್ವಾರಸ್ಯವಾದ ಕಥೆಯಾಗಲಿ ಹೇಳಿಸಿಕೊಳ್ಳುವ ಸಂವಿಧಾನಕೌಶಲ್ಯವಾಗಲಿ ಇರುವುದಿಲ್ಲವೆಂದು ಹೇಳಿಬಿಟ್ಟರೆ ಸಾಕಾಗಿದೆ. ಪಾತ್ರಗಳ ವಿಚಾರ

ವಾಗಿ ಗ್ರಂಥಕರ್ತ್ರಿಯವರು "ಈ ಗ್ರಂಥದಲ್ಲಿ ಬಂದಿರುವ ಪಾತ್ರಗಳಿಗೆ ಕೊಟ್ಟಿರುವ ಹೆಸರುಗಳು ಕೂಡ ಆ ಆ ಪಾತ್ರಗಳ ಗುಣ-ಸ್ವಭಾವ-ವರ್ತನಗಳಿಗೆ ಅನ್ವಯಿಸುವಂತಹುದಾಗಿರುವುದಲ್ಲದೆ, ಅನ್ಯದೇಶೀಯರ ಹೆಸರನ್ನು ರೂಢಿಗೆ ತಂದು, ಅನ್ಯದೇಶದವರ ಆಚಾರವಿಚಾರಗಳನ್ನು ಅನುಕರಣಕ್ಕೆ ತಂದು, ಅವರಂತಾಗಲು ಕುಣಿಯಬೇಕೆಂಬ ಅಭಿಲಾಷೆಯೇನೂ ಇಲ್ಲ." ಎಂದು ಹೇಳಿದ್ದಾರೆ. "ಅನ್ಯ ದೇಶೀಯರ ಹೆಸರನ್ನು .... ಅಭಿಲಾಷೆ ಏನೂ ಇಲ್ಲ" ಎಂಬುದು ಯಾರ ಮೇಲೆ ಪ್ರಯೋಗಿಸಿದ ಬಾಣ? ವೆಂಕಟಾಚಾರ್ಯರ ಕಾದಂಬರಿಗಳ ಮೇಲೆಯೇ? ಹಾಗಿದ್ದರೆ "ಸಲ್ಲದು ಸಲ್ಲದಂಬಿದನಿಸಲ್ಗಡ!" ಏಕೆಂದರೆ ಅವರು ಭಾಷಾಂತರ ಮಾಡಿದ ಗ್ರಂಥಗಳಲ್ಲಿ ಪರದೇಶದ ಹೆಸರುಗಳೂ ಆಚಾರಗಳೂ ಬರದೇ ನಿಲ್ಲುವುದು ಹೇಗೆ? "ಕುಣಿಯುವುದು" ಎಂಬ ಶಬ್ದವು ಗೌರವಸೂಚಕವಲ್ಲ. ಇದರಲ್ಲಿ ಒಂದು ಖಂಡುಗದಷ್ಟು ಪರಾವಹೇಳನವೂ ಆತ್ಮಶ್ಲಾಘನೆಯೂ ತುಂಬಿವೆ. ಪಾತ್ರಗಳಿಗೆ ಕೊಟ್ಟಿರುವ ಹೆಸರುಗಳು "ಆ ಆ ಪಾತ್ರಗಳ ಗುಣ-ಸ್ವಭಾವ-ವರ್ತನಗಳಿಗೆ ಅನ್ವಯಿಸುವಂತೆ" ಇರುವುದು ನಿರುಪಮ ಸಾಮರ್ಥ್ಯವನ್ನೇನೂ ತೋರಿಸುವುದಿಲ್ಲ. ಇಂಥ ಅನ್ಯದೇಶದ ಹೆಸರನ್ನು ನಿಂದಿಸತಕ್ಕವರಿಗೆ ನಮ್ಮ ದೇಶದ ಹೆಸರುಗಳ ಮೇಲೆ ಎಷ್ಟು ಅಭಿಮಾನವಿದೆ ಎಂದು ನೋಡೋಣ! ಈ ಕಾದಂಬರಿಯಲ್ಲಿ ಬರುವ ಪಾತ್ರಗಳು ಯಾವುವೆಂದರೆ :—ಮಧುಮಿತ್ರ, ಸತೀಮಣಿ, ಸಚ್ಚಿದಾನಂದವಿಜ್ಞಾನಭಾಸ್ಕರಭಟ್ಟಾಚಾರ್ಯ, ಗೀತಾಚಾರ್ಯ, ನಳಿನೀಕಾಂತ, ರಕ್ತಾಕ್ಷಿ, ಪ್ರಭಾಕರ, ಪೂರ್ಣಕಲೆ, ಅಕ್ಷಯಕುಮಾರ, ಕಲಾಧರ, ಶಾಂತಿನಾಥ, ಕುಮುದೆ, ತಾರಾನಾಥ (ಕಾಂತ) ಬಾಬು, ಕುಮುದಮಿತ್ರ, ಶಾರದೆ, ರೋಹಿಣಿ. ಇವುಗಳಲ್ಲಿ ಯಾವುವು ಕನ್ನಡ ದೇಶದ, ಮೈಸೂರು **ದೇಶದ**, ಹೆಸರುಗಳಂತಿವೆ? (ಕನ್ನಡ ಗ್ರಂಥಗಳಲ್ಲಿ ಬರತಕ್ಕ "ಅನ್ಯ ದೇಶೀಯರ" ಹೆಸರುಗಳೆಂದರೆ ನಮ್ಮ ಪ್ರಾಂತದಲ್ಲಿ ರೂಢಿಯಲ್ಲಿಲ್ಲದ ಬಂಗಾಳಿ ಮುಂತಾದ ದೇಶಗಳ ಹೆಸರುಗಳೇ ಹೊರತು, ಇಂಗ್ಲಿಷ್, ಚೈನಾ, ಗ್ರೀಕ್, ಮುಂತಾದ ಹೆಸರುಗಳು ಯಾವುವೂ ಬರುವುದಿಲ್ಲ.) ಗೀತಾಚಾರ್ಯ, ಶಾರದೆ

ಇವೆರಡನ್ನು ಬಿಟ್ಟರೆ ಯಾವುವೂ ನಮ್ಮವುಗಳ ಹಾಗಿಲ್ಲ. ಜಲಕ್ರೀಡಾ ಸಮಾಸಕ್ತಗೋಪೀವಸ್ತ್ರಾಪಹಾರಕಾಚಾರ್ಯರ ತಮ್ಮಂದಿರಾದ ಸಚ್ಚಿದಾನಂದ ವಿಜ್ಞಾನ ಭಾಸ್ಕರ ಭಟ್ಟಾಚಾರ್ಯರು ನಮ್ಮ ದೇಶದವರಲ್ಲ. ತಾರಾನಾಥ (ಕಾಂತ) ಬಾಬುಗಳಂತು "ಹದಿನಾರಾಣೆಯ" ಬಂಗಾಳಿಗಳು. ಇವರು ಬೋಲ್ಪುರದಿಂದ "ಶಾಂತಿನಿಕೇತನ" ವನ್ನು ಕನ್ನಡ ದೇಶಕ್ಕೆ (ಯಾವ ದೇಶಕ್ಕೋ ಸ್ಪಷ್ಟವಾಗಿ ಹೇಳುವುದಕ್ಕೆ ಆಧಾರವೇನೂ ಇಲ್ಲ; ಆದರೂ ಕನ್ನಡ ಮಾತನ್ನು ನೋಡಿ ಹೀಗೆಂದು ಹೇಳಿದ್ದೇವೆ) ತಂದಿರುವಂತೆ ತೋರುತ್ತದೆ. ಮಿಕ್ಕವರ ಹೆಸರನ್ನೂ ಅವರು "ಸ್ವಾಮಿಜಿ" ಎಂದು ಕರೆಯುವುದನ್ನೂ ನೋಡಿದರೆ ಇವರೆಲ್ಲರೂ ಬಂಗಾಳಿಗಳ ಸಂಬಂಧಿಗಳಿರಬೇಕೆಂದು ತೋರುತ್ತದೆ.

ಪಾತ್ರಗಳಲ್ಲಿ ವೈವಿಧ್ಯ (Variety) ವಿರಬೇಕು. "ಪೂರ್ಣಕಲಾ" ಮತ್ತು ಇದರ ಜೊತೆಯ ಗ್ರಂಥಗಳಲ್ಲಿ ಬರುವ ಪಾತ್ರಗಳನ್ನು ಹುಡುಗರು, ದೊಡ್ಡವರು, ಹೆಂಗಸರು, ಗಂಡಸರು, ಒಳ್ಳೆಯವರು, ಕೆಟ್ಟವರು ಎಂದು ವಿಭಾಗಿಸಬಹುದೇ ಹೊರತು ಇನ್ನು ಯಾವ ವಿಧದಲ್ಲಿಯೂ ಸ್ಪಷ್ಟವಾಗಿ ವಿಭಾಗಮಾಡುವುದು ಸಾಧ್ಯವಾಗುವಂತಿಲ್ಲ. ಒಂದು ಪುಸ್ತಕದಲ್ಲಿ ಬರುವ ಸ್ತ್ರೀಪುರುಷರೇ ಮಿಕ್ಕ ಗ್ರಂಥಗಳಲ್ಲೆಲ್ಲ ವೇಷ ಬದಲಾಯಿಸಿಕೊಂಡು ಬರುವಹಾಗೆ ಕಾಣುತ್ತದೆ. ಉದಾ—ಪೂರ್ಣಕಲೆಗೂ ನಂದಿನಿಗೂ ವ್ಯತ್ಯಾಸವೇನು?

ಗುಣಗಳನ್ನು ಪಾತ್ರಗಳ ತಲೆಯ ಮೇಲೆ ಬರೆದು ಹತ್ತಿಸಬಾರದು. ಅಥವಾ ತಾವೇ ವಿವರಿಸುತ್ತ ಹೋಗಬಾರದು. ಆಯಾ ಪಾತ್ರಗಳು ತಮ್ಮ ತಮ್ಮ ಕಾರ್ಯಗಳಿಂದ ಅವುಗಳನ್ನು ವ್ಯಕ್ತಗೊಳಿಸುತ್ತ ಹೋಗಬೇಕು. ಹೀಗಿದ್ದರೆ ಕಾದಂಬರಿಯು ನಾಟಕದಂತಾಗಿ "ಗದ್ಯ ನಾಟಕ" ವೆಂಬ ಹೆಸರಿಗೆ ಅಧಿಕಾರಿಯಾಗುತ್ತದೆ. ಉದಾಹರಣೆಗಾಗಿ, ಕಲಾಥವ (೬೯–೭೦) ನಲ್ಲಿ ಪುತ್ರವಾತ್ಸಲ್ಯವಿತ್ತೆಂದು ಹೇಳುವುದಕ್ಕೆ ಬದಲಾಗಿ, ಆಚಾರ್ಯರ ಬಾಯಲ್ಲಿ "ನಾನು ಪ್ರೀತಿಸುತ್ತೇನೆ" "ಇದು ಆರ್ಯರ ಮಾರ್ಗ" ಎಂದು ಹೇಳಿಸಿ ಜೊತೆಗೆ ಅಹಂಭಾವವನ್ನು ಪ್ರಕಟಮಾಡಿಸುವುದಕ್ಕೆ ಬದಲಾಗಿ ಅಂಥ ಒಂದು ಘಟನೆಯನ್ನು ಕಲ್ಪಿಸಿದ್ದರೆ

ಚೆನ್ನಾಗಿತ್ತು ; ಅಥವಾ ಸೂಚಕವಾದ ಎರಡು ಮಾತನ್ನಾಡಿಸಿದ್ದರೆ ಚೆನ್ನಾಗಿತ್ತು. ನಾಟಕ ಬರೆಯುವವನಿಗೆ ಇಲ್ಲದ ಒಂದು ಸ್ವಾತಂತ್ರ್ಯವು ಕಾದಂಬರೀಕಾರನಿಗೆ ಉಂಟು ; ಅದೇನೆಂದರೆ ಆವಶ್ಯಕತೆ ಬಿದ್ದರೆ ತನ್ನ ಅಭಿಪ್ರಾಯಗಳನ್ನೂ ಮಾತುಗಳನ್ನೂ ತನ್ನ ಗ್ರಂಥದಲ್ಲಿ ತರಬಹುದು ; ಆದರೆ ಇದನ್ನು ದುರುಪಯೋಗಮಾಡಬಾರದು. ಇದರ ಸದುಪಯೋಗ ಗಳಲ್ಲಿ ಸುರಸವಾದ ವರ್ಣನೆಗಳನ್ನು ಸಮಯೋಚಿತವಾಗಿ ತರುವುದು ಒಂದು ; ಇಂಥ ವರ್ಣನೆಗಳು ಈ ಗ್ರಂಥದಲ್ಲಿ ಎಷ್ಟಿವೆ ?

ಇದರಲ್ಲಿ ಬರುವ ಪಾತ್ರಗಳೆಲ್ಲವೂ ನಾಟಕರಂಗದಲ್ಲಿ ಸ್ವಸ್ವರೂಪ ಗಳನ್ನು ಮರೆಸಿಕೊಂಡು ಬಂದು ಅಭಿನಯಿಸಿ ಹೋಗುವವರ ಹಾಗಿವೆ. ಒಬ್ಬರನ್ನೊಬ್ಬರು ಮಾತನಾಡಿಸುವ ರೀತಿ, ಕರೆಯುವ ರೀತಿ, ಇವು ಗಳನ್ನು ನೋಡಿದರೆ, ಇವುಗಳು ಸಹಜವಾದ ನಡೆನುಡಿಗಳಲ್ಲವೆಂದೂ ಗಟ್ಟಿಮಾಡಿಕೊಂಡು ಬಂದು ಹೇಳಿದ ಮಾತುಗಳಂತೆಯೂ ತೋರು ವುದು. ಕೊನೆಗೆ ಹಾಸ್ಯರಸದಲ್ಲಿಯೂ (ಪು. ೨೫೫) ಬಿಗಿ ಹಿಡಿದಿರುವಂ ತೆಯೂ ನಟನೆಯಂತೆಯೂ ತೋರುವುದರಿಂದ ರಸಸ್ಫೂರ್ತಿಯಾಗಲೊ ಲ್ಲದು. ಈ ಪಾತ್ರಗಳು ಒಬ್ಬರನ್ನು ಒಬ್ಬರು ಹೊಗಳುವುದರಲ್ಲಿ ನಿಸ್ಸೀ ಮರು. ಬಾಗಿಲ ಹೊರಗೆ ಕಾಯ್ದುಕೊಂಡಿದ್ದು ತಮ್ಮ ಮಾತು ಬರುವ ಹೊತ್ತಿಗೆ ಸರಿಯಾಗಿ ಒಳಕ್ಕೆ ಬರುವುದೊಂದು ಇವರಲ್ಲಿ ಅಸಾಧಾರಣ ಶಕ್ತಿಯುಂಟು. ಒಳ್ಳೆಯ ಪಾತ್ರಗಳು ಮೂರು ಹೊತ್ತೂ ಪೂಜೆ, ಪ್ರಾರ್ಥನೆ, ವ್ಯಾಸಂಗ, ಇದರಲ್ಲಿಯೇ ಇರುತ್ತಾರೆ. ಇವರ ಭಯಭಕ್ತಿ ಗೌರವಗಳು ಹೇಳತೀರವು.—ಇವರೇನು ಮನುಷ್ಯರೋ, ಮರಗಳೋ, ಅಥವಾ ನಮಗೆ ಉಪದೇಶ ಮಾಡುವುದಕ್ಕಾಗಿಯೇ ಸ್ವರ್ಗಲೋಕದಿಂದ ಇಳಿದುಬಂದ ದೇವತಾಪುರುಷರೋ ?

• ಇದರಲ್ಲಿ ಮುಖ್ಯವಾಗಿ ಪ್ರಸ್ತಾಪಿಸಬೇಕೆಂದ ವಿಚಾರ ನೀತಿ ಬೋಧೆ, ಮೇಲಿಂದ ಮೇಲೆ ಬರುವ ಉಪನ್ಯಾಸಗಳು. ಆಹಾ ! ಬರಿಯ " ಲೆಕ್ಚರು " ಗಳನ್ನು (೨೦೮) ಕೇಳುವುದರಿಂದಲೇ ಮನುಷ್ಯರು ಬದಲಾಯಿಸುವ ಹಾಗಿದ್ದ ಪಕ್ಷಕ್ಕೆ ಎಷ್ಟು ಚೆನ್ನಾಗಿತ್ತು ! ಹಾಗೆ ಅವು ಗಳಿಂದ ಉಪಯೋಗಗಳಿದ್ದಿದ್ದರೆ ನಮ್ಮ ಸ್ಮೃತಿ ಧರ್ಮಶಾಸ್ತ್ರ ಮುಂತಾ

ದವುಗಳನ್ನು ಓದುವವರೇ ಇಲ್ಲವೆಂದೂ, ಅವುಗಳಂತೆ ನಡೆದುಕೊಳ್ಳು ವವರೇ ಇಲ್ಲವೆಂದೂ ಗೋಳಾಡಬೇಕೇಕೆ?

"ವ್ಯುತ್ಪಾದಕವಾಗಿರಬೇಕೆಂದು" ಬರೆದ ನಾಟಕವೂ, ವ್ಯಾಕರಣ ವನ್ನು ಬೋಧಿಸಬೇಕೆಂದು ಬರೆದ ಪದ್ಯ ಕಾವ್ಯವೂ, ವೇದಾಂತವನ್ನು ಬೋಧಿಸುವುದಕ್ಕೆಂದು ಬರೆದ ಕಾದಂಬರಿಯೂ ಎಲ್ಲವೂ ಒಂದೇ! ಅವೆಂದಿಗೂ ಸೊಗಸವು. ಏಕೆಂದರೆ ಬ್ರಹ್ಮಾನಂದವನ್ನು ಬೋಧಿಸುವ ಶುಷ್ಕವೇದಾಂತವಿಚಾರಗಳು ಶ್ರೇಯಸ್ಕರಗಳಾದರೂ ಪ್ರೇಯಸ್ಕರ ಗಳಲ್ಲ; ಜನಸಾಮಾನ್ಯಕ್ಕೆ ಅವು ರುಚಿಕರವಲ್ಲ; ಗ್ರಂಥವು ಇನ್ನೂ ಮೊದಲಲ್ಲಿಯೇ ರುಚಿಸದೆ ಗ್ರಂಥವನ್ನು ಓದುವುದಕ್ಕೇ ಮನಸ್ಸು ಬರದಿ ದ್ದರೆ ಲೇಖಕರ ಉದ್ದೇಶವೇನಾಯಿತು? ಅವರು ಪಟ್ಟ ಶ್ರಮಕ್ಕೆ ಫಲ ವೆಲ್ಲಿಂದ ಬಂತು? ಈ ಉಪದೇಶಗಳಲ್ಲಿ, ಕೇಳದಿರುವ ಅಥವಾ ವಿಶೇಷ ವಾದ ಸಂಗತಿಗಳೇನಾದರೂ ಉಂಟೆ?—ಅದು ಮೊದಲೇ ಇಲ್ಲ. ಹೀಗೆ ಉಪನ್ಯಾಸಗಳನ್ನು ಕೊಡುವುದಕ್ಕಿಂತ ಅದನ್ನು ಅನುಸರಿಸಿ ನಡೆಯು ವವರು ಹೇಗೆ ಶ್ರೇಷ್ಠರಾಗುವರು ಎಂಬುದನ್ನು ಚಿತ್ರಿಸಬೇಕು. ಅವ ರಿಂದ ಅದನ್ನು ಬಾಯಲ್ಲಿ ಹೇಳಿಸುವುದಕ್ಕಿಂತ ತಕ್ಕಂಥ ಘಟನಾವಳಿ ಗಳನ್ನು ಕಲ್ಪಿಸಿ ಆಯಾ ಪಾತ್ರಗಳು ತಮ್ಮ ತಮ್ಮ ಗುಣಸ್ವಭಾವ ಗಳನ್ನು ಅನುಸರಿಸಿ ನಡೆಯುವಂತೆ ಮಾಡಬೇಕು. ಪಾಠಕರು ತಾವೇ ಫಲಾಫಲಗಳನ್ನು ಊಹಿಸಿಕೊಳ್ಳುವುದಕ್ಕೆ ಅವಕಾಶ ಕೊಡಬೇಕು. ಅದಕ್ಕೆ ಬದಲಾಗಿ—ಅಧ್ಯಾಯಗಳ ಮೊದಲಲ್ಲಿ ಬರುವ ನೀತಿ ಶ್ಲೋಕ ಗಳೇನು! ಮಧ್ಯದಲ್ಲಿ ಬರುವ ಸ್ತೋತ್ರಪಾಠಗಳೇನು! ಕೊನೆಯಲ್ಲಿ ಬರುವ ಗ್ರಂಥಕರ್ತೃಗಳವರ ಸ್ವಂತ ಉಪನ್ಯಾಸಗಳೇನು! ಪಾತ್ರಗಳೂ ತಮ್ಮ ಕರ್ತೃಗಳವರಿಗೆ ಈ ಉಪನ್ಯಾಸ ಸಾಮರ್ಥ್ಯದಲ್ಲಿ ಸ್ವಲ್ಪವೂ ಕಡ ಮೆಯಿಲ್ಲ. ಅವರೂ ಸಮಯ ಸಿಕ್ಕಿದಾಗ ಉಪನ್ಯಾಸ ಮಾಡುವರು. ಮಧುಮಿತ್ರನು ಸಾಯುತ್ತಿದ್ದಾಗಲೂ ಅದೇ ಉಪನ್ಯಾಸ ಸಂಜೀವನ! ಹೀಗಿದ್ದರೆ ಗ್ರಂಥವು ಶುಷ್ಕವೇದಾಂತ ವಿಚಾರಕವಾದ ಉಪನ್ಯಾಸ ವಾಗುವುದೇ ಹೊರತು ರಸಾತ್ಮಕವಾದ ಕಾದಂಬರಿ ಎಂದಿಗೂ ಆಗು ವುದಿಲ್ಲ.

ಅಧ್ಯಾಯಗಳ ಕೊನೆಯಲ್ಲಿ ದೇಶಸ್ಥಿತಿಗಾಗಿ ಪರಿತಾಪಪಟ್ಟು ಮಾಡಿರುವ ಪ್ರಾರ್ಥನೆಗಳು ಪಾಠಕರ ಹೃದಯದಿಂದ ಬರುವಹಾಗೆ ಮಾಡಬೇಕು. ಇಂಥ ಅಭಿಪ್ರಾಯಗಳಿಂದ ದೇಶಕ್ಕೂ ದೇಶದ ಜನಕ್ಕೂ ಹಿತವಾಗುವುದೆಂದು ನಂಬಿರುವ ಪಕ್ಷಕ್ಕೆ ಅದನ್ನು ಬೇರೆ ಪ್ರಬಂಧ ರೂಪದಲ್ಲಿ ಬರೆಯಬೇಕು. ಅದನ್ನು ಕಥೆಯ ಮಧ್ಯೆ ತಂದು ತೇಪೆ ಹಾಕಿ ಕಾದಂಬರಿ ಎಂಬ ನಾಮಕರಣವನ್ನು ಮಾಡಬಾರದು. ಹೊಟ್ಟೆ ನಿಂದ ಪ್ರಯೋಜನವಾಗುವುದೆನ್ನುವ ಪಕ್ಷಕ್ಕೆ ಅದನ್ನು ಅದಕ್ಕೆ ತಕ್ಕ ಸ್ಥಾನದಲ್ಲಿ ತಂದಿಟ್ಟು ಅದಕ್ಕೆ ತಕ್ಕ ಕಾರ್ಯವನ್ನು ವಹಿಸಬೇಕು; ಅದು ಮಧುಮಯವೆಂದೂ ಅಮೃತಸ್ವರೂಪವೆಂದೂ ಹೇಳಿ ಪಂಚಭಕ್ಷ್ಯ ಗಳನ್ನು ಊಟಮಾಡುತ್ತಿರುವವರ ಬಾಯ ಮುಂದೆ ಮಾತ್ರ ತಂದು ಹಾಕಬಾರದು.

ಇದರಿಂದ ನೀತಿಬೋಧೆಯು ಕೂಡದೆಂದು ನಾವು ಹೇಳುವುದಿಲ್ಲ. ಕಾದಂಬರಿಗೆ ಅದೂ ಒಂದು ಅಂಗವೆಂದು ಹಿಂದೆಯೇ ಹೇಳಿದ್ದೇವೆ. ಉತ್ತಮವಾದ ಕಾವ್ಯಕ್ಕೆ ಅದೂ ಒಂದು ಗುರುತೆಂದು ಪಾಶ್ಚಾತ್ಯ ವಿಮರ್ಶಕರೂ ನಮ್ಮವರೂ ಒಪ್ಪಿಕೊಳ್ಳುತ್ತಾರೆ. ಆದರೆ ಅದು ಜೇನು ತುಪ್ಪದಲ್ಲಿ ಹೊರಳಿಸಿರುವ ಕಹಿಮಾತ್ರೆಯಂತೆಯೂ, ತಂದೆತಾಯಿಗಳು ಮೃದುವಾದ ಮಾತುಗಳಲ್ಲಿ ಮಕ್ಕಳನ್ನು ತಿದ್ದುವಂತೆಯೂ, "ಕಾಂತಾ ಸಮ್ಮಿತತಯೋಪದೇಶಯುಜೇ" ಎಂಬಂತೆ ಮನಮೋಹನಳಾದ ಪತ್ನಿಯು ತನ್ನ ಪತಿಯು ಪ್ರತಿಯನ್ನು ಹೇಳದ ಹಾಗೆ ಮೃದು ಮಧುರ ವಾದ ಮಾತುಗಳಿಂದ ಅವನಿಗೆ "ಉಪದೇಶ" ಮಾಡಿ ಅವನನ್ನು ತಿದ್ದುವಂತೆಯೂ ಇರಬೇಕು. ಇಂಥ ಗ್ರಂಥಗಳನ್ನು ಬರೆಯಬೇಕಾದರೆ ಕವಿಯಲ್ಲಿ ಅಸಾಧಾರಣ ಸಾಮರ್ಥ್ಯವೂ ಕಲಾಕೌಶಲ್ಯಜ್ಞಾನವೂ ಆವಶ್ಯಕ. ಹಲ್ಲಿನಿಂದ ಸೌಂದರ್ಯವೂ ಉಪಯೋಗವೂ ಉಂಟು. ಹಲ್ಲಿಲ್ಲದ ಬೊಚ್ಚುಬಾಯಿಯಿಂದ ಅಂದವಾಗಲಿ ಗಟ್ಟಿಯಾದ ಪದಾರ್ಥ ಗಳನ್ನು ತಿನ್ನುವುದಕ್ಕೆ ಶಕ್ತಿಯಾಗಲಿ ಇರುವುದಿಲ್ಲ. ಆದರೆ ಅದೇ ಹಲ್ಲು ತುಟಿ ಮೀರಿದರೆ ಅದರಿಂದ ಅಂದವೂ ಉಪಯೋಗವೂ ಎರಡೂ ನಿರ್ಮೂಲವಾಗುವುವು.

ಸಂಸ್ಕೃತ ಲಕ್ಷಣಗ್ರಂಥಕಾರರಲ್ಲಿ ಬಹಳ ಪುರಾತನನಾದಂಥ ಧನಂಜಯನೆಂಬ ಒಬ್ಬ ರಸಿಕನು ನಾಟಕದ ಉದ್ದೇಶವನ್ನು ಕುರಿತು ಹೀಗೆ ಹೇಳಿದ್ದಾನೆ. ಅದು ಎಲ್ಲ ಸತ್ಕಾವ್ಯಗಳಿಗೂ ಅನ್ವಯಿಸುವುದೆಂದು ಹೇಳಬಹುದು. ಅದನ್ನು ಕಾದಂಬರೀಲೇಖಕರೂ, ವಿಮರ್ಶಕರೂ, ವಿದ್ಯಾರ್ಥಿಗಳೂ ಆಗಾಗ್ಗೆ ಜ್ಞಾಪಿಸಿಕೊಳ್ಳುತ್ತಿರುವುದು ಉತ್ತಮ:—

ಆನಂದನಿಸ್ಯಂದಿಷು ರೂಪಕೇಷು
ವ್ಯುತ್ಪತ್ತಿಮಾತ್ರಂ ಫಲಮಲ್ಪಬುದ್ಧೇಃ ।
ಯೋಽಪೀತಿಹಾಸಾದಿವದಾಹ ಸಾಧುಃ
ತಸ್ಮೈ ನಮಸ್ಸ್ವಾದುಪರಾಙ್ಮುಖಾಯ ॥

ತಾತ್ಪರ್ಯ :—ಆನಂದ ತೊಟ್ಟಿಕ್ಕುತ್ತಿರುವ ನಾಟಕಗಳಿಂದ ಅಲ್ಪಬುದ್ಧಿಗೆ (ಭಾಷಾಜ್ಞಾನದಂಥ) ವ್ಯುತ್ಪತ್ತಿಯೇ ಫಲ; (ನಾಟಕಗಳೂ ರಾಮಾಯಣ ಮಹಾಭಾರತ ಮುಂತಾದ) ಇತಿಹಾಸಗಳ ಹಾಗೆ (ನೀತಿಬೋಧಕಗಳು) ಎಂದು ಹೇಳುವ ಸ್ವಾದುಪರಾಙ್ಮುಖನಾದ (ಕಾವ್ಯದ ಆನಂದವು ಬೇಡವೆನ್ನುವ) ಸಾಧು (ಸಜ್ಜನನಿಗೆ) ನನ್ನದೊಂದು ನಮಸ್ಕಾರ!

ಕವಿಗಳ ಬಿಸುಟ್ಟ ಬಗೆಯುಂ
ತವಗುಂಟೆ ವಿದಗ್ಧಹೃದ್ಯ ಕಾವ್ಯ ವಿಚಾರ ।
ಕ್ಕವಟವಿಸಿ ಗಂಟಲೊಡೆದೊಣ
ಗುವಿನಂ ಬಾಯ್ಮಾಟ್ಟಿರೇಕೆ ಬೆಳ್ಳಕ್ಕರಿಗರ್ ॥

—ಲೀಲಾವತಿ

ಪ್ರಬುದ್ಧ ಕರ್ಣಾಟಕ, ಸಂಚಿಕೆ ೧

# ವಿಷವೃಕ್ಷ

ಸುಪ್ರಸಿದ್ಧರಾದ ಬಂಕಿಂಚಂದ್ರ ಚಟ್ಟೋಪಾಧ್ಯಾಯರ ಕಾದಂಬರೀ ಲೇಖನ ಶಕ್ತಿಯು ಸರ್ವತೋಮುಖವಾದದ್ದು. ಅವರು ಬರೆದಿರುವ ಕಾದಂಬರಿಗಳು ಒಂದು ವಿಧವಾದವುಗಳಲ್ಲ; ಅವುಗಳಲ್ಲಿ ಕೆಲವು ಐತಿಹಾಸಿಕ; ಕೆಲವು ಗಾರ್ಹಸ್ಥ್ಯ; ಇನ್ನು ಕೆಲವು ಸಾಮಾಜಿಕ; ಮತ್ತೆ ಕೆಲವು ವಿಡಂಬಕ. ಹೀಗೆ ಅವರು ವಿಧ ವಿಧವಾದ ಅನೇಕ ಕಾದಂಬರಿಗಳನ್ನು ಬರೆದಿದ್ದಾರೆ. ಇವೊಂದೊಂದರಲ್ಲಿಯೂ ಅವರ ಅಪೂರ್ವವಾದ ಸಾಮರ್ಥ್ಯವೂ ಅಪ್ರತಿಹತವಾದ ಪ್ರತಿಭೆಯೂ ಕಂಡುಬರುತ್ತವೆ. ಭಾಷಾಂತರಕರ್ತರಾದರೂ "ಕರ್ಣಾಟಕ ಕಾದಂಬರೀ ಪಿತಾಮಹ" ರೆಂದು ಕರೆಯಲ್ಪಡಬಹುದಾದ ಮ|| ವೆಂಕಟಾಚಾರ್ಯರು ತಮ್ಮ ಭಾಗ್ಯೋದಯದಿಂದಲೂ, ಕನ್ನಡಿಗರ ಭಾಗ್ಯೋದಯದಿಂದಲೂ, ಬಂಗಾಳಾ ದೇಶದ ಕಾದಂಬರೀಖನಿಯಿಂದ ಇಂಥ ಅಮೋಘವಾದ ರತ್ನಗಳನ್ನು ಆರಿಸಿಕೊಂಡು ಬಂದು ಕನ್ನಡ ದೇಶದಲ್ಲಿ ಅವುಗಳನ್ನು ಪ್ರಚಾರ ಮಾಡಿದರು. ಇದರಿಂದ ತಮಗೆ ಕೀರ್ತಿಯೂ ಕನ್ನಡ ಸಾಹಿತ್ಯಕ್ಕೆ ಮಹೋಪಕಾರವೂ ಆಯಿತು. *

---

* ಈಚೀಚೆಗೆ ಬಂಗಾಳಿಯಿಂದ ತರ್ಜುಮೆ ಮಾಡುತ್ತಿರುವ ಗ್ರಂಥಗಳು ಹೀಗಿಲ್ಲದಿರುವುದರಿಂದಲೇ ಇವಕ್ಕೆ ಪ್ರತಿಯಾದ ಫಲವೇ ಲಭಿಸುತ್ತಿದೆ. ಭಾಷಾಂತರಕಾರರಲ್ಲಿಯಾಗಲಿ ಅವರು ಆರಿಸಿಕೊಳ್ಳುವ ಲೇಖಕರಲ್ಲಿಯಾಗಲಿ ಆ ಸಾಮರ್ಥ್ಯವೂ ಆ ವಾಗ್ಧೋರಣೆಯೂ ಇರುವುದಿಲ್ಲ. ಜನಸಾಮಾನ್ಯರೂ, ಕೂಡ—ಅದು ತಮ್ಮ ಅನುಭವದಿಂದ ಆಡಿದ ಮಾತಾಗಿರಲಿ, ಜನಜನಿತವಾಗಿ ಕೇಳಿದ ಮಾತಾಗಿರಲಿ— "ವೆಂಕಟಾಚಾರ್ಯರ Novels (ಕಾದಂಬರಿ) ಗಳನ್ನು ಬಿಟ್ಟರೆ ಇನ್ನುಂಟೆ!" ಎಂದು ಪಕ್ಷಪಾತಪೂರ್ಣವಾದ ಅಭಿಪ್ರಾಯವನ್ನು ಕೊಡುವರು. ಇದು ಬಹಳ ಮಟ್ಟಿಗೆ ನಿಜವೆಂಬುದನ್ನು ಮೇಲ್ಕಂಡ ಎರಡು ವಿಧವಾದ ಗ್ರಂಥಗಳನ್ನೂ ಓದಿದವರಿಗೆ ಹೇಳಬೇಕಾಗಿಲ್ಲ.

ಇದಕ್ಕೆ ' ವಿಷವೃಕ್ಷ ' ವು ಅತ್ಯುತ್ತಮವಾದ ಉದಾಹರಣೆ ; ಇದರಲ್ಲಿ ಒಂದೊಂದು ಸಣ್ಣ ಸಣ್ಣ ಅಂಶವೂ ಕವಿಯ ಅನ್ಯಾದೃಶವಾದ ಸಾಮರ್ಥ್ಯವನ್ನೂ ಗ್ರಂಥದ ಶ್ಲಾಘ್ಯತೆಯನ್ನೂ ವ್ಯಕ್ತಪಡಿಸುತ್ತದೆ. ಗ್ರಂಥದ ಹೆಸರೇ ಸಾಲದೆ! ವಿಷವೃಕ್ಷ!* ಎಷ್ಟು ಭಾವ ರಸಾರ್ಥ ಗರ್ಭಿತವೂ ಅಡಕವೂ ಆದ ಹೆಸರು! ಮುಂದೆ ಬರುವ ಕಥೆಗೆ ಅದು ಎಷ್ಟು ಚೆನ್ನಾಗಿ ಒಪ್ಪುತ್ತದೆ! ಕಥೆಯೂ ನೈಸರ್ಗಿಕವಾಗಿದ್ದು ನಿಜತ್ವಭ್ರಾಂತಿಯನ್ನುಂಟುಮಾಡುತ್ತದೆ ; ಸಂಸಾರದಲ್ಲಿ ಬರತಕ್ಕ ಕಷ್ಟ ಸುಖಗಳು, ಸ್ತ್ರೀಪುರುಷರಿಗೆ ಸಾಮಾನ್ಯವಾಗಿ ಸ್ವಾಭಾವಿಕವಾಗಿ ಇರತಕ್ಕ ಮನೋದೌರ್ಬಲ್ಯ, ಕಾಮಕ್ರೋಧಾದಿಗಳು, ಅವುಗಳ ಫಲಾಫಲಗಳು ಇವುಗಳನ್ನು ಕುರಿತು ಹೇಳುವುದರಿಂದ ಕ್ಷಣಕ್ಷಣಕ್ಕೂ ಕುತೂಹಲವನ್ನುಂಟುಮಾಡುತ್ತದೆ. ಈ ಕಥೆಯನ್ನು ಪಾಠಕರು ಬಲ್ಲವರಾದರೂ ನಾಲ್ಕು ಮಾತುಗಳಲ್ಲಿ ಪುನಃ ಹೇಳಿ ಅದನ್ನು ಜ್ಞಾಪಕಕ್ಕೆ ತಂದುಕೊಡುವೆವು.–

ನಾಗೇಂದ್ರನಾಥನು ಕುಂದನಂದಿನಿಯೆಂಬ ದಿಕ್ಕಿಲ್ಲದ ಹುಡುಗಿಯನ್ನು ಕರೆದುಕೊಂಡು ಬಂದು ತಾರಾಚರಣನೆಂಬ ತನ್ನ ಆಶ್ರಯದಲ್ಲಿದ್ದ ನತದ್ರಷ್ಟನೊಬ್ಬನಿಗೆ ಮದುವೆ ಮಾಡುವನು. ತಾರಾಚರಣನು ಸ್ವಲ್ಪ ದಿನದಲ್ಲಿಯೇ ಸತ್ತುಹೋಗಲು ಕುಂದೆಯು ನಾಗೇಂದ್ರನ ಕತ್ತಿಗೇ ಗಂಟುಬೀಳುವಳು. ಇಲ್ಲಿಂದ ಮುಂದಕ್ಕೆ ಅವಳ ದೈವದುರ್ವಿಪಾಕದಿಂದ ದೇವೇಂದ್ರನೆಂಬ ಭ್ರಷ್ಟನೂ ಹೀರೆಯೆಂಬ ದಾಸಿಯೂ ದೇವಪುರುಷನಂತಿದ್ದ ನಾಗೇಂದ್ರನೂ ಸಹ ಅವಳ ಅಮಂಗಳಕ್ಕೆ ಕಾರಣರಾಗಿ, ತಾವೂ ಅಳವಿಲ್ಲದ ದುಃಖಕ್ಕೆ ಗುರಿಯಾಗುವರು. ಇವರ ವಿಷಮಯವಾದ ಸಂಸಾರಕ್ಕೆ ನಾಗೇಂದ್ರನ ತಂಗಿ ಮತ್ತು ಭಾವಂದಿರಾದ ಕಮಲಮಣಿ ಶ್ರೀಶಚಂದ್ರರು ತಮ್ಮ ಸುಖಮಯವಾದ ಸಂಸಾರದಿಂದ ಅಮೃತ ಬಿಂದು

---

* ಈ ಹೆಸರು ಬಂಕಿಂಚಂದ್ರರಿಂದ ಕಲ್ಪಿತವಲ್ಲ. ಕಾಳಿದಾಸನು ಅದನ್ನು ಕುಮಾರಸಂಭವದಲ್ಲಿ ಆಗಲೇ ಉಪಯೋಗಿಸಿದ್ದಾನೆ. ತತ್ಪೂರ್ವವಾಗಿ ಮತ್ತಾರಾದರೂ ಉಪಯೋಗಿಸಿದ್ದಾರೆಯೋ ಅಥವಾ ಕಾಳಿದಾಸನೇ ಕಲ್ಪಿಸಿದನೋ ತಿಳಿಯದು.

ಗಳನ್ನು ತಂದು ಹಾಕುತ್ತಿರುವರು. ನಾಗೇಂದ್ರನು ವಿಧವೆಯಾದ ಕುಂದೆಯ ಮೇಲಣ ಮೋಹವನ್ನು ತಡೆಯದೆ ಅವಳನ್ನು ಮದುವೆ ಮಾಡಿಕೊಂಡು ಸತೀಮಣಿಯಾದ ತನ್ನ ಹೆಂಡತಿ ಸೂರ್ಯಮುಖಿ ಯನ್ನು ಮತ್ತಷ್ಟು ಸಂಕಟಪಡಿಸಿ ಕುಂದನಂದಿನಿಯನ್ನೂ ತಿರಸ್ಕರಿಸಿ ದುಃಖಸಾಗರವನ್ನೇ ತಂದೊಡ್ಡುವನು. ಈ ಮಧ್ಯೆ ದೇವೇಂದ್ರನಿಗೂ ಹೀರೆಗೂ ಸಂಬಂಧವುಂಟಾಗಿ ಪಡಬಾರದ ಕಷ್ಟಗಳನ್ನು ಪಟ್ಟು, ರೋಗ ದಿಂದ ನರಳಿ ಹುಚ್ಚುಹಿಡಿದು ಅವರಿಬ್ಬರೂ ಕಾಡಪಾಲಾಗುವರು. ಇದಕ್ಕೆ ಮುಂಚೆಯೇ ಕುಂದೆಯೂ ನಾಗೇಂದ್ರನ ತಿರಸ್ಕಾರದಿಂದ ಮನ ನೊಂದು ಹೀರೆಯ ಪ್ರೇರಣೆಯಿಂದ ಅವಳೇ ತಂದ ವಿಷವನ್ನು ತಿಂದು ಪ್ರಾಣ ಬಿಡುವಳು. ಶೋಕಮಯವಾಗಿ ಮುಗಿಯುವ ಕಥೆಗಳನ್ನಾಗಲಿ ನಾಟಕಗಳನ್ನಾಗಲಿ ಓದಿ ಅಭ್ಯಾಸವಿಲ್ಲದ ನಮಗೆ ಕಥೆ ಮುಗಿಯಿ ತೆಂಬ ನಂಬುಗೆಯೇ ಬರದೆ ಹೀಗೆ ಕಥೆಯು ಮುಗಿದುಹೋಗುವುದು. ಇತರ ಭಾಷೆಗಳಲ್ಲಿ ಇಂಥ ಕಥೆಗಳನ್ನು ಓದಿ ಅಭ್ಯಾಸವಿರತಕ್ಕವರೂ ಸಹ 'ಅಯ್ಯೋ, ಎಂಥಾ ಅನ್ಯಾಯ!' ಎಂದು ಕೊರಗುತ್ತ, ನಿಟ್ಟು ಸಿರು ಬಿಡುತ್ತ, ದೇಹವನ್ನು ಕುಗ್ಗಿಸಿಕೊಂಡು, ಏನೋ ನಷ್ಟವಾದಂತೆ ಪುಸ್ತಕವನ್ನು ಮುಚ್ಚಿಬಿಡುವೆವು.

ಇದರಿಂದ ಕಥೆಯೂ ಪಾತ್ರಗಳೂ ಎಷ್ಟು ನೈಸರ್ಗಿಕಗಳಾಗಿರುವು ವೆಂಬುದೂ, ಆ ಪಾತ್ರಗಳು ಎಷ್ಟರ ಮಟ್ಟಿಗೆ ಜೀವಂತ ಮನುಷ್ಯರಂತೆ ನಡೆ ನುಡಿ ಸ್ವಭಾವಗಳನ್ನು ತೋರ್ಪಡಿಸುತ್ತ, ತಮ್ಮ ಕಷ್ಟದಲ್ಲಿ ನಾವು ಮರುಗುವಂತೆಯೂ ಸುಖದಲ್ಲಿ ಹಿಗ್ಗುವಂತೆಯೂ ಮಾಡುತ್ತವೆಯೆಂ ಬುದೂ ವ್ಯಕ್ತವಾಗುವುದು. ಈ ವಿಧವಾದ ಫಲವುಂಟಾಗುವಂತೆ ಘಟನಾ ವಳಿಗಳನ್ನು ಜೋಡಿಸಿ ಕಥೆಯನ್ನು ಕಟ್ಟಿ ಪಾತ್ರಗಳನ್ನು ಚಿತ್ರಿಸಿದ ಕಥೆಗಾರನ ಕಲಾಕೌಶಲ್ಯವನ್ನು ಸ್ವಲ್ಪ ತಿಳಿದುಕೊಳ್ಳಬೇಕು.

ಕಥೆಯು ಮೊದಲಿಂದ ಕೊನೆಯವರೆಗೂ ಪೂರ್ತಿಯಾಗಿ ಕಲ್ಪಿತ ವಾದದ್ದು. ಅದರ ಉತ್ಪತ್ತಿಯು ಪ್ರಾಯಶಃ ಮುಂದೆ ಹೇಳುವ ರೀತಿಯಲ್ಲಿರಬಹುದು. ಗ್ರಂಥಕರ್ತನು ನೋಡಿದ ಅಥವಾ ಯೋಚಿ ಸುತ್ತಿದ್ದ ಯಾವುದೋ ಒಂದು ಘಟನಾ ವಿಶೇಷವು ಮನುಷ್ಯನು

ಕ್ಷಣಿಕವಾದ ಸುಖಕ್ಕೆ ಆಸೆಪಟ್ಟು ಚಿತ್ತಚಾಪಲ್ಯಕ್ಕೊಳಗಾದರೆ, ಅದ ರಿಂದ ಮುಂದಕ್ಕೆ ಎಷ್ಟು ಅನರ್ಥ ಪರಂಪರೆಗಳು ಬರಬಹುದೆಂಬುದನ್ನು ಸೂಚಿಸಿರಬಹುದು. ಈ ಸೂಚನೆಯನ್ನೇ ಒಂದು ಕಥೆಗೆ ಆಧಾರವಾಗಿ ಇಟ್ಟುಕೊಂಡು ಕಥೆಗಾರನು ಅಂಥ ಒಂದು ಪಾತ್ರವನ್ನೂ (ನಾಗೇಂದ್ರ) ಚಾಪಲ್ಯವನ್ನು ಉಂಟುಮಾಡತಕ್ಕ ಒಂದು ವಸ್ತು ವಿಶೇಷವನ್ನೂ (ಕುಂದನಂದಿನಿ) ಕಲ್ಪಿಸಿದನೆಂದು ಹೇಳಬಹುದು. ಆದರೆ ಯಾವನೋ ಒಬ್ಬ ಅನಾಮಧೇಯನು ತನ್ನ ಚಾಪಲ್ಯದಿಂದ ಕಷ್ಟಕ್ಕೆ ಗುರಿಯಾಗಿ ತನ್ನಷ್ಟಕ್ಕೆ ತಾನು ನರಳಿ ಒಂದು ಮೂಲೆಯಲ್ಲಿ ಕೊರಗಿ ಸತ್ತರೆ ಕಥೆ ಓದುವವರಿಗೆ ಆಕಡೆ ಅಷ್ಟು ಗಮನ ಹೋಗದೆ, ಹೆಚ್ಚು ಸಂಕಟ ವಾಗದೆ, ರಸ ಪುಷ್ಟಿಯಿಲ್ಲದೆ, ಕಥೆಯು ನೀರಸವೂ ಕೃಶವೂ ಆಗುವುದು. ಅದಕ್ಕಾಗಿ ನಾಗೇಂದ್ರನನ್ನು ಸಕಲ ಗುಣಯುಕ್ತನಾದ ವಿದ್ಯಾ ವಂತನಾದ ವಿವೇಕಶಾಲಿಯಾದ ಪದವಿ ಐಶ್ವರ್ಯ ಮುಂತಾದ ಸಕಲ ಐಹಿಕ ಭೋಗಸಾಧನೆಗಳೂ ಉಳ್ಳ ನಾಯಕನನ್ನಾಗಿ ಮಾಡಿ ದ್ದಾನೆ. ಎಂಥ ವಿವೇಕಿಗೂ ವಿದ್ಯಾವಂತನಿಗೂ ಸಮಯದಲ್ಲಿ ಬುದ್ಧಿ ಮೋಸಹೋಗಿ ಮನಸ್ಸು ಮೊಂಡುಬಿದ್ದು ಹೇಳಿದ ಮಾತು ಕೇಳದೆ, ಅವನು ಅನರ್ಥಗಳಿಗೆ ಗುರಿಯಾಗಲು ಕಾರಣವೇನು? ಸೂರ್ಯ ಮುಖಿಯಂಥ ಸಕಲ ಸುಖದಾಯಕಳಾದ ಹೆಂಡತಿಯಿದ್ದರೂ ಕುಂದ ಯಂಥ ವಿಧವೆಯಾದ ಹುಡುಗಿಯ ಮೇಲೆ ದೇವಪುರುಷನಂತಿದ್ದ ನಾಗೇಂದ್ರನಿಗೆ ಮನಸ್ಸು ಹೋಗಲು ಕಾರಣವೇನು?—ಎಂಬ ಸಮಸ್ಯೆ ಗಳನ್ನು ತಂದು ಒಡ್ಡಿದ್ದಾನೆ; ಅದಕ್ಕೆ ಕಾರಣವನ್ನು ಸ್ವಲ್ಪ ಹೇಳಿದ್ದರೂ ಮಾನವ ಯತ್ನಕ್ಕೆ ಮೀರಿದ ಅದೃಷ್ಟವೆಂಬ ಅದೃಶ್ಯವೂ ಅನಿವಾರ್ಯವೂ ಅಪೂರ್ವವೂ ಆದ ವಸ್ತುವೊಂದು ಎಲ್ಲರನ್ನೂ ತನ್ನ ಪಾಶದಿಂದ ಬಿಗಿದು ತನ್ನ ಅಧೀನದಲ್ಲಿಟ್ಟುಕೊಂಡು ಆಟವಾಡಿಸುತ್ತದೆಂದು ಸೂಚಿಸಿ ಮನಸ್ಸಿಗೆ ಒಂದು ವಿಧವಾದ ದೈವನಿರ್ಭರತೆಯೂ ನಿರಾಶೆಯೂ ದಿಗಿಲೂ ಉಂಟಾಗುವಂತೆ ಮಾಡಿಟ್ಟದ್ದಾನೆ. ಇಷ್ಟಾದ ಮೇಲೆ ನಾಗೇಂ ದ್ರನಿಗಿಂತಲೂ ಕೀಳಾದ ದೇವೇಂದ್ರನನ್ನೂ ಅವನಿಗೆ ತಕ್ಕ ಹೀರೆ ಯನ್ನೂ ಕಲ್ಪಿಸಿ ಅವರು ಹೇಗೆ ಕೊನೆಗೂ ಕೆಟ್ಟುಹೋದರೆಂದೂ,

ನಾಗೇಂದ್ರನು ಉತ್ತಮಸ್ಥಿತಿಗೆ ಬರಲು ಅವಕಾಶವಿತ್ತೆಂದೂ ತೋರಿಸಿದ್ದಾನೆ. ಇಲ್ಲಿಯೂ ದೇವೇಂದ್ರನು ಸ್ವಭಾವತಃ ಗುಣಶಾಲಿಯೆಂದೂ ಬುದ್ಧಿಶಾಲಿಯೆಂದೂ ತೋರಿಸಿ ಮನುಷ್ಯನು ಕಾರಣಾಂತರದಿಂದ ಜೀವಮಾನದಲ್ಲಿ ಒಂದು ತಪ್ಪುಹೆಜ್ಜೆಯನ್ನು ಇಟ್ಟರೆ ಹೇಗೆ ದಾರಿ ತಪ್ಪಿ ಕೊನೆಗೆ ಅಧಃಪತನವಾಗುವುದೆಂದೂ, ದೇವೇಂದ್ರನಿಗೆ ತಕ್ಕ ಸತ್ಪತ್ನಿ ದೊರೆತಿದ್ದರೆ ಅವನೂ ಯೋಗ್ಯನಾಗಿ ಸದ್ಗೃಹಸ್ಥನೆನಿಸಿಕೊಂಡಿರಬಹುದಾಗಿತ್ತೆಂದೂ ಸೂಚಿಸಿದ್ದಾನೆ. ಇವರೆಲ್ಲರಿಗೂ ಆದರ್ಶಸ್ವರೂಪರಾಗಿ ಸುಖದುಃಖಗಳಿಂದ ವಿಚಲಿತರಾಗದೆ ಚಿತ್ತ ಚಾಪಲ್ಯಗಳಿಗೊಳಗಾಗದೆ ಸದಾ ಸಂತೋಷಚಿತ್ತರೂ ಸಮಚಿತ್ತರೂ ಆಗಿ, ಸಂಸಾರವನ್ನು ಆನಂದಮಯವನ್ನಾಗಿ ಮಾಡಿಕೊಂಡಿರುವ ಕಮಲಮಣಿ ಶ್ರೀಶಚಂದ್ರ ಇವರನ್ನೂ ಇವರ ಸುಖಸಾಧನೆಗೆ ಮುಖ್ಯ ಕಾರಣಗಳಲ್ಲಿ ಒಂದಾಗಿ ಸತೀಶನನ್ನೂ ಸೃಷ್ಟಿಸಿದ್ದಾನೆ. ಈ ಮಗುವಿನ ಬಾಲಲೀಲೆಗಳನ್ನು ನೋಡಿ ನೋಡಿ ಅದರ ತಾಯಿತಂದೆಗಳಂತೆ ನಾವೂ ಸಂತೋಷ ಪಡುತ್ತ ಮಧ್ಯೇ ಮಧ್ಯೇ 'ಸೂರ್ಯಮುಖಿಯ ಹೊಟ್ಟೆಯಲ್ಲಿಯೂ ಇಂಥ ಮಗು ಒಂದು ಹುಟ್ಟಿದ್ದರೆ ಅವರು ಎಷ್ಟು ಸುಖದಿಂದಿರಬಹುದಾಗಿತ್ತು; ಎಷ್ಟು ಕಷ್ಟಗಳನ್ನು ಸಹಿಸಬಹುದಾಗಿತ್ತು!' ಎಂದು ನಿಟ್ಟುಸಿರು ಬಿಡುವೆವು. ಇನ್ನು ಉಳಿದವಳು ಕುಂದನಂದಿನಿ. ಗ್ರಂಥಕರ್ತರು ಹತಭಾಗ್ಯಳಾದ ಕುಂದನಂದಿನಿಯನ್ನು ನಾಗೇಂದ್ರನ ಚಾಪಲ್ಯವಸ್ತುವಾಗಿ ಮೊದಲು ಕಲ್ಪಿಸಿದಾಗ ಅವಳನ್ನು ಅಷ್ಟು ದುರದೃಷ್ಟ ಶಾಲಿನಿಯನ್ನಾಗಿ ಮಾಡಬೇಕೆಂದು ಯೋಚಿಸಿದಂತೆ ತೋರುವುದಿಲ್ಲ. ನಾಗೇಂದ್ರನ ಆಶ್ರಯಕ್ಕೆ ಬಂದು ಬೀಳಬೇಕಾಗಿ, ಅವಳು ಅನಾಥೆಯಾಗಬೇಕಾಯಿತು. ಈ ಮಧ್ಯೆ ದೇವೇಂದ್ರನಿಗೂ ಕಥೆಗೂ ಸಂಬಂಧವು ಬರಬೇಕು. ಅದಕ್ಕಾಗಿ ಗೋಷಾ ಪದ್ಧತಿಯುಳ್ಳ ಬಂಗಾಳಾ ದೇಶದಲ್ಲಿಯೂ ರೂಪವತಿಯಾದ ಪತ್ನಿಯನ್ನು ದೇವೇಂದ್ರನಂಥ ತಿಳಿದ ಪೋಕರಿಯ ಮುಂದೆ ತಾನಾಗಿ ತಂದು ನಿಲ್ಲಿಸತಕ್ಕ ಅಯೋಗ್ಯನೂ ದಡ್ಡನೂ ಆದ ತಾರಾಚರಣನನ್ನೇ ಅವಳು ಮದುವೆ ಮಾಡಿಕೊಳ್ಳಬೇಕಾಗಿ ಬಂತು. ತನ್ನ ಮನೆಯಲ್ಲಿಯೇ ಸಾಕಿ ಮೋಹಿಸಿದ ಹುಡುಗಿ

ಯನ್ನು ಕ್ರಮವಾಗಿ ಮದುವೆಯಾದರೆ ಚಾಪಲ್ಯದ ಪ್ರಬಲತೆಯೂ ಪಾತಕದ ಘೋರತೆಯೂ, ಶೋಕದ ಅತಿಶಯತೆಯೂ ಕಾಣಬರುವುದಿಲ್ಲವಾದುದರಿಂದ ಅವಳು ವಿಧವೆಯಾಗಬೇಕಾಗಿ ಬಂತು. ಇಲ್ಲಿಂದ ಮುಂದಕ್ಕೆ ಅವಳು ನಾಗೇಂದ್ರನ ಮನೆಯನ್ನು ಸೇರಿದ ಮೇಲೆ ಬೋನಿನಲ್ಲಿ ಅಡಗಿಕೊಂಡಿರುವ ಒಂದು ಸಾಧುವಾದ ಮೂಗುಪ್ರಾಣಿಯನ್ನು ನೋಡುವುದಕ್ಕೆ ಬಂದವರೆಲ್ಲರೂ ತಿವಿದು ತಿವಿದು ಕಿರುಕುಳಗುಟ್ಟಿಸುವಂತೆ, ಪಾಪ ಆ ಬಡ ಹುಡುಗಿಯನ್ನು (ಅವಳು ಮಾಡಿದ ಯಾವ ತಪ್ಪಿಗೋ!) ಪ್ರತಿಯೊಬ್ಬರೂ ಹಿಂಸೆಪಡಿಸುವರು. ಅವಳ ಅದೃಷ್ಟದಿಂದ ತಾಯಿಯಹಾಗಿದ್ದ ಸೂರ್ಯಮುಖಿಗೂ ಸಂದೇಹವೂ ಮಾತ್ಸರ್ಯವೂ ಕೋಪವೂ ಹುಟ್ಟುವುವು. ಅಕ್ಕನಂತಿದ್ದ ಪ್ರೇಮಮಯಿಯಾದ ಕಮಲಮಣಿಗೂ ಬೇಸರವುಂಟಾಗುವುದು. ಹೀರೆಯು ಅವಳನ್ನು ಕೈಗೆ ಸಿಕ್ಕಿದ ಕೋತಿಯಂತೆ ಆಡಿಸುವಳು. ನಾಗೇಂದ್ರನಿಗೆ ಅವಳ ಮೇಲೆ ಪ್ರೀತಿಯಿದ್ದರೂ ಅದನ್ನು ತೋರ್ಪಡಿಸುವುದಕ್ಕಾಗಲಿ ಒಪ್ಪಿಕೊಳ್ಳುವುದಕ್ಕಾಗಲಿ ಅವನಿಗೆ ಇಷ್ಟವಿರಲಿಲ್ಲ. ಅವನನ್ನು ಮದುವೆ ಮಾಡಿಕೊಂಡ ಮೇಲೆ ಸ್ಪಷ್ಟವಾಗಿ ಕಂಡು ಬಂದ ಮತ್ತು ತೋರಿಸಿದ ಪ್ರಣಯವನ್ನು ನೋಡಿ ಸಂತೋಷಪಟ್ಟದ್ದು ಒಂದೇ ದಿವಸ! ಮುಂದಾದರೂ ಸುಖವೆ? ಗೃಹತ್ಯಾಗಿಯಾದ ಸೂರ್ಯಮುಖಿಗಾಗಿ ಕೊರಗಿದ್ದಷ್ಟು ದಿವಸ; ಹೀರೆಯ ಕೈಗೆ ಸಿಕ್ಕಿ ನರಳಿದ್ದಷ್ಟು ದಿವಸ; ಕೊನೆಗೆ ಇನ್ನು ಸುಖವಾಗಿದ್ದರೂ ಇರಬಹುದೆಂಬ ಕಾಲಕ್ಕೆ ಸರಿಯಾಗಿ ವಿಷಪಾನದಿಂದ ಆತ್ಮಹತ್ಯ! ದುರ್ಮರಣ!—ಹೀಗೆ ಕುಂದೆಯು ಕೊನೆಗೆ ದೌರ್ಭಾಗ್ಯ ದುರದೃಷ್ಟಗಳಿಗೆ ತೌರುಮನೆಯಾಗುವಳು.

ಇವರೇ ಮುಖ್ಯರಾದ ಪಾತ್ರಗಳು; ಈ ಮೂರು ಜೊತೆ ಪಾತ್ರಗಳನ್ನೂ ಸಮಸ್ತ ಘಟನಾವಳಿಯನ್ನೂ ಕಟ್ಟಿದ ಸೂತ್ರದಂತಿರುವ ಕುಂದೆಯನ್ನೂ ಕಲ್ಪಿಸಿ ಕಥೆಗಾರನು ಒಂದು ತೊಡಕಾದ ಸಾಂಸಾರಿಕ ಕಥೆಯನ್ನು ಹೆಣೆದಿಟ್ಟದ್ದಾನೆ. ಇವರಲ್ಲದೆ ಕಥೆಯ ಬೆಳವಣಿಗೆಗೆ ಅಲ್ಲಲ್ಲಿ ಬೇಕಾದ ಸುರೇಂದ್ರ, ಬ್ರಹ್ಮಚಾರಿ, ರಾಮಕೃಷ್ಣರಾಯ, ಹೀರೆಯ ಅಜ್ಜಿ, ಹರಮಣಿ ಮುಂತಾದವರು ಬರುವರು. ಆದರೆ ಅವರು

ಎಷ್ಟರಮಟ್ಟಿಗೆ ಆವಶ್ಯಕವೋ ಎಲ್ಲಿ ಆವಶ್ಯಕವೋ ಅಷ್ಟು ಮತ್ತು ಅಲ್ಲಿ ಮಾತ್ರ ಬರುವರೇ ವಿನಾ ಮಿಕ್ಕ ಕಡೆಗಳಲ್ಲಿ ವ್ಯರ್ಥವಾಗಿ ಬರುವುದಿಲ್ಲ. ಕಥೆಗೆ ಸಂಬಂಧಪಡದೇ ಇರತಕ್ಕ ಪಾತ್ರಗಳು ಬರುವುದೇ ಇಲ್ಲ. ಆವಶ್ಯಕವಾಗಿರತಕ್ಕವುಗಳು ಅನಾಮಧೇಯಗಳಾಗಿಯಾಗಲಿ, ಜೀವವಿಲ್ಲದ ಬೊಂಬೆಗಳಂತಾಗಲಿ, ವಿಲಕ್ಷಣ ಪ್ರಕೃತಿಗಳುಳ್ಳ ವಿಚಿತ್ರಮೃಗಗಳಂತಾಗಲಿ, ಅಮಾನುಷಶಕ್ತಿಯುಳ್ಳ ದಿವ್ಯಪುರುಷರಂತಾಗಲಿ ಇರದೆ, ನರಮನುಷ್ಯರಂತೆ ನಡೆದುಕೊಂಡು ಗ್ರಂಥಕರ್ತನು ತಮತಮಗೆ ವಿಧಿಸಿದ ಕಾರ್ಯಗಳನ್ನು ಮಾಡಿ ತಮ್ಮ ಗುರುತು ಗುಣಸ್ವಭಾವಗಳನ್ನು ಅಚ್ಚಳಿಯದಂತೆ ನಮ್ಮ ಮನಸ್ಸಿನಲ್ಲಿ ಕೆತ್ತಿ ಹೋಗುವುವು. ಗೌಣಪಾತ್ರಗಳಲ್ಲಿಯೂ ಎಷ್ಟೋ ವೈವಿಧ್ಯ! ಎಷ್ಟೋ ಜೀವಕಳೆ! ಅವರು ಆಡುವ ಒಂದೊಂದು ಮಾತೂ ಅವರ ಗುಣಸ್ವಭಾವ ವಿಶೇಷಗಳನ್ನು ವ್ಯಕ್ತಪಡಿಸತಕ್ಕದ್ದಾಗಿದೆ.*

ಕಥೆಗಾರನು ಇಷ್ಟು ಕಥೆಯನ್ನು ಪಾತ್ರ ಸಹಿತವಾಗಿ ಸಿದ್ಧಮಾಡಿಕೊಂಡು ಅದನ್ನು ನಮಗೆ ತಿಳಿಸಲು ಮೊದಲು ಮಾಡಿದ್ದಾನೆಂದು ಹೇಳಬಹುದು. ಕಥೆ ಹೇಳುವುದರಲ್ಲಿ ಎರಡು ವಿಧ. ಗ್ರಂಥಕರ್ತರೇ ಮುಂದಾಗಿ ಬಂದು ಎಲ್ಲವನ್ನೂ ತಮ್ಮ ಮಾತಿನಲ್ಲಿಯೇ ಹೇಳಿ ಮುಗಿಸುವುದು ಒಂದು ವಿಧ; ಹಾಗಲ್ಲದೆ ನಾಟಕದಲ್ಲಿರುವಂತೆ ಗ್ರಂಥಕರ್ತರು ಪಾತ್ರಗಳನ್ನು ಮುಂದೆ ಬಿಟ್ಟು ಅವರ ನಡೆನುಡಿಗಳಿಂದಲೇ ಕಥೆಯನ್ನು ತಿಳಿಯಪಡಿಸುವುದು ಒಂದು ವಿಧ; ಈ ಮಾರ್ಗಾವಲಂಬನೆಯಿಂದ ಕಥೆಗೆ ಸ್ವಾರಸ್ಯವೂ, ಓದುವರಿಗೆ ರುಚಿಯೂ ಕಥಾಪಾತ್ರಗಳಿಗೆ ನೈಸರ್ಗಿಕತ್ವವೂ, ನಿಜತ್ವಭ್ರಮೆಯೂ ಬರುವುದು ಹೆಚ್ಚು. ಸಮರ್ಥರಾದ ಕಾದಂಬರೀಕಾರರು ಈ ಪದ್ಧತಿಯನ್ನೇ ಹೆಚ್ಚಾಗಿ ಉಪಯೋಗಿಸಿ ಪಾತ್ರಗಳು ಹೇಳಲಾರದ, ಆದರೆ ಕಥೆಯ ಸೌಂದರ್ಯ ಪುಷ್ಟಿಗಳಿಗೆ ಆವಶ್ಯಕವಾದ, ವಿಷಯಗಳನ್ನು ಮಾತ್ರ

---

* ಸುರೇಂದ್ರ—೫೦, ೮೩, ೮೪; ಬ್ರಹ್ಮಚಾರಿ ೧೫೪-೧೫೮; ರಾಮಕೃಷ್ಣರಾಯ ೧೬೭-೧೬೮; ಹೀರೆಯ ಅಜ್ಜಿ ೧೮೪-೧೮೭.

ತಾವೇ ಹೇಳುತ್ತ ಹೋಗುತ್ತಾರೆ; ನೀರಸವಾದ ಕಥಾಭಾಗಗಳನ್ನು ಸಂಕ್ಷೇಪಿಸಿ ಎರಡು ಮಾತಿನಲ್ಲಿ ಹೇಳಿಬಿಡುತ್ತಾರೆ. ಗಿರಿ, ನದಿ, ದುರ್ಗ, ಊರು, ಗ್ರಾಮ, ಮುಂತಾದವುಗಳನ್ನು ವರ್ಣಿಸುತ್ತಾರೆ. ಪಾತ್ರಗಳ ಹೃದಯದಲ್ಲಿ ಉಂಟಾಗಿರಬಹುದಾದ ಭಾವಾಂತರಗಳನ್ನು ಅಥವಾ ಆಶಯಗಳನ್ನು ಸೂಚಿಸುತ್ತಾರೆ. ಇತ್ಯಾದಿ. ಆದರೆ ಈ ವಿಷಯದಲ್ಲಿ ಎಲ್ಲಿ ಮಿಾರದೆ ವಿವೇಚನೆಯನ್ನು ಉಪಯೋಗಿಸುವುದು ಸಮರ್ಥರಾದ ಕಲಾಕೌಶಲಜ್ಞರಿಗೆ ಮಾತ್ರ ಸಾಧ್ಯ. ಅದಕ್ಕೋಸ್ಕರವೇ ಅಷ್ಟೇನೂ ಸಮರ್ಥರಲ್ಲದ ಗ್ರಂಥಕರ್ತರು ಬರೆದ ಕಥೆಗಳು ಕಥೆಗಳಾಗದೆ "ಸ್ವಕೀಯ ವೃತ್ತಾಂತ ಸಂಗ್ರಹ"ಗಳಾಗಿ ಆ ಗ್ರಂಥಕರ್ತರ ಜೀವನ ಚರಿತ್ರೆಯನ್ನು ಬರೆಯಲಿಚ್ಛಿಸುವ ಉತ್ಸಾಹಶಾಲಿಗಳಿಗೆ ಸಾಮಗ್ರಿಯನ್ನು ಒದಗಿಸಿಕೊಡುತ್ತವೆ. ಪಾತ್ರಗಳ ಗುಣ ಸ್ವಭಾವಗಳು ವ್ಯಕ್ತವಾಗುವುದಕ್ಕೆ ಬದಲಾಗಿ ಗ್ರಂಥಕರ್ತರ ಗುಣ ಸ್ವಭಾವ ಅವರು ಮೆಚ್ಚುವ ಅಭಿಪ್ರಾಯಗಳು ಇವೇ ವ್ಯಕ್ತಪಡುತ್ತವೆ. ಇದಕ್ಕೆ ಇಂಗ್ಲಿಷ್ ಸಾಹಿತ್ಯದಿಂದ ಸರ್ ವಾಲ್ಟರ್ ಸ್ಕಾಟ್ ಮತ್ತು ಜೇನ್ ಆಸ್ಟಿನ್‌ರವರನ್ನು ಒಂದು ಕಡೆಗೂ, ಜಾರ್ಜ್ ಇಲಿಯಟ್ ಮತ್ತು ಥ್ಯಾಕರೆ ಇವರನ್ನು ಮತ್ತೊಂದು ಕಡೆಗೂ ಉದಾಹರಣೆಯಾಗಿ ಹೇಳಬಹುದು. ಬಂಕಿಂಬಾಬುಗಳು ಇವೆರಡರಲ್ಲಿ ಶ್ಲಾಘ್ಯಮಾರ್ಗಾವಲಂಬಿಗಳೆಂದೂ, ಶ್ಲಾಘ್ಯಪಕ್ಷಕ್ಕೆ ಸೇರಿದವರೆಂದೂ ಪಾಠಕರಿಗೆ ಹೇಳಬೇಕಾಗಿಲ್ಲ.

ಈ ಗ್ರಂಥವನ್ನು ಆದಿಮಧ್ಯಾಂತಗಳೆಂದು ಮೂರು ಭಾಗಗಳಾಗಿ ವಿಂಗಡಿಸಬಹುದು. ಆದಿಭಾಗವಾದ ಮೊದಲಣ ಎಂಟು ಅಧ್ಯಾಯಗಳಲ್ಲಿ ಮುಖ್ಯ ಮುಖ್ಯವಾದ ಪಾತ್ರಗಳ ಪರಿಚಿತಿಯಾಗುವುದಲ್ಲದೆ ಅವುಗಳ ಮುಖ್ಯ ಗುಣಗಳೂ ಕಥೆಯನ್ನು ತಿಳಿದುಕೊಳ್ಳುವುದಕ್ಕೆ ಆವಶ್ಯಕವಾದ ಸಂಗತಿಗಳೂ ಗೊತ್ತಾಗುತ್ತವೆ. ಈ ಭಾಗದಲ್ಲಿಯೇ ನಾಗೇಂದ್ರನ ದಯಾಶೀಲತೆ, ಪಾಪಭೀತಿ, ಚಿತ್ತಚಾಂಚಲ್ಯ; ಸೂರ್ಯಮುಖಿಯ ಪತಿಭಕ್ತಿ, ಮಾತ್ಸರ್ಯ (?), ಕಮಲಮಣಿ ಶ್ರೀಶರ ಸಂತೋಷಚಿತ್ತತೆ, ಸೌಖ್ಯ, ವಿಶ್ವಾಸ, ಅಂತಃಕರಣ; ಕುಂದೆಯ

ಮುಗ್ಧತೆ, ಸರಳತೆ, ಮೃದುಸ್ವಭಾವ, ಬುದ್ಧಿ, ದುರದೃಷ್ಟ; ದೇವೇಂದ್ರನ ದುರ್ನಡತೆ, ಬುದ್ಧಿಶಕ್ತಿ; ಹೀರೆಯ ವಿಲಕ್ಷಣವಾದ ಹಿಂಸಕ ಗುಣ, ವಿಧಿಯ ವಿಚಿತ್ರವಾದ ವಿಲಾಸ ಇವು ಸೂಚಿಸಲ್ಪಟ್ಟವೆ. ಇದು ವಿಷವೃಕ್ಷದ ಬೀಜಾವಾಪನ ಕಾಲ.

ಮಧ್ಯಭಾಗವಾದ ಮುಂದಣ ಇಪ್ಪತ್ತು ಅಧ್ಯಾಯಗಳಲ್ಲಿ ಮೇಲೆ ಕಂಡ ಪಾತ್ರಗಳು ತಾವು ಸಿಕ್ಕಿಬಿದ್ದ ಘಟನಾಪಾಶದಲ್ಲಿ ತೊಡಕಿಕೊಂಡು ತಮ್ಮ ಗುಣಗಳಿಗೆ ಅನುರೂಪವಾಗಿ ನಡೆಯುತ್ತ ಅವುಗಳನ್ನು ಮತ್ತಷ್ಟು ವ್ಯಕ್ತಪಡಿಸುತ್ತ ಕಥೆಯನ್ನು ಬೆಳಸುತ್ತಾರೆ. ಈ ಭಾಗದಲ್ಲಿ ನಾಗೇಂದ್ರನ ಚಿತ್ತಚಾಪಲ್ಯವು ತಾನೇ ತಾನಾಗಿ ಹೋಗುತ್ತದೆ; ಆದರೆ ಅವನು ಗುಣವಂತನಾದ್ದರಿಂದ ಕೂಡಲೆ ಅದಕ್ಕೆ ವಶನಾಗದೆ ತನ್ನ ಮನಸ್ಸಿನೊಡನೆ ಹೋರಾಡಿ ಕ್ಷತವಿಕ್ಷತನಾಗಿ ಕೊನೆಗೆ ಸೋತು ಕುಂದೆಯನ್ನು ಮದುವೆ ಮಾಡಿಕೊಳ್ಳುತ್ತಾನೆ. ಸೂರ್ಯಮುಖಿಯು ಮೊದಲು ಸ್ವಲ್ಪಕಾಲ ಮಾತ್ಸರ್ಯದಿಂದ ಕುಂದೆಯನ್ನು ನೋಯಿಸಿದರೂ ಆಮೇಲೆ ಪತಿಭಕ್ತಿಯಿಂದ ಪ್ರೇರಿತಳಾಗಿ ಕುಂದೆಯನ್ನು ನಾಗೇಂದ್ರನಿಗೆ ತಾನೇ ನಿಂತು ಮದುವೆ ಮಾಡುತ್ತಾಳೆ. ಕಮಲಮಣಿ ಶ್ರೀಶರು ಬಂಗಾರದಂಥ ಸಂಸಾರ ಕೆಟ್ಟುಹೋಗುತ್ತದಲ್ಲ ಎಂದು ಸಂಕಟಪಟ್ಟು ಈ ವಿಷವೃಕ್ಷದ ಬೆಳವಣಿಗೆಯನ್ನು ತಡೆಯಲು ಪ್ರಯತ್ನ ಪಡುತ್ತಾರೆ. ಸುಖಾಭಿಲಾಷಿಯಾದ ದೇವೇಂದ್ರನಿಗೆ ಸುಖಾಭಿಲಾಷಿಣಿಯಾದ ಹೀರೆಯು ಪರಿಚಿತೆಯಾಗಿ ಹಸಿದ ನಾಯಿಗೆ ಹಳಸಿದ ಹಿಟ್ಟು ಸಿಕ್ಕಿದಂತಾಗುತ್ತದೆ. ಆದರೆ ದೇವೇಂದ್ರನ ಇಷ್ಟಪೂರ್ತಿಯಾಗದೆ ಹೀರೆಯ ವಿಲಕ್ಷಣಸ್ವಭಾವ ಮತ್ತು ಹೃದಯಸ್ಥಿತಿಗಳು ಮಾತ್ರ ಅವನಿಗೆ ಗೋಚರವಾಗುತ್ತವೆ. ಇದು ವಿಷವೃಕ್ಷದ ಅಂಕುರ ಬೆಳವಣಿಗೆಗಳ ಕಾಲ.

ಮೂರನೆಯ ಭಾಗವಾದ ಸುಮಾರು ಇನ್ನು ಇಪ್ಪತ್ತು ಅಧ್ಯಾಯಗಳಲ್ಲಿ (೩೦-೫೦) ಮೇಲೆ ಹೇಳಿದ ಘಟನಾವಳಿಗಳು ಪರಿಪಾಕಕ್ಕೆ ಬಂದು ತಕ್ಕ ಪರಿಣಾಮದಲ್ಲಿ ಮುಗಿಯುತ್ತವೆ. ನಾಗೇಂದ್ರನ ದೌರ್ಬಲ್ಯ ಜನಿತವಾದ ಅವಿವೇಕವು ಎಲ್ಲರನ್ನೂ ಶೋಕದಲ್ಲಿ ಮುಳುಗಿಸಿ ಕುಂದೆಯನ್ನು ಆಹುತಿಯಾಗಿ ತೆಗೆದುಕೊಳ್ಳುತ್ತದೆ. ಹೀರೆ ಮತ್ತು ದೇವೇಂದ್ರರು

ಪಾಪಪಂಕದಲ್ಲಿ ಮುಳುಗಿ ವಿಷವೃಕ್ಷದ ಫಲವನ್ನು ತಿಂದು, ನೆನೆಸಿಕೊಂಡರೆ ಎದೆಯು ಸೀಳಿ ಹೋಗುವಂಥ ಭಯಂಕರವಾದ ಸ್ಥಿತಿಯನ್ನು ಪಡೆದು, ನಿರ್ನಾಮರಾಗುವರು. ಇದು ವಿಷವೃಕ್ಷದ ಫಲ ಮತ್ತು ಫಲಾನುಭವಗಳ ಕಾಲ.

ಈ ಎರಡು ಮತ್ತು ಮೂರನೆಯ ಭಾಗಗಳಿಗೆ ಮಧ್ಯೆ ವಿಷ್ಕಂಭಕದಂತೆ ಇಪ್ಪತ್ತೊಂಬತ್ತನೆಯ ಅಧ್ಯಾಯವು ತರಲ್ಪಟ್ಟಿದೆ. ಇದರಲ್ಲಿ ಗ್ರಂಥಕರ್ತನು ರಂಗಸ್ಥಳಕ್ಕೆ ಬಂದು ಗ್ರೀಕ್ ನಾಟಕಗಳ ಕೋರಸ್ಸಿನಂತೆ ವಿಷವೃಕ್ಷ ಮತ್ತು ಅದರ ಫಲಗಳ ಮೇಲೆ ಒಂದು ಸಣ್ಣ ಉಪನ್ಯಾಸವನ್ನು ಕೊಡುವನು. ಇದು ಶುಷ್ಕ ಉಪನ್ಯಾಸದ ಜೋಲು ಮೋರೆಯನ್ನು ಹಾಕಿಕೊಂಡು ಶ್ರೋತೃಗಳ ಮುಂದೆ ಬಂದು ನಿಲ್ಲದೆ ಬಹು ಸ್ವಾರಸ್ಯವಾಗಿ ಆರಂಭವಾಗುತ್ತ ರೂಪಕ ಪ್ರಾಯವಾಗಿ, ಸುಂದರವಾದ ವೃಕ್ಷವೊಂದನ್ನು ವರ್ಣನೆ ಮಾಡುತ್ತ ಮಾಡುತ್ತ ನಮ್ಮ ಮನಸ್ಸನ್ನು ಆಕರ್ಷಿಸಿ ಕೆಲವು ಸಿದ್ಧಾಂತ ವಾಕ್ಯಗಳನ್ನು ಉಪದೇಶ ಮಾಡುವುದು. ಆ ಅಧ್ಯಾಯದ ಸಾರಾಂಶವನ್ನು ಪುನಃ ಇಲ್ಲಿ ಹೇಳಿ ಅದರ ಸೊಬಗನ್ನು ಈಡಾಡುವುದು ಅನಾವಶ್ಯಕ. ಆದರೆ ಅದರಲ್ಲಿ ಉಕ್ತವಾಗಿರುವ, ಕಥೆಗೆ ಬೀಜರೂಪವಾದ ಅಭಿಪ್ರಾಯವನ್ನು ಮಾತ್ರ ಸ್ವಲ್ಪ ವಿಶದಪಡಿಸಿ ಅದನ್ನು ಮುಖ್ಯ ಪಾತ್ರಗಳಲ್ಲಿ ಸಮನ್ವಯ ಮಾಡಿ ತೋರಿಸುತ್ತೇವೆ. ಏಕೆಂದರೆ ಗ್ರಂಥಕರ್ತನು ಇವೆಲ್ಲವನ್ನೂ ಸೂಚಿಸಿದ್ದಾನೆಯೇ ಹೊರತು ಸ್ಪಷ್ಟಪಡಿಸಿಲ್ಲ; ಹಾಗೆ ಸ್ಪಷ್ಟಪಡಿಸುವುದು ಅವನ ಕೆಲಸವೂ ಅಲ್ಲ; ಕಥೆಯ ಕೆಲಸ ಮೊದಲೇ ಅಲ್ಲ.

ಕಾಮಕ್ರೋಧಾದ್ಯರಿಷಡ್ವರ್ಗಗಳನ್ನು ಹಿಡಿದು ನಿಲ್ಲಿಸಿ ಚಿತ್ತಸಂಯಮ ಮಾಡದಿದ್ದರೆ ಘೋರವಾದ ಅನರ್ಥಗಳು ಪ್ರಾಪ್ತವಾಗುತ್ತವೆ. ಈ ಇಂದ್ರಿಯ ನಿಗ್ರಹವು ದುರ್ಬಲನಾದ ಮಾನವ ಸಾಮಾನ್ಯನಿಗೆ ಸಾಧ್ಯವಲ್ಲ. ಏಕೆಂದರೆ ಮೊದಲು ಚಿತ್ತಸಂಯಮದಲ್ಲಿ 'ಪ್ರವೃತ್ತಿಯು' ಹುಟ್ಟಬೇಕು. ಅದನ್ನು ಅಭ್ಯಾಸಮಾಡಿ ಅದರ ಫಲವನ್ನು ಅನುಭವಿಸುವುದಕ್ಕೆ ತಕ್ಕ 'ಸಾಮರ್ಥ್ಯವು' ಇರಬೇಕು. ಇವು ಅವರವರ ಸ್ವಭಾವ ಶಿಕ್ಷಣ ಸಂಸ್ಕಾರಗಳ ಮೇಲೆ ಹೋಗುತ್ತವೆ.

ಇದೇ ಮುಖ್ಯ ಸಾರಾಂಶ. ಇದರ ಅರ್ಥವು ಸುಲಭವಾಗಿ ಮನಸ್ಸಿಗೆ ಹಿಡಿಯುವಂತೆ ವಿದ್ಯಾರ್ಥಿಗಳಾಗಿದ್ದವರ, ಮತ್ತು ಆಗಿರುವವರ ಅನುಭವಕ್ಕೆ ಬಂದ ಒಂದು ಉದಾಹರಣೆಯನ್ನು ಹೇಳಿ ಮುಂದಕ್ಕೆ ಹೋಗುವೆವು; ಪರೀಕ್ಷೆಯು ಹತ್ತಿರ ಬಂದ ಹಾಗೆಲ್ಲ ಬೆಳಗಿನ ಜಾವಕ್ಕೆ ಎದ್ದು ಓದಬೇಕೆಂಬ ಸಂಕಲ್ಪವು ಪ್ರಬಲತರವಾಗಿ ಉಂಟಾಗುತ್ತ ಹೋಗುವುದು. (ವ್ಯಾಸಂಗಮಾಡಬೇಕೆಂಬ ಈ ಬುದ್ಧಿಯೇ ಈ ವಿಷಯದಲ್ಲಿ 'ಪ್ರವೃತ್ತಿ') ಆದರೆ ಸೋಮಾರಿತನದಿಂದ, ಅಲಾರಂ ಹೊಡೆದ ಕೂಡಲೆ ಏಳದೆ ಬಹಳ ಹೊತ್ತು ಮಲಗಿದ್ದ ಹಾಗೆಯೇ ಕಳೆದು ಹೋಗುವುದು. ಒಂದೊಂದುವೇಳೆ ಏಳಬೇಕೆಂಬ ಪ್ರಯತ್ನದಲ್ಲಿಯೇ ಪುನಃ ನಿದ್ರೆ ಬರುವುದೂ ಉಂಟು. ಹೀಗೆಯೇ ಎಷ್ಟೋ ದಿನಗಳು ನಿಶ್ಚಿತ ಸಂಕಲ್ಪವನ್ನು ಈಡೇರಿಸುವುದಕ್ಕೆ ತಕ್ಕ 'ಸಾಮರ್ಥ್ಯ' ಅಥವಾ ಮನೋದಾರ್ಢ್ಯವಿಲ್ಲದೆ ಕಳೆದು ಹೋಗುವುವು. ಒಂದು ದಿವಸವೂ ಹೊತ್ತಿಗೆ ಮುಂಚೆ ಏಳದೆಯೇ ಪರೀಕ್ಷೆಯ ದಿವಸವೂ ಏಳು ಗಂಟೆಗೇ ಎದ್ದು ಅದಕ್ಕೆ ತಕ್ಕ ಫಲ ಬರುವುದೂ ಉಂಟು. ಪರೀಕ್ಷೆಗೆ ಕೆಲವು ದಿವಸಗಳ ಮುಂಚೆ ಎಷ್ಟೋ ಕಷ್ಟದಿಂದ ಅಲಾರಂ ಹೊಡೆದ ಮೇಲೆ ಎದ್ದು ಸ್ವಲ್ಪವಾದರೂ ಸರಿಯಾಗಿ ವ್ಯಾಸಂಗ ಮಾಡಿ ಅದಕ್ಕೆ ತಕ್ಕ ಫಲ ಬರುವುದೂ ಉಂಟು. ಸಂಕಲ್ಪ ಮಾಡಿದಂದಿನಿಂದಲೇ ಹೊತ್ತಿಗೆ ಸರಿಯಾಗಿ ಅಲಾರಂ ಹೊಡೆದ ಕೂಡಲೇ ಚಟ್ಟನೆ ಎದ್ದು ಓದುವುದು ಅಪರೂಪ; ಹಾಗೆ ಮಾಡಿದರೆ ಅದಕ್ಕೆ ತಕ್ಕ ಫಲವೂ ಬರುತ್ತದೆ.

ಹೀಗೆಯೇ ಚಿತ್ತಸಂಯಮದಲ್ಲಿಯೂ ಪ್ರವೃತ್ತಿ ಅಥವಾ ದಮನ ಮಾಡಬೇಕೆಂಬ ಬುದ್ಧಿಯು ಮೊದಲು ಹುಟ್ಟಬೇಕು; ಅದು ಹುಟ್ಟಿದ ಮೇಲೆ ಹಾಗೆ ದಮನ ಮಾಡುವುದಕ್ಕೆ ಮನಸ್ಸಿಗೆ ದಾರ್ಢ್ಯ ಅಥವಾ ಸಾಮರ್ಥ್ಯವು ಬೇಕು. ಈ ಪ್ರವೃತ್ತಿಯು ವಿದ್ಯಾವಂತನೂ ಕಾರ್ಯಾಕಾರ್ಯಗಳನ್ನು ಅರಿಯುವಷ್ಟು ವಿವೇಕಿಯೂ ಆಗಿರುವ ಪ್ರತಿಯೊಬ್ಬನಿಗೂ ಉಂಟಾಗುತ್ತದೆ. ಆದರೆ ಕೆಟ್ಟದ್ದೆಂದು ತಿಳಿದ ಯಾವುದಾದರೊಂದು ದುಷ್ಕಾರ್ಯವನ್ನು ಬಿಡಬೇಕೆಂಬ ಬುದ್ಧಿ ಹುಟ್ಟಿದ ಕೂಡಲೆ ಮೈಮೇಲೆ ಬಿದ್ದ ಹಾವಿನಂತೆ ಅದನ್ನು ತ್ಯಜಿಸತಕ್ಕ ಮನೋದಾರ್ಢ್ಯವುಳ್ಳ

ಧೀರರು ಮಾತ್ರ ಅಪರೂಪ. ಕೇವಲ ವಿದ್ಯಾಬುದ್ಧಿಗಳು ಸಾಮರ್ಥ್ಯ ವನ್ನು ಕಲ್ಪಿಸಿಕೊಡಲಾರವು. ಅದು ಸ್ವಭಾವಜನ್ಯವಾಗಿ ಬಂದಿರ ಬೇಕು, ಇಲ್ಲವೇ ಪ್ರಾಪಂಚಿಕ ಅನುಭವದಿಂದ ತಲೆ ತಾಕಿತಾಕಿ ಮನ ಸ್ಸಿಗೆ ಶಿಕ್ಷಣವುಂಟಾಗಿ ಉತ್ಪನ್ನವಾಗಿರಬೇಕು. ಈ ಪ್ರವೃತ್ತಿ ಸಾಮರ್ಥ್ಯ ಗಳಿಂದ ಮಾನವನು ಎಷ್ಟರಮಟ್ಟಿಗೆ ಇಂದ್ರಿಯನಿಗ್ರಹ ಮಾಡಿಕೊಂಡು ದುಷ್ಕಾರ್ಯಗಳಿಂದ ದೂರವಾಗುತ್ತಾನೆಯೋ, ಅಷ್ಟರಮಟ್ಟಿಗೆ ಸುಖವನ್ನು ಅನುಭವಿಸುವನು. ಅವನ ಮನೆಯ ಅಂಗಳದಲ್ಲಿ ವಿಷವೃಕ್ಷವು ಅಷ್ಟೊ ಅಷ್ಟು ನಿಸ್ಸಾರವಾಗಿ, ಶೋಷಿಸಿ, ಕೊನೆಗೆ ನಿರ್ನಾಮವಾಗಬಹುದು. ಇದಕ್ಕೆ ಈ ಕಥೆಯಲ್ಲಿ ಬರುವ ಪಾತ್ರಗಳೇ ಉದಾಹರಣೆ.

ನಾಗೇಂದ್ರನು ವಿದ್ಯಾವಂತ; ವಿವೇಕಿ; ಗುಣಶಾಲಿ; ಅದಕ್ಕೋ ಸ್ಕರವೇ ಕುಂದೆಯ ಮೇಲೆ ಮನಸ್ಸು ಹೋದಾಗ ಅವನಿಗೆ ಚಿತ್ತದ ದಮನದಲ್ಲಿ ಪ್ರವೃತ್ತಿಯುಂಟಾಯಿತು. ಆದರೆ ಯಾವ ಅಭಾವವನ್ನೂ ಕಾಣದೆ ಐಶ್ವರ್ಯದಲ್ಲಿಯೇ ಬೆಳೆದಿದ್ದನಾದಕಾರಣ ಅವನಿಗೆ ಮಾನಸಿಕ ಶಿಕ್ಷಣವಾಗದೆ ತಕ್ಕಷ್ಟು ಸಾಮರ್ಥ್ಯವಿರಲಿಲ್ಲ. ಅದರಿಂದಲೇ ಅವನು ತನ್ನ ಇಷ್ಟದಂತೆ ಚಿತ್ತವನ್ನು ದಮನಮಾಡಲಾರದೆ, ಇದ್ದ ಅಲ್ಪ ಸ್ವಲ್ಪ ಸಾಮರ್ಥ್ಯದಿಂದಲೇ ಮನಸ್ಸಿನೊಡನೆ ಹೋರಾಡಿ ಕ್ಷತವಿಕ್ಷತನಾಗಿ ಹುಚ್ಚುಹಿಡಿದವನಂತಾಗಿ ಕೊನೆಗೆ ತನ್ನ ಚಾಪಲ್ಯವಸ್ತುವಿಗೆ ಅಧೀನ ನಾಗುವನು. ಅರಿಷಡ್ವರ್ಗಗಳಲ್ಲಿ ಮೋಹವೇ ಇವನ ' ಅರಿ ' ಎಂದು ಹೇಳಬಹುದು. ಸೂರ್ಯಮುಖಿಯ ಸತ್ಸ್ವಭಾವವನ್ನು ನೋಡಿ ಅವಳಲ್ಲಿ ಯಾವ ದೋಷವನ್ನೂ ಎಣಿಸುವುದಕ್ಕೆ ಮನಸ್ಸು ಒಡಂಬಡುವುದಿಲ್ಲ. ಆದರೂ ಅವಳು (ಕುಂದೆಯ ಮೇಲಣ) ಮಾತ್ಸರ್ಯದಿಂದ ಕಷ್ಟವನ್ನು ಅನುಭವಿಸಿದಳೆಂದು ಹೇಳಬಹುದು. ತನ್ನಲ್ಲಿ ಉಂಟಾದ ಮಾತ್ಸರ್ಯದ ಜ್ಞಾನವಾಗಲಿ ಅದನ್ನು ತಡೆಯುವುದರಲ್ಲಿ ಪ್ರವೃತ್ತಿಯಾಗಲಿ ಅವಳಿಗಿರ್ಲ ಲಿಲ್ಲ. ಹೀರೆಗೆ ಚಿತ್ತವನ್ನು ದಮನಮಾಡುವುದರಲ್ಲಿ ವಿಲಕ್ಷಣವಾದ ಶಕ್ತಿಯಿದ್ದಿತು. ಅದಕ್ಕೋಸ್ಕರವೇ ಸ್ವಾಭಾವಿಕವಾಗಿ ಸುಖಾಭಿಲಾಷಿಣಿ ಯಾಗಿದ್ದರೂ ಅವಳು ದೇವೇಂದ್ರನ ಪರಿಚಯವಾಗುವವರೆಗೂ ಕಳಂ ಕಿತಳಾಗಿರಲಿಲ್ಲ. ದೇವೇಂದ್ರನ ಪರಿಚಯವಾದ ಮೇಲೆ ಅವಳಿಗೆ ಸ್ವಾಭಾ

ವಿಕವಾಗಿದ್ದ ಪ್ರವೃತ್ತಿಸಾಮರ್ಥ್ಯಗಳಿಂದ ಅವನು ಅಂಕಾಗತನಾಗಿ ಬಂದಿದ್ದರೂ ತನ್ನ ಮನಸ್ಸು ಪರಾಜಿತಪ್ರಾಯವಾಗಿದ್ದರೂ, ಅದನ್ನು ತಿರುಗಿಸಿ ದೇವೇಂದ್ರನನ್ನು ತಿರಸ್ಕರಿಸುವಳು. ಇವನ ಮೇಲಣ ಕಾಮ ಕ್ರೋಧ ಮೋಹಗಳ ಜೊತೆಗೆ ಕುಂದೆಯ ಮೇಲಣ ಮಾತ್ಸರ್ಯ, ತಾನೇ ಬುದ್ಧಿವಂತೆಯೆಂಬ ಒಂದು ವಿಧವಾದ ಅಹಂಕಾರ ಇವೆಲ್ಲವೂ ಸೇರಿ ಅವಳನ್ನು ಪೂರ್ತಿಯಾಗಿ ಹಳ್ಳಕ್ಕೆ ಎಳೆದುವು. ತಾನು ಪರಾಜಿತಳಾಗುವ ಕಾಲದಲ್ಲಿ ದೇವೇಂದ್ರನ ಬಲೆಯಲ್ಲಿ ಸಿಕ್ಕಿಬಿದ್ದು ಅವನ ಮೋಹಮಂತ್ರಕ್ಕೆ ವಶಳಾಗಿದ್ದಿದ್ದರಿಂದ, ಅವಳಿಗೆ ಪ್ರವೃತ್ತಿಯಾಗಲಿ ಸಾಮರ್ಥ್ಯವಾಗಲಿ ಇರದೆ ವಿಷವೃಕ್ಷದ ಫಲವನ್ನು ಅನುಭವಿಸಿದಳು. ಇವಳಿಗಿಂತಲೂ ಸ್ವಲ್ಪ ಅತಿಶಯವಾಗಿ ಎಂದರೆ ಪೂರ್ಣವಾಗಿ ಅದರ ಫಲವನ್ನು ಅನುಭವಿಸಿದವನು ದೇವೇಂದ್ರ. ಅವನು ಚಿತ್ತದಮನ ಮಾಡಿಯೇ ಅರಿಯನು. ಪ್ರವೃತ್ತಿ ಸಾಮರ್ಥ್ಯಗಳ ವಾಸನೆಯನ್ನೇ ಕಾಣನು. ಯಾರಾದರೂ ತನ್ನ ಆಪ್ತರು ಆದರ ವಿಚಾರವನ್ನು ಎತ್ತಿದರೆ ತನ್ನ ದುಷ್ಕರ್ಮವನ್ನು ತ್ಯಜಿಸುವುದಕ್ಕೆ ಬದಲು ಅವರನ್ನೇ ತ್ಯಜಿಸಿಬಿಡುವುದಕ್ಕೆ ಸಿದ್ಧನಾಗಿದ್ದನು. ಇವರಿಬ್ಬರಿಗೂ ಅಂತ್ಯಕಾಲದಲ್ಲಿ ಪ್ರಾಪ್ತವಾದ ಸ್ಥಿತಿಯನ್ನು ನೆನಸಿಕೊಂಡರೆ ಕಣ್ಣಿನಲ್ಲಿ ನೀರು ಬರುವುದು. ಇನ್ನುಳಿದವಳು ಕುಂದನಂದಿನಿ—ಆಜನ್ಮದುಃಖಿನಿಯಾದ ಹತಭಾಗ್ಯಳಾದ ಕುಂದನಂದಿನಿ. ಇವಳನ್ನು ಯಾವ ತಪ್ಪಿಗಾಗಿ ಗ್ರಂಥಕರ್ತವಿಧಾತನು ಇಷ್ಟು ದುಃಖಕ್ಕೂ ಗುರಿಮಾಡಿದನೋ ಹೇಳಲಸಾಧ್ಯ! ಕಲ್ಕತ್ತೆಗೆ ಹೊರಡುವುದಕ್ಕಾಗಲಿ ನಾಗೇಂದ್ರನ ಯೋಚನೆಯನ್ನು ಬಿಡುವುದಕ್ಕಾಗಲಿ ಸಾಮರ್ಥ್ಯವಿಲ್ಲದೆ ಅದಕ್ಕೆ ತಕ್ಕ ಫಲವನ್ನು ಅನುಭವಿಸಿದಳೆಂದು ಹೇಳಬಹುದು. ಆದರೆ ಅವಳಂಥ ಏನೂ ಅರಿಯದ, ಪ್ರಪಂಚದಲ್ಲಿ ಇನ್ನೂ ಚೆನ್ನಾಗಿ ಕಣ್ಣನ್ನೇ ಬಿಡದ, ಹುಡುಗಿಯ ಮೇಲೆ ಈ ತಪ್ಪನ್ನು ಹೊರಿಸಿ ಇಂಥ ಕ್ರೂರ ದಂಡನೆಯನ್ನು ವಿಧಿಸುವುದು ಯಾವ ನ್ಯಾಯ? ಮನಸ್ಸನ್ನು ನಿರ್ಧರಮಾಡಿಕೊಂಡು ಪುಷ್ಕರಣಿಯಲ್ಲಿ ಮುಳುಗಿ ಸಾಯುವುದಕ್ಕೆ ಹೋದರೆ ಆ ಹಾಳು ವಿಧಿಯು—ವರ್ಷಾಂತರಗಳ ಹಿಂದೆಯೇ ಅವಳ ಭವಿಷ್ಯವನ್ನು ಸ್ವಪ್ನದಲ್ಲಿ ಸೂಚಿಸಿ ದೃಢಸಂಕಲ್ಪವನ್ನು ಕೈಕೊಂಡಿದ್ದ

ಆ ಹಾಳು ವಿಧಿಯು:—ಅವಳು ಆದುವರೆಗೆ ಪಟ್ಟ ದುಃಖ ಕಷ್ಟಗಳಿಂದ ತೃಪ್ತಿಪಡದೆ ನಾಗೇಂದ್ರನನ್ನು ಅಡ್ಡವಾಗಿ ತಂದು ಹಾಕಬೇಕೇಕೆ?

ಆದರೆ ಇದರಿಂದಲೇ ಶೋಕರಸಕ್ಕೆ ಇಷ್ಟು ಪುಷ್ಟಿಯುಂಟಾಗಿರುವುದು. ದುಷ್ಟನಿಗೆ ಉಂಟಾಗುವ ಕಷ್ಟದಲ್ಲಿ ಒಂದಂಶವು ಸಜ್ಜನನಿಗೆ ಬಂದರೂ ನಮ್ಮ ಮನಸ್ಸು ಅತಿಯಾಗಿ ನೋಯುವುದು. ಹರಿಶ್ಚಂದ್ರನಿಗೆ ಕಷ್ಟಬಂತೆಂದು ಕೇಳಿದರೆ ಉಂಟಾದ ದುಃಖವು ಒಬ್ಬ ಕ್ರೂರನಾದ ರಾಕ್ಷಸಾಧಮನಿಗೆ ಬಂತೆಂದು ಕೇಳಿದರೆ ಉಂಟಾಗುತ್ತದೆಯೆ? (ಇದರಂತೆ ಶ್ರೀರಾಮನ ವನವಾಸ, ಪಾಂಡವರ ಪರಾಜಯ ಮುಂತಾದವುಗಳು.) ಭಗವಂತನ ನಿಯಮವೆಂತಿರುವುದೋ! ಎಷ್ಟೋ ಸಜ್ಜನರು ಅಕಾರಣವಾಗಿ ನಾನಾ ವಿಧ ಮರ್ಮಭೇದಕಗಳಾದ ಹಿಂಸೆಗಳನ್ನು ಒಂದರ ಮೇಲೆ ಒಂದರಂತೆ ಅನುಭವಿಸಿರುವುದನ್ನು ನಾವು ಕಣ್ಣಾರ ನೋಡಿದ್ದೇವೆ. ಈ ಕುಂದನಂದಿನಿಯೂ ಅಂಥ ಹತಭಾಗ್ಯರಲ್ಲಿ ಒಬ್ಬಳು. ಅಥವಾ ವಿಷವೃಕ್ಷದ ವಿಷವು ಅಷ್ಟು ಘೋರವಾದದ್ದು. ಅದರ ನೆರಳಿನಲ್ಲಿ ಬಂದವರೂ ಸಾಯುವರು, ಇಲ್ಲವೇ ರೋಗ ಶೋಕಾದಿಗಳಿಗೆ ಗುರಿಯಾಗುವರು. ಇಲ್ಲದಿದ್ದರೆ, ಅರಿಷಡ್ವರ್ಗಗಳನ್ನು ಹತ್ತಿರಕ್ಕೇ ಬರಗೊಡಿಸದಿದ್ದ, ಅಮೃತಮಯವಾದ ಕಲ್ಪವೃಕ್ಷದಿಂದ ಸುಖಫಲವನ್ನು ಆಸ್ವಾದಿಸುತ್ತಿದ್ದ, ಕಮಲಮಣಿ ಶ್ರೀಶರ ದುಃಖಕ್ಕೆ ಕಾರಣವನ್ನು ಹೇಳುವುದು ಹೇಗೆ? ಅಥವಾ ಯಾವ ಕಾರಣವನ್ನೂ ಹೇಳಲಾರದೆ 'ದೈವಾಯತ್ತ' 'ವಿಧಿನಿಯಮ' ಎಂದು ಹೇಳಿಬಿಡೋಣವೋ?

ದೇವೇಂದ್ರನು ಮಾಡಿದ ಕೆಲಸಗಳಿಗೆ ಅವನಿಗೆ ಆದ ಶಿಕ್ಷೆಯು ತಕ್ಕದ್ದೆ. ಆದರೆ ಸ್ವಲ್ಪ ವಿಚಾರ ಮಾಡಿದರೆ ಇಲ್ಲಿಯೂ ಬಹಳ ಸಂಕಟವಾಗುತ್ತದೆ; ಅವನು ಮದುವೆಯಾಗುವುದಕ್ಕೆ ಮುಂಚೆ ಯೋಗ್ಯನಾಗಿಯೂ ವಿವೇಕಿಯಾಗಿಯೂ ಮೇಧಾವಿಯಾಗಿಯೂ "ವಿದ್ಯಾರ್ಜನೆಯಲ್ಲಿ ಯತ್ನವುಳ್ಳವನಾಗಿಯೂ ಪ್ರವೃತ್ತಿಯಲ್ಲಿ ಧೀರನಾಗಿಯೂ ಸತ್ಯನಿಷ್ಠನಾಗಿಯೂ ಇದ್ದನು. ವಿವಾಹದಿಂದಾ ಗುಣಗಳಿಗೆಲ್ಲ ಕಾಲ ಬಂದಂತಾಯಿತು." ವಿವಾಹವಾಗಿ

"ದುಶ್ಶೀಲಾ ಕರ್ಕಶಾ ಚಂಡೀ ನಿತ್ಯಂ ಕಲಹಕಾರಿಣೀ" ಆದ

ಹೈಮವತೀ ಮಹಾದೇವಿಯು ಮನೆಗೆ ಕಾಲಿಟ್ಟ ಕೂಡಲೆ ಅವನ ಸದ್ಗುಣಗಳಿಗೆಲ್ಲ ಜಲಾಂಜಲಿಯನ್ನು ಕೊಟ್ಟಂತಾಯಿತು. ಬುದ್ಧಿಯು ದುರ್ಮಾರ್ಗದಲ್ಲಿ ಪ್ರವೇಶಮಾಡಿ ವಿಷಯ ಸುಖಪ್ರಾಪ್ತಿಗೆ ಉಪಾಯ ವನ್ನು ಹುಡುಕುವುದರಲ್ಲಿ ತನ್ನ ತೀಕ್ಷ್ಣತೆಯನ್ನು ವ್ಯಕ್ತಪಡಿಸುತ್ತ ಬಂದಿತು. ಇಂಥ ಮಹಾತಾಯಿಯರಿಂದ ಎಂಥೆಂಥ ಸಮರ್ಥರೂ ಪ್ರತಿಭಾಶಾಲಿಗಳೂ ಆದ ಯುವಕರು ಚಿಕ್ಕವಯಸ್ಸಿನಲ್ಲಿಯೇ ಎಲ್ಲದರ ಮೇಲೆಯೂ ಜುಗುಪ್ಸೆಯನ್ನು ಪಡೆದು ತಮ್ಮ ಮಹತ್ವಾಕಾಂಕ್ಷೆಗಳಿಗೆಲ್ಲ ಕಣ್ಣೀರಿನಿಂದ ಜಲಾಂಜಲಿಯನ್ನು ಕೊಟ್ಟು, ಅವಿವೇಕದಿಂದ ದುರ್ಮಾರ್ಗಕ್ಕೆ ಬಿದ್ದು ಪತಿತರಾಗಿಹೋಗಬಹುದು ಅಥವಾ ವಿವೇಕದಿಂದ ದುರ್ಮಾರ್ಗಕ್ಕೆ ಬೀಳದೆ ದುಸ್ಸಹವಾದ ಜೀವವನ್ನು ಧಾರಣೆಮಾಡಿಕೊಂಡಿರ ಬಹುದೆಂಬ ಯೋಚನೆ ಮನಸ್ಸಿಗೆ ಬಂದಕೂಡಲೆ ಬಹುಸಂಕಟವಾಗಿ ದೇವೇಂದ್ರನ ಮೇಲೆಯೂ ಮರುಕಹುಟ್ಟುವುದು. ಆದರೆ ಅವನಿಗಾದ ಶಿಕ್ಷೆಯು ತನ್ನ ಹೆಂಡತಿಯನ್ನು ಜುಟ್ಟುಹಿಡಿದು ಎಳೆದುಕೊಂಡು ಹೋಗಿ ತೋಟದಲ್ಲಿ ಕೆಡವಿ ಹೊರಟುಹೋದ ಮೇಲೆ ಮಾಡಿದ ದುಷ್ಕರ್ಮಗಳಿಗಾಗಿ ಆದದ್ದೇ ಹೊರತು ಕುಂದನಂದಿನಿಯಂತೆ ನಿಷ್ಕಾರಣ ವಾಗಿ ಅನುಭವಿಸಿದ್ದಲ್ಲ. ಆದರೂ ಅದಕ್ಕೆ ಮೂಲ ಕಾರಣವಾವುದು? ದೇವೇಂದ್ರನಿಗೂ ಸುರೇಂದ್ರನಿಗೂ ನಡೆದ ಸಂಭಾಷಣೆಯನ್ನು (ಪು. ೫೦) ಓದಿದರೆ ದೇವೇಂದ್ರನಿಗೆ ಒಳ್ಳೆಯ ಹೆಂಡತಿ ದೊರೆಯದೆ ಪ್ರಪಂಚವು ನರಕದಂತೆ ಹೇಯವಾಗಿ ತನ್ನ ಪ್ರಾಣದ ಮೇಲೆ ಸಹ ಎಷ್ಟರಮಟ್ಟಿಗೆ ಜುಗುಪ್ಸೆ ಹುಟ್ಟಿ ಹೋಗಿತ್ತೆಂಬುದು ಸ್ಪಷ್ಟವಾಗಿ ಗೊತ್ತಾಗುವುದು.

" ಸ್ನಿಗ್ಧಂ ಭವತ್ಯಮೃತಕಲ್ಪಮಹೋ ! ಕಳತ್ರಂ |
ಹಾಲಾಹಲಂ ವಿಷಮಿವಾಪಗುಣಂ ತದೇವ ॥ "

(ಸದ್ಗುಣಗಳುಳ್ಳ ಹೆಂಡತಿಯು ಅಮೃತಕ್ಕೆ ಸಮಾನ; ಅವಳೇ ದುರ್ಗುಣಗಳುಳ್ಳವಳಾದರೆ ಕಾಲಕೂಟ ವಿಷಕ್ಕೆ ಸಮಾನ.)

ನಾವೆಲ್ ಅಥವಾ ಕಾದಂಬರಿಯು ಅಂಥ ಶ್ಲಾಘ್ಯವಾದ ಸಾಹಿತ್ಯ ವಲ್ಲವೆಂದೂ ಅದರ ಮೇಲೆ ಬರೆದು ಕೈ ನೋಯಿಸಿಕೊಳ್ಳುವುದು ಫಲ ಕಾರಿಯಲ್ಲವೆಂದೂ ಕೆಲವರ ಅಭಿಪ್ರಾಯ. ಆದರೆ " ವಿಷವೃಕ್ಷ"

ಮಾತ್ರ ಅಂಥ ಕಾದಂಬರಿಯಲ್ಲವೆಂದು ನಮ್ಮ ಅನುಭವಪೂರ್ವಕವಾದ ನಂಬುಗೆಯಾಗಿದೆ. ಇದು ಗದ್ಯರೂಪವಾಗಿದ್ದರೂ ಷೇಕ್ಸ್‌ಪಿಯರಿನ ವಿಷಾದ ನಾಟಕಗಳಿಗೆ ಸಮಾನವಾದುದೆಂದು ನಮ್ಮ ಅಭಿಪ್ರಾಯ. ಎಲ್ಲರೂ ತಾವು ತಾವು ಮೆಚ್ಚುವ ಗ್ರಂಥಕರ್ತರನ್ನು ಸರ್ವೋತ್ಕೃಷ್ಟರಾದ ಜಗತ್ಪ್ರಸಿದ್ಧರಾದ ಕವಿಗಳೊಡನೆ ಹೋಲಿಸುವುದು ರೂಢಿಯಾಗಿದೆ. ಆದರೆ ಇಲ್ಲಿ ಬಂಕಿಂಚಂದ್ರರನ್ನು—ಅಪ್ರತಿಮ ಪ್ರತಿಭಾ ಶಕ್ತಿ, ಪೂರ್ಣವಾದ ಕಲಾಕೌಶಲ್ಯಜ್ಞಾನ ಭಾಷಾ ಶೈಲಿಗಳ ಮೇಲೆ ಇರತಕ್ಕ ಅಪೂರ್ವವಾದ ಸಾಮರ್ಥ್ಯ, ಅತಿ ಸೂಕ್ಷ್ಮವಾದ ಮಾನುಷ ಸ್ವಭಾವ ಭಾವಾಂತರಗಳ ಅನುಭವ ಮುಂತಾದ್ದರಲ್ಲಿ ಸರ್ವೋತ್ಕೃಷ್ಟತೆಯನ್ನು ಪಡೆದಿರುವ ಬಂಕಿಂಚಂದ್ರರನ್ನು—ಜಗತ್ಪ್ರಸಿದ್ಧನಾದ ಸಾರ್ವಕಾಲಿಕನಾದ ಚಿರಜೀವಿಯಾದ ಷೇಕ್ಸ್‌ಪಿಯರಿನೊಡನೆ ಹೋಲಿಸಿದರೆ ನಿಷ್ಪಕ್ಷಪಾತಿಗಳೂ ಗುಣಜ್ಞರೂ ಆದ ರಸಿಕರು ಅದನ್ನು ಬಂಕಿಂಚಂದ್ರರ ಮೇಲಣ ಪಕ್ಷಪಾತದಿಂದುಂಟಾದ ಅತಿಶಯೋಕ್ತಿಯೆಂದು ಭಾವಿಸಲಾರರು. ಷೇಕ್ಸ್‌ಪಿಯರ್ ಬರೆದಿರುವ ವಿಷಾದನಾಟಕಗಳಲ್ಲಿ ಬರುವ ನಾಟಕದ ಲಕ್ಷಣಗಳೆಲ್ಲವನ್ನೂ 'ವಿಷವೃಕ್ಷ' ದಿಂದ ಉದಾಹರಿಸಬಹುದು. ಆ ನಾಟಕಗಳಲ್ಲಿ ಬರುವ ನಾಯಕರ ಲಕ್ಷಣ, ಶೋಕರಸ ಪ್ರತಿಪಾದನ ಮುಂತಾದವುಗಳನ್ನು ಈ ಹಿಂದೆಯೇ ಸ್ವಲ್ಪ ಸೂಚಿಸಿದ್ದೇವೆ. ಪುನಃ ಅದನ್ನು ತೆಗೆದುಕೊಂಡು ವಿವರಣಮಾಡುವ ಆವಶ್ಯಕತೆ ತೋರುವುದಿಲ್ಲ. ಆದರೂ ಇಷ್ಟನ್ನು ಮಾತ್ರ ಹೇಳುವೆವು. ಈ ಗದ್ಯರೂಪವಾದ ಕಾದಂಬರಿಯನ್ನು ಬಹಳ ಸುಲಭವಾಗಿ ಒಂದು ಅಪೂರ್ವವಾದ ವಿಷಾದ ನಾಟಕವನ್ನಾಗಿ ಪರಿಣಮಿಸುವಂತೆ ಮಾಡಬಹುದು; ಅದನ್ನು ಬಂಗಾಳಿ ಭಾಷೆಯಲ್ಲಿ ಹೀಗೆ ನಾಟಕರೂಪವಾಗಿ ಮಾಡಿದಾರೆಂದೂ ಕೇಳಿರುವೆವು.

ಉತ್ತಮವಾದ ಕಾವ್ಯವನ್ನು ಓದಿ ಅದರಿಂದ ಆನಂದ ಉಂಟ್ಟಾದರೆ ಆ ಆನಂದವನ್ನು ಯಥಾವತ್ತಾಗಿ ತಿಳಿಯಪಡಿಸುವುದು ಅಸಾಧ್ಯವಾದ ಕೆಲಸ. ಶಾರೀರಕ ಶಾಸ್ತ್ರಜ್ಞರಂತೆ ಅದಕ್ಕೆ ಕ್ಲೋರೋಫಾರಂ ಕೊಟ್ಟು (ವಿಷಪಾನಮಾಡಿಸಿ) ಕೊಂದು ತೀಕ್ಷ್ಣವಾದ ಆಯುಧಗಳನ್ನು

ಪ್ರಯೋಗಿಸಿ ಅದರ ಚರ್ಮವನ್ನು ಸುಲಿದು ಒಂದು ತೊಟ್ಟು ರಕ್ತ ಕೂಡ ಬಾರದಂತೆ ಈ ಕಟುಕ ಕೆಲಸವನ್ನು ಮಾಡಿಸತಕ್ಕ ಶಾಸ್ತ್ರಜ್ಞಾನ ನಿಪುಣತೆಗಳನ್ನು ಮೆಚ್ಚುತ್ತ ಅದರ ಅಂಗ ಪ್ರತ್ಯಂಗಗಳನ್ನೆಲ್ಲ ತೆಗೆದು ತೋರಿಸತಕ್ಕದ್ದು ವಿಮರ್ಶಕನ ಭಾಗಕ್ಕೆ ಬಂದದ್ದಾಗಿದೆ. ಶಾಸ್ತ್ರಜ್ಞನು ತಾನು ಛೇದಿಸಿದ ಪ್ರಾಣಿಯ ಜೀವವನ್ನು ತೋರಿಸಲಾಗದಂತೆ ವಿಮರ್ಶಕನೂ ಕಾವ್ಯದ ಜೀವವನ್ನಾಗಲಿ ಅದರ ಆಸ್ವಾದನದಿಂದುಂಟಾಗುವ ಆನಂದವನ್ನಾಗಲಿ ತೋರಿಸಲಾರನು. ಅವು ರಸಿಕರಿಗೆ ಸ್ವಾನುಭವದಿಂದ ವೇದ್ಯವಾಗುವುವೇ ಹೊರತು ವಿಮರ್ಶಕನ ಶುಷ್ಕ ವಿಮರ್ಶೆಯಿಂದ ಆಗತಕ್ಕುವಲ್ಲ. ಆದ್ದರಿಂದ ಈ ಗ್ರಂಥವನ್ನು ಆಸ್ವಾದನೆಮಾಡಿ ಅದರಿಂದ ನಮಗುಂಟಾಗುವ ಆನಂದವನ್ನೂ ಅದಕ್ಕೆ ಕಾರಣಗಳನ್ನೂ ವಿಸ್ತಾರವಾಗಿ ತಿಳಿಸುವುದಕ್ಕೆ ಹೋಗುವ ನಿಷ್ಫಲವಾದ ಯತ್ನವನ್ನು ಬಿಟ್ಟು ಒಂದೆರಡು ಮುಖ್ಯವಾದ ಸಂಗತಿಗಳನ್ನು ಮಾತ್ರ ಪ್ರಸ್ತಾಪಿಸುವೆವು. ಮೊದಲು ಈ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ಶೋಕ ಅಥವಾ ಕರುಣರಸವು ಹೇಗೆ ಸ್ಫೂರ್ತಿಯನ್ನು ಪಡೆದು ಪುಷ್ಟಿಯನ್ನು ಪಡೆದಿದೆ ಎಂದು ವಿಚಾರಮಾಡಬಹುದು. ಆದರೆ ಇಂಥ ವಿಚಾರಕ್ಕೆ ಗ್ರಂಥದಿಂದ ತೆಗೆದ ಅನೇಕ ವಾಕ್ಯಗಳೂ ಉದಾಹರಣೆಗಳೂ ಆವಶ್ಯಕ. ಇವುಗಳನ್ನು ಉಪಾಧ್ಯಾಯನು ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತ ಸೂಚಿಸುವುದಕ್ಕೆ ಸಾಧ್ಯವೇ ವಿನಾ ವಿಮರ್ಶೆಯೆಂದು ಬರೆಯುವುದಕ್ಕೆ ಹೊರಟಿರುವ ಲೇಖನದಲ್ಲಿ ವಿಸ್ತಾರವಾಗಿ ತರುವುದಕ್ಕೆ ಸಾಧ್ಯವಲ್ಲ. ಆದರೂ ಗ್ರಂಥದ ಅಂತ್ಯಭಾಗವಾದ ಕೊನೆಯ ಇಪ್ಪತ್ತು ಅಧ್ಯಾಯಗಳು ಹೇಗೆ ಹೆಜ್ಜೆ ಹೆಜ್ಜೆಗೂ ಹೆಚ್ಚುತ್ತಿರುವ ಒಂದು ದುರ್ದಮನೀಯವಾದ ಶೋಕರಸ ಪ್ರವಾಹದಂತಿರುವುವೆಂದೂ ಅದರಲ್ಲಿ ಕುಂದೆ ನಾಗೇಂದ್ರ ಮುಂತಾದವರೆಲ್ಲರೂ ಅವಶರಾಗಿ ಸಿಕ್ಕಿರುವರೆಂದೂ ಅವರ ಒಂದೊಂದು ಮಾತೂ, ಇತರ ಕಡೆಗಳಲ್ಲಿ ತಾಯಿತಂದೆಗಳಾದವರಿಗೆ ಸಂತೋಷವನ್ನುಂಟುಮಾಡುವ ಸತೀಶನ ಆಟಪಾಟಗಳೂ ಮುಗ್ಧವಾದ ಅಳುವೂ ಸಹ, ಕಣ್ಣಿಗೆ ತಟ್ಟನೆ ನೀರು ತರುತ್ತವೆಂಬುದನ್ನೂ ಪಾಠಕರು ಗಮನಿಸಬೇಕೆಂದು ಮಾತ್ರ ಹೇಳುವೆವು.

ಇಂಥ ಶೋಕರಸಪ್ರಧಾನವಾದ ಗ್ರಂಥದಲ್ಲಿಯೂ, ಘೋರವಾದ ಅಂಧಕಾರದಲ್ಲಿ, ಕಾರ್ಮುಗಿಲಿನ ಮಧ್ಯದಲ್ಲಿ, ನಾನಾ ರೂಪಗಳಿಂದ ಮಿಂಚುವ ಮಿಂಚಿನಂತೆ ಹಾಸ್ಯರಸವು ಸ್ಫುರಿಸುತ್ತಿರುವುದು. "ಪ್ಲಂಡರ್ ಘೇರ್ಲಿ ಅಂಡ್‌ಕೊ" (ನ್ಯಾಯವಾಗಿ ಕೊಳ್ಳೆ ಹೊಡೆಯುವ ಕಂಪೆನಿ!), ಮಸುಕಾದ ತಾಂಬ್ರದ ವರ್ಣದಂತೆ ದೇಹಕಾಂತಿಯುಳ್ಳ ಮೊಂಡ ಮೂಗಿನ ತಾರಾಚರಣ, ಅವನು ವರ್ತಮಾನ ಪತ್ರಿಕೆಗಳಿಂದ ಕದ್ದು ಅಥವಾ ಪಂಡಿತರಿಂದ ಬರೆಸಿಕೊಂಡು ಬಂದು ದೇವೇಂದ್ರಬಾಬುವಿನ ಉದಾತ್ತೋದ್ದೇಶವುಳ್ಳ ಸಮಾಜ ಸಂಸ್ಕಾರಕ ಸಭೆಯಲ್ಲಿ 'ಹೇ ಪರಮ ಕಾರುಣಿಕ ಪರಮೇಶ್ವರ!' ಎಂದು ತಪ್ಪದೆ ಆರಂಭ ಮಾಡುತ್ತಿದ್ದ ಉಪನ್ಯಾಸಗಳು, ಮತ್ತೊಬ್ಬ ಹುಡುಗನ ಕೈಯಲ್ಲಿದ್ದ'ತಿನ್ನುವ ಪದಾರ್ಥದ ಮೇಲೆ ಹೆಚ್ಚು ಗಮನವುಳ್ಳವನಾಗಿದ್ದ ಕಾರಣ ವಿಶೇಷ ವಿದ್ಯಾಲಾಭ ವಾಗುತ್ತಿದ್ದ ಕುಂದನಂದಿನಿಯ ಶಿಷ್ಯ, ನಾಗೇಂದ್ರನ ಅಂತಃಪುರದ ಮಹಲಿನಲ್ಲಿ ಹರಿದಾಸಿ ವೈಷ್ಣವಿಯು ಕ್ರಮವಾಗಿ ಕುರೂಪಿಯೆಂದೂ ಅವಳ ಸಂಗೀತವು ಕೆಲಸಕ್ಕೆ ಬಾರದುದೆಂದೂ ಆದ ತೀರ್ಮಾನ (೪೩–೪೪), ತಂಬಾಕು ದೇವೀಸ್ತೋತ್ರ (೪೭–೪೮), ಕಮಲಮಣಿ ಶ್ರೀಶರ ಪ್ರೇಮ ಸಂಭಾಷಣ, ಸತೀಶಚಂದ್ರನು ನಾಗೇಂದ್ರನ ಮುಖದಲ್ಲಿ ಜೊಲ್ಲು ಸುರಿಸಿ ಅವನ ಮೀಸೆಯನ್ನು ಎಳೆದು ಮಾವನಿಂದ ಪಡೆದ ಮುದ್ದಿಗಾಗಿ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದ ಬಗೆ, ನೋಡಿ ಅಳಬೇಕೋ ನಗಬೇಕೋ ಗೊತ್ತಾಗದ ದೇವೇಂದ್ರನ ಪ್ರಮತ್ತಾವಸ್ಥೆ (೮೬), ಮನುಷ್ಯರ ದೆಸೆಯು ಅತಿ ಭಯಾನಕವಾಗುತ್ತ ಬರುತ್ತಿರುವು ದೆಂದು ನಿರ್ಧರಿಸಿ ಪರಕಾಲದಲ್ಲಿ ಅವರ ಗತಿ ಏನಾಗಬಹುದೋ! ಎಂದು ಚಿಂತಿಸಿ ತನ್ನ ವಿಜ್ಞತೆಯನ್ನು ವ್ಯಕ್ತಪಡಿಸಿದ ಕಮಲಮಣಿಯ ಮನೆ ಯಲ್ಲಿದ್ದ ಬೆಕ್ಕು (೧೧೯), ಶ್ರೀಶಚಂದ್ರನು ಹುಕ್ಕೆಯ ಸಾಕ್ಷಿಯಾಗಿ ಮಾಡಿದ ಪ್ರಮಾಣ (೧೨೦), ಇವೆಲ್ಲವೂ ಪಾಠಕರಲ್ಲಿ ನಗುವನ್ನು ಬರಿಸದಿದ್ದರೆ ಅಂಥವರಿಗೆ ದೇವರು ನಗುವ ಶಕ್ತಿಯನ್ನೇ ಕೊಟ್ಟಿಲ್ಲ ವೆಂದು ಹೇಳಬೇಕು.

ಬಂಕಿಂಚಂದ್ರರ ವರ್ಣನಾಶಕ್ತಿಯನ್ನೂ, ಭಾವರಸಾರ್ಥಗಳಿಗೆ ಹೊಂದಿಕೊಂಡು ಹೋಗತಕ್ಕ ಅವರ ಭಾಷಾಶೈಲಿಗಳನ್ನೂ ಕುರಿತು ಹೇಳದಿದ್ದರೆ ಅವರಿಗೆ ಅನ್ಯಾಯ ಮಾಡಿದಂತಾಗುವುದು. ಭಾಷಾ ಶೈಲಿಗಳ ವಿಚಾರವನ್ನು ಸದ್ಯಕ್ಕೆ ಹಾಗೆಯೇ ಬಿಟ್ಟು, ಬಂಕಿಂಚಂದ್ರರ ವರ್ಣನಾಶಕ್ತಿಯನ್ನು ಕುರಿತು ಇಲ್ಲಿ ಸ್ವಲ್ಪ ಹೇಳುವೆವು. ನಮ್ಮ ದೇಶದ ಹಳಗನ್ನಡ ಗದ್ಯ ಅಥವಾ ಚಂಪೂಕಾವ್ಯಗಳಲ್ಲಿ ಬರತಕ್ಕ ವರ್ಣನೆಗಳೆಂದರೆ ಅಪೂರ್ವಪಾಂಡಿತ್ಯಪ್ರದರ್ಶನದ ಪರಾಕಾಷ್ಠತೆ, ಶ್ಲೇಷ ವಿರೋಧಾಭಾಸಾದ್ಯಲಂಕಾರಭರಿತವಾದ ದೀರ್ಘವಾಕ್ಯ ಸಮೂಹ, ಇವುಗಳ ಬಾಹುಳ್ಯವೇ ಹೆಚ್ಚಾಗಿದೆ. ವರ್ಣನೆಯ ಮುಖ್ಯ ಉದ್ದೇಶ ವೇನೆಂದರೆ—ವರ್ಣಿತ ವಸ್ತುವು ನಮ್ಮ ಕಣ್ಣಿಗೆ ಕಟ್ಟಿದಂತಾಗಬೇಕು; ಅದರ ಭಾವಚಿತ್ರವನ್ನು ಮುಂದೆ ತಂದಿಟ್ಟಂತಾಗಬೇಕು; ಅಷ್ಟೇ ಅಲ್ಲ; ಚಿತ್ರಗಾರನಾಗಲಿ ಭಾವಚಿತ್ರವನ್ನು ಹಿಡಿಯುತಕ್ಕ ಯಂತ್ರ ವಾಗಲಿ ಅಸಾಧ್ಯವೆಂದು ಕೈಬಿಡುವ ಎಷ್ಟೋ ಸೂಕ್ಷ್ಮ ವಿಷಯಗಳನ್ನು ಕವಿಯು ತನ್ನ ವಾಕ್ಸಂಪತ್ತಿಯಿಂದ ಪಾಠಕರ ಕಿವಿಯ ಮೂಲಕ ಅವರ ಮನಸ್ಸಿನಲ್ಲಿ ಅಚ್ಚಳಿಯದಂತೆ ಚಿತ್ರಿಸಬೇಕು. ಇಂಥಾ ಸೊಗಸಾದ ವರ್ಣನೆಗಳು ಈ ಗ್ರಂಥದಲ್ಲಿ ಎಷ್ಟೊಂದು ಬಂದಿವೆ! ಕೆಲವು ಬಾಹ್ಯ ಪ್ರಪಂಚವನ್ನು ವರ್ಣಿಸುತ್ತವೆ; ಕೆಲವು ಆಂತರಿಕ ಪ್ರಪಂಚವನ್ನು ವರ್ಣಿಸುತ್ತವೆ; ಮತ್ತೆ ಕೆಲವು ಸೃಷ್ಟಿ ಸೌಂದರ್ಯಾದಿಗಳನ್ನು ವರ್ಣಿ ಸುತ್ತವೆ; ಇಲ್ಲಿ ಗಮನಿಸಬೇಕಾದ ಅಂಶಗಳೇನೆಂದರೆ, ಕೆಲವು ಕಡೆ ಒಂದೊಂದು ವಾಕ್ಯವೂ ಒಂದೊಂದು ಪೂರ್ಣವಾದ ಚಿತ್ರವಾಗಿರುತ್ತದೆ. ಪ್ರಕೃತಿಯ ಅಥವಾ ಸುತ್ತಮುತ್ತಲೂ ಇರುವ ಸೃಷ್ಟಿವಸ್ತುಗಳ ವರ್ಣನೆ ಯಾದರೆ ಅದು ಪ್ರಸಕ್ತ ಪಾತ್ರದ ಹೃದಯದ ಪ್ರತಿಬಿಂಬದಂತಿರುತ್ತದೆ; ಆ ವ್ಯಕ್ತಿಯ ಸಣ್ಣ ಹೃದಯದಲ್ಲಿ ಚಲಿಸುತ್ತಿರುವ ಸೂಕ್ಷ್ಮಭಾವತರಂಗ ಗಳನ್ನು ಪ್ರತಿಬಿಂಬಿಸುವ ಘನದರ್ಪಣದಂತಿರುತ್ತದೆ; ಅದರಲ್ಲಿ ಉಂಟಾ ಗುವ ಶೋಕ ಸಂತೋಷಗಳನ್ನೂ, ಚಿತ್ರಹಿಂಸೆ ಪರಮಾನಂದಗಳನ್ನೂ ಸಹಾನುಭೂತಿಯಿಂದ ತಾನು ಅನುಭವಿಸುವಂತೆ ತೋರುತ್ತಿರುವ ಪ್ರೇಮಪೂರ್ಣವಾದ ಬಂಧುವಿನಂತಿರುತ್ತದೆ. ಇದಕ್ಕೆ ಒಂದೆರಡು

ಉದಾಹರಣೆಗಳನ್ನು ಕೊಡುವೆವು.*

ಗಂಗಾ ನದಿ (೪-೫), ನಾಗೇಂದ್ರನ ಮಹಲು, ಕಾಶೀ ಪಟ್ಟಣ ಇವುಗಳ ವರ್ಣನೆಯನ್ನು ಓದಿದರೆ ನಾವೇ ಅವುಗಳನ್ನು ಕಣ್ಣಾರ ನೋಡಿದಂತಾಗುವುದು. ನಮ್ಮಂಥ ಕಣ್ಣಿರುವ ಕುರುಡರು ಸ್ವಂತ ವಾಗಿ ಹೋಗಿ ನೋಡಿದರೂ ಅಷ್ಟು ಮತ್ತು ಅಂಥ ವಿಷಯಗಳು ದೃಗ್ಗೋಚರವಾಗವು. ಕುಂದೆ ಮತ್ತು ಹೀರೆಯರ ಸ್ವಗತ ಚಿಂತಾ ಪರಂಪರೆಯ ಕಥನವು ಅವರ ಹೃದಯಗಳನ್ನೇ ಬಿಚ್ಚಿ ನಮ್ಮ ಮುಂದಿಟ್ಟು ಅವುಗಳಲ್ಲಿ ಎದ್ದು ಬಿದ್ದು ಹೊಡೆದಾಡುವ ವಿವಿಧ ಭಾವ ತರಂಗಗಳನ್ನೆಲ್ಲವನ್ನೂ ವ್ಯಕ್ತಪಡಿಸುತ್ತದೆ (ಅಧ್ಯಾಯ ೧೬-೨೦). (ಇದರಲ್ಲಿ ಕುಂದೆಯು ಯೋಚಿಸುತ್ತ " ವಿಷವನ್ನು ತಿಂದು ಸಾಯಲೆ? ಆವ ವಿಷವನ್ನು ತಿಂದು ಸಾಯುಲಿ? ವಿಷವು ಎಲ್ಲಿದೆ? ತಂದು ಕೊಡುವ ವರಾರು? ತಂದು ಕೊಟ್ಟರೆ ಸಾಯುಬಲ್ಲೆನೆ? ಸಾಯುಬಲ್ಲೆನು. ಆದರೆ ಇಂದು ಬೇಡ." ಎಂದು ಹೇಳಿಕೊಳ್ಳುವ ಮಾತನ್ನು ಪಾಠಕರು ಗಮನಿಸಬೇಕು. ಏಕೆಂದರೆ ಕೊನೆಗೆ ಇದೇ ಅವಳ ಪರಿಣಾಮ; ಆದರೆ ಕುಂದೆ ಅದನ್ನು ಅರಿಯಳು; ಆದ್ದರಿಂದ ಪಾಠಕರಿಗೆ ಅವಳ ವಿಚಾರ ವಾಗಿ ಮತ್ತಷ್ಟು ದುಃಖವುಂಟಾಗುತ್ತದೆ.) ಸೂರ್ಯಮುಖಿಯ ಶಯ್ಯಾ ಗೃಹದಲ್ಲಿದ್ದ ಚಿತ್ರಪಟಗಳೆಂದು ಹೇಳುತ್ತ ಸ್ವಪ್ರತಿಭಾಮಂದಿರದಲ್ಲಿ ಸ್ವಪ್ರತಿಭಾಕಲ್ಪಿತವಾಗಿ ಸುಂದರತರವಾಗಿ ಪ್ರಕಾಶಿಸುತ್ತಿರುವ ಚಿತ್ರಪಟ ಗಳನ್ನು ವರ್ಣಿಸುವ ಗ್ರಂಥಕರ್ತನ ಸಾಮರ್ಥ್ಯವನ್ನು ಮೆಚ್ಚದಿರುವದು ಅಸಾಧ್ಯ. ಅದರಲ್ಲಿಯೂ, ಏನೂ ತಿಳಿಯದ ಹಸುಳೆಯಂತೆ ಸ್ಥಿರ ವಾಗಿಯೂ ಗಂಭೀರವಾಗಿಯೂ ಇರುವ ಮುಖಭಾವದಿಂದ ಕೂಡಿ 'ಭಾರಬಿಟ್ಟು' ಕುಳಿತಿರುವ ಕೃಷ್ಣನನ್ನಂತೂ ಮರೆಯುವುದಕ್ಕಾಗುವು ದಿಲ್ಲ. ಇಲ್ಲಿ ಚಿತ್ರಕಲಾನಭಿಜ್ಞನಾದ ಗ್ರಂಥಲೇಖಕನು ಅದ್ಭುತಚಿತ್ರ

* ಈ ಗ್ರಂಥದಲ್ಲಿ ಬರುವ ಎಷ್ಟೋ ಘಟನಾವಳಿಗಳ ಮೇಲೆ ಪ್ರಸಿದ್ಧರಾದ ಬಂಗಾಳಿ ಚಿತ್ರಗಾರರು ಚಿತ್ರಗಳನ್ನು ಬರೆದಿರುವರು. ಅದರ ಪ್ರತಿಗಳು ತೆಗೆಯ ಲ್ಪಟ್ಟು ಬಂಗಾಳಿ ಭಾಷೆಯಲ್ಲಿರುವ ಮೂಲ ವಿಷವೃಕ್ಷ ಗ್ರಂಥದಲ್ಲಿ ಸೇರಿಸಲ್ಪಟ್ಟವೆ.

ಕಲಾಕುಶಲನಾದ ಚಿತ್ರಗಾರನಾಗಿ ಪರಿಣಮಿಸಿದ್ದಾನೆ. ಕುಂದನಂದಿನಿಯ ತಂದೆಯು ಮರಣೋನ್ಮುಖನಾಗಿದ್ದಾಗ ಅವನು ಮಲಗಿದ್ದ ಮನೆಯ ಸ್ಥಿತಿ ಮುಂತಾದವುಗಳನ್ನು ನೆನೆಸಿಕೊಂಡರೆ, ಪಾಪ! ಆ ಸಣ್ಣ ಹುಡುಗಿಯು ಅಲ್ಲಿ ಹೇಗೆ ಒಬ್ಬಳೇ ಹೆದರದೆ ಇದ್ದಳೋ, ಅದರಲ್ಲಿಯೂ—ಎಷ್ಟಾದರೂ ನಿದ್ರೆಗೆಟ್ಟಿರಲಿ—ಅವಳಿಗೆ ಸ್ವಪ್ನವಾಗುವಂಥ ನಿದ್ರೆ ಹೇಗೆ ಬಂದಿತೋ ಎಂದು ಆಶ್ಚರ್ಯವಾಗುತ್ತದೆ. ಮುರುಕು ಸಾಮಾನು ಮಾತ್ರವಿದ್ದ ಆ ಮುರುಕು ಮನೆಯಲ್ಲಿ ಆ ಮುದುಕನು ಮುಮೂರ್ಷುವಾಗಿದ್ದನು. ಮಿಣಮಿಣಕ್ಕನೆ ಉರಿಯುತ್ತಿದ್ದ ಒಂದು ಮಣ್ಣು ಹಣತೆಯ ದೀಪ; ಹೊರಗೆ ಗಾಢಾಂಧಕಾರ; ಸೋನೆ ಮಳೆ; ಕೆಸರು; ಹೀಗಿರಲು ಎರಡು ಹಣತೆಯಲ್ಲಿಯೂ ತೈಲಾಭಾವದಿಂದ ದೀಪವು ಆಳಿಸಿ ಹೋಗುವುದು; ಅನಾಥೆಯಾದ ಹುಡುಗಿಯು ಪೂರ್ಣಾಂಧಕಾರದಲ್ಲಿ ಮುಳುಗಿ ಹೋಗುವಳು. (೬–೧೦). ಕುಂದೆಯು ಪುಷ್ಕರಣಿಯಲ್ಲಿ ಬಿದ್ದು ಸಾಯಬೇಕೆಂದು ಹೋಗುತ್ತಿದ್ದಾಗ "ನಾಲ್ಕು ದಿಕ್ಕುಗಳಲ್ಲಿಯೂ ಅಂಧಕಾರ; ಮಿಂಚಿನ ಹುಳುಗಳು ಸ್ವಚ್ಛವಾದ ನೀರಿನ ಮೇಲುಭಾಗಲ್ಲಿ ಏಳುತ್ತ ಬೀಳುತ್ತ ಮಿನುಗುತ್ತ ಕುಣಿದಾಡುತ್ತಿದ್ದವು. ಒಂದೆರಡು ಕೀಚಪಾಲಹಕ್ಕಿಗಳು ಕೂಗುತ್ತಿದ್ದವು. ನರಿಗಳು ಕೂಗುತ್ತಿದ್ದವು. ಒಂದೆರಡು ಮೇಘಗಳು ಆಕಾಶದಲ್ಲಿ ಹಾದಿತಪ್ಪಿ ಅಲೆದಾಡುತ್ತಿದ್ದವು. ಒಂದೊಂದು ತಡವೆ ಒಂದೆರಡು ನಕ್ಷತ್ರಗಳು ಮನಸ್ಸಿನ ದುಃಖದಿಂದ ಆಕಾಶದಿಂದ ಕಳಚಿಬೀಳುತ್ತಿದ್ದವು." ಸೂರ್ಯಮುಖಿಯಿಂದ ನಿಂದಿತಳಾಗಿ ಮನೆಯನ್ನು ಬಿಟ್ಟು ಹೊರಟು ನಾಗೇಂದ್ರನನ್ನು ನೋಡಿ ಹೋಗಬೇಕೆಂಬ ಆಶೆಯಿಂದ ಅವನು "ಮಲಗುವ ಕೊಠಡಿಯ ಗವಾಕ್ಷದ ಹತ್ತಿರ ಬಂದು ನಿಂತಳು; ಅಲ್ಲಿ ಒಳಗೆ ಬೆಳಕು ಕಾಣುತ್ತಿದ್ದಿತು. ಅದನ್ನು ಕಂಡು ಪತಂಗದ ಹುಳುಗಳು (ಕುಂದೆಯ ಹಾಗೆ) ದೀಪಕ್ಕೆ ಹೋಗಿ ಬೀಳುವ ಆಶೆಯಿಂದ ಒಳಗೆ ಹೋಗಲು ಪ್ರಯತ್ನಪಡುತ್ತಿದ್ದುವು. ಆದರೆ ಗವಾಕ್ಷದ ಬಾಗಿಲುಗಳಿಗೆ ಕನ್ನಡಿಯನ್ನು ಹಾಕಿದ್ದುದರಿಂದ ಆಶಾಭಗ್ನವಾಗಿ ಅಲ್ಲಿಯೇ ಹಾರಾಡುತ್ತಿದ್ದವು. ಕುಂದೆಯು ಮನಸ್ಸಿನಲ್ಲಿ ಅವುಗಳಿಗೋಸ್ಕರ ಪಶ್ಚಾತ್ತಾಪಪಟ್ಟಳು." ಮರ, ಮಳೆ,

ಗಾಳಿ, ಗುಡುಗು, ಮಿಂಚು ಎಲ್ಲವೂ ' ಎಲ್ಲಿಗೆ ಹೋಗುವೆ ?' ಎಂದು ಅವಳನ್ನು ಪ್ರಶ್ನೆಮಾಡಿದುವು. ಇದರಂತೆ ನಾಗೇಂದ್ರನು ಶೋಕನಿರ್ವಿಣ್ಣನಾಗಿ ಸೂರ್ಯಮುಖಿಯ " ಶಯ್ಯಾಗೃಹಕ್ಕೆ ಹೋದಾಗ ಎರಡನೆಯ ಯಾಮವು ಮೀರಿದ್ದಿತು. ಆ ರಾತ್ರಿ ಅತಿ ಭಯಂಕರವಾಗಿದ್ದಿತು ; ಗಾಳಿಯು ಹೆಚ್ಚಾಗುತ್ತ ಬರುತ್ತಿದ್ದಿತು. ಆಗಲೂ ಮಳೆಯಾಗುತ್ತಿದ್ದಿತು ; ಗಾಳಿಯು ಪ್ರಚಂಡವಾದ ವೇಗವನ್ನು ಹೊಂದುತ್ತಿದ್ದಿತು ; ಬಾಗಿಲುಗಳು ತೆರೆದಿದ್ದುವು ತೆರೆದಂತಿದ್ದುವು ; ಕದಗಳು ಗಾಳಿಯಿಂದ ಬಡಿದಾಡಿ ಶಿಡಿಲಿನಂತೆ ಶಬ್ದವನ್ನು ಮಾಡುತ್ತಿದ್ದುವು. ಗವಾಕ್ಷದ ಕದಗಳು ಶಬ್ದವಾಗುತ್ತಿದ್ದುವು. " ಅವನಿಗೆ " ಮೋಹನಿದ್ರೆಯಿಂದ ಎಚ್ಚರವಾದಾಗ ದಿನೋದಯವಾಗಿದ್ದಿತು. ಶಯ್ಯಾಗೃಹದ ಪಾರ್ಶ್ವದಲ್ಲಿದ್ದ ಉದ್ಯಾನದಲ್ಲಿ ಮರಮರದಲ್ಲಿಯೂ ಹಕ್ಕಿಗಳ ಕಲಕಲ ಶಬ್ದವಾಗುತ್ತಿದ್ದಿತು. ಮೇಲಿನ ಗವಾಕ್ಷದಿಂದ ಸೂರ್ಯನ ಕಿರಣವು ಗೃಹದಲ್ಲಿ ಪ್ರವೇಶಮಾಡಿತು. " ಸೂರ್ಯೋದಯದೊಡನೆ ಸೂರ್ಯಮುಖಿಯ ಉದಯವೂ, ಸೂರ್ಯಮುಖಿಯ ಉದಯದೊಡನೆ ಸುಖಸಂತೋಷಗಳ ಉದಯವೂ ಆದುವು.

ಇದುವರೆಗೂ ಹೇಳಿದ್ದು ಸ್ತೋತ್ರಭಾಗವಾಯಿತು ; ಬಂಕಿಂಚಂದ್ರರ ಮತ್ತು ವಿಷವೃಕ್ಷಗ್ರಂಥದ ಸ್ತೋತ್ರವಾಯಿತು. ಇನ್ನು ಗ್ರಂಥದ, ಗ್ರಂಥಕರ್ತರ, ಮತ್ತು ಭಾಷಾಂತರದ ದೋಷಗಳನ್ನು ತೋರಿಸುವ ನಿಂದಾಭಾಗವು ಬರಬೇಕಲ್ಲವೇ ? ಇದೂ ವಿಮರ್ಶಕರ ಕೆಲಸಕ್ಕೆ ಒಳಗಾದದ್ದೇ ; ಆದರೂ ಗ್ರಂಥದ ಸೊಬಗನ್ನು ಮೆಚ್ಚಿ, ಅಮೃತಪಾನ ಮಾಡಿ ಬಾಯನ್ನು ಚಪ್ಪರಿಸುತ್ತಿರುವ ರಸಿಕರಾದ ಪಾಠಕರಿಗೆ ತಿಕ್ತ ಕಟುಕ್ಷಾರಗಳನ್ನೂ ತಿನ್ನಿಸಿ ಅಸಹ್ಯಪಡಿಸಿ ವಿಕಾರವಾದ ಮುಖಭಂಗಿಗಳನ್ನು ಮಾಡಿಸಲಿಷ್ಟವಿಲ್ಲದೆ, ರಂಧ್ರಾನ್ವೇಷಣೆಯನ್ನೂ ದೋಷಖಂಡಯನ್ನೂ ಸದ್ಯಕ್ಕೆ ಹಾಗೆಯೇ ಬಿಟ್ಟು ಈ ವಿಮರ್ಶೆಯನ್ನು ಇಲ್ಲಿಗೆ ಮುಗಿಸುವೆವು.

೨—೩

---

# ರತ್ನಾವಳಿ : ಮಿತ್ರವಿಂದಾ ಗೋವಿಂದ

ಹಿಂದಿನ ಕಾಲದಲ್ಲಿ ಗುಣಾಢ್ಯನ ಬೃಹತ್ಕಥೆಯು ಕಾವ್ಯಸಾಮಗ್ರಿಯ ಒಂದು ದೊಡ್ಡಗಣಿಯಂತಿದ್ದಹಾಗೆ ತೋರುತ್ತದೆ. ಇದರಲ್ಲಿ ಸುಮಾರು ಎರಡು ಲಕ್ಷ ಗ್ರಂಥವಿತ್ತೆಂದು ಪ್ರತೀತಿ ಇದೆ. ಇದರ ಕಥೆಗಳ ಮೇಲೆಯೇ ರತ್ನಾವಳಿ, ನಾಗಾನಂದ, ಪ್ರಿಯದರ್ಶಿಕಾ, ಪಂಚತಂತ್ರ, ಕಾದಂಬರೀ, ಮಾಲತೀಮಾಧವ, ಮುದ್ರಾರಾಕ್ಷಸ, ಭೇತಾಳಪಂಚವಿಂಶತಿ, ಹಿತೋಪದೇಶ ಮುಂತಾದ ಪ್ರಸಿದ್ಧವಾದ ಗ್ರಂಥಗಳು ಹುಟ್ಟಿವೆ. ಆದರೆ ಬೃಹತ್ಕಥೆಯು ಈಗ ಇಲ್ಲ. ಅದರ ಆಧಾರದ ಮೇಲೆ ಸುಮಾರು ೧೧ ನೆಯ ಶತಮಾನದಲ್ಲಿ ಸೋಮದೇವನು ಬರೆದ ಕಥಾಸರಿತ್ಸಾಗರವೆಂಬ ಗ್ರಂಥ ಇದೆ. ಇದರಲ್ಲಿ ಬರುವ ಉಪಕಥೆಗಳನ್ನು ಬಿಟ್ಟರೆ ಒಟ್ಟಿನ ಮೇಲೆ ಇದು ವತ್ಸರಾಜ ಮತ್ತು ಅವನ ಮಗ ನರವಾಹನ ದತ್ತನ ಚರಿತ್ರೆಯಾಗುವುದೆಂದರೆ ಸುಳ್ಳಾಗುವಂತಿಲ್ಲ. ಆದ್ದರಿಂದ ವತ್ಸದೇಶದ ರಾಜನಾದ ಉದಯನನ ಕಥೆಯು ಬಹಳ ಹಳೆಯದು. ಕಾಳಿದಾಸನ ಕಾಲದಲ್ಲಿಯೇ ಉಜ್ಜಯಿನೀನಗರನಿವಾಸಿಗಳಾದ ವೃದ್ಧರು "ಉದಯನಕಥಾಕೋವಿದ" ರಾಗಿದ್ದರು. ಈ ಕಥೆಗೆ ಮೂಲವಾಗಿದ್ದಿರಬೇಕಾದ ಐತಿಹಾಸಿಕ ಸಂಗತಿಗಳು ಯಾವಾಗ ನಡೆದುವೋ ಗೊತ್ತಿಲ್ಲ. ಅಂತು ಅವು ಬಹುದಿನ ಜನರ ಬಾಯಲ್ಲಿದ್ದು ಕಳೆಗಟ್ಟಿ ಮೊದಲು ಗುಣಾಢ್ಯನ (ಸು. ಕ್ರಿ. ಶ. ೧ ನೆಯ ಶತಮಾನ) ಬೃಹತ್ಕಥೆಯಲ್ಲಿ ಲಿಖಿತರೂಪವಾಗಿ ಪರಿಣಮಿಸಿದುವೆಂದು ತೋರುತ್ತದೆ.

ಕಥಾಸರಿತ್ಸಾಗರದಲ್ಲಿ ವತ್ಸರಾಜನ ಕಥೆಯು ಹೀಗೆ ಹೇಳಿದೆ :—
ವತ್ಸದೇಶಕ್ಕೆ ದೊರೆಯಾದ ಸಹಸ್ರಾನೀಕ ರಾಜನು ತನ್ನ ಮಗನಾದ ಉದಯನನಿಗೆ ಪಟ್ಟವನ್ನು ಕಟ್ಟಿ ತನ್ನ ಮಿತ್ರ ಮಂತ್ರಿ ಸೇನಾಪತಿಗಳ ಮಕ್ಕಳಾದ ವಸಂತಕ ಯೌಗಂಧರಾಯಣ ರುಮಣ್ವಂತರನ್ನು ಉದಯನನ ಮಿತ್ರ ಮಂತ್ರಿ ಸೇನಾಪತಿಗಳನ್ನಾಗಿ ಗೊತ್ತುಮಾಡಿ

ತಾನು ತಪಸ್ಸಿಗೆ ಹೋದನು. ಉದಯನ ರಾಜನು ತನ್ನ ರಾಜ್ಯಭಾರ ವನ್ನು ಮಂತ್ರಿಗಳ ಕೈಯಲ್ಲಿಟ್ಟು ತಾನು ಬೇಟೆಯಾಡುವುದರಲ್ಲಿಯೂ ವೀಣೆ ನುಡಿಸುವುದರಲ್ಲಿಯೂ ಆಸಕ್ತನಾಗಿರುತ್ತ, ತನ್ನ ವೈರಿಯಾದ ಚಂಡಸೇನರಾಯನ ಮಗಳು ವಾಸವದತ್ತೆಯೇ ತನಗೆ ಯೋಗ್ಯಳಾದ ಹೆಂಡತಿಯೆಂದರಿತು ಅವಳನ್ನು ಪಡೆಯುವ ಯೋಚನೆಯಲ್ಲಿದ್ದನು. ಇತ್ತಲಾಗಿ ಚಂಡಸೇನನೂ ವತ್ಸರಾಜನೇ ವಾಸವದತ್ತೆಗೆ ಸರಿಯಾದ ವರನೆಂದು ನಿಶ್ಚಯಿಸಿ ಸೈನಿಕರು ತುಂಬಿದ ಒಂದು ಕೃತ್ರಿಮವಾದ ಆನೆಯನ್ನು ಕಾಡಿಗೆ ಕಳುಹಿಸಿ ಅದನ್ನು ರಾಜನು ಬೇಟೆಯಾಡು ತ್ತಿರುವಾಗ ಅವನನ್ನು ಹಿಡಿದು ಸೆರೆಹಾಕಿಸಿ ವಾಸವದತ್ತೆಗೆ ಸಂಗೀತ ವನ್ನು ಹೇಳಿಕೊಡುವಂತೆ ಅವನನ್ನು ನಿಯಮಿಸಿದನು. ಇದರಿಂದ ಅವರಿಗೆ ಪರಸ್ಪರಾನುರಾಗ ಉಂಟಾಗಲು, ವೇಷಹಾಕಿಕೊಂಡು ಬಂದು ಮಾಯ ಮಂತ್ರಗಳನ್ನು ಹೇಳಿಕೊಟ್ಟ ಯೌಗಂಧರಾಯಣ ಮತ್ತು ವಸಂತಕರ ಸಹಾಯದಿಂದ ರಾಜನು ವಾಸವದತ್ತೆಯನ್ನು ಎತ್ತಿಕೊಂಡು ಪಲಾಯನವಾದನು. ಚಂಡಸೇನನು ವತ್ಸರಾಜನನ್ನು ಬೇಡಿಕೊಂಡಂತಾಗಲಿಲ್ಲ. ವತ್ಸರಾಜನೂ ತನ್ನ ಪೌರುಷವನ್ನು ತೋರಿಸಿ ಮಾನವನ್ನು ಕಾಪಾಡಿಕೊಂಡಹಾಗಾಯಿತು. ವಾಸವ ದತ್ತೆಯೂ ವತ್ಸರಾಜನೂ ಸೇರಿದರು. ಇದೇ ಉಭಯತ್ರರಿಗೂ ಬೇಕಾಗಿ ದ್ದದ್ದು. ಅನಂತರ ಮದುವೆಯಾಯಿತು. ಶತ್ರುಗಳು ಮಿತ್ರರಾದರು.

ಈ ಹಿಂದೆ ವಾಸವದತ್ತೆಯ ಅಣ್ಣನಾದ ಗೋಪಾಲಕರಾಜನು ತನ್ನ ಪರಾಕ್ರಮದಿಂದ ಸಂಪಾದನೆಮಾಡಿದ ಬಂಧುಮತಿಯೆಂಬ ರಾಜಪುತ್ರಿಯನ್ನು ವಾಸವದತ್ತೆಯ ವಶಕ್ಕೆ ಒಪ್ಪಿಸಿದ್ದನು. ವತ್ಸರಾಜನ ಯೋಗ್ಯತೆಯನ್ನು ಬಲ್ಲ ವಾಸವದತ್ತೆಯು "ಲಾವಣ್ಯ ಜಲಧಿಯಲ್ಲಿ ಹುಟ್ಟಿದ ಮತ್ತೊಬ್ಬ ಲಕ್ಷ್ಮಿಯೋ ಎಂಬಂತಿದ್ದ" ಆಕೆಗೆ ಮಂಜುಳಿಕೆ ಎಂಬ ಹೆಸರಿಟ್ಟು ಅವಳನ್ನು ಗೋಪ್ಯವಾಗಿಟ್ಟಿದ್ದಳು. ಆದರೂ ರಾಜನು ವಸಂತಕನ ಸಹಾಯದಿಂದ ಉದ್ಯಾನ ಲತಾಗೃಹದಲ್ಲಿ ಗುಟ್ಟಾಗಿ ಅವ ಳನ್ನು ಗಾಂಧರ್ವವಿವಾಹ ಮಾಡಿಕೊಂಡನು. ಮರೆಯಲ್ಲಿ ನಿಂತು ಇದೆಲ್ಲವನ್ನೂ ನೋಡುತ್ತಿದ್ದ ವಾಸವದತ್ತೆಯು ಕೋಪಿಸಿಕೊಂಡು

ವಸಂತಕನನ್ನು ನಿರ್ಬಂಧದಲ್ಲಿರಿಸಿದಳು. ವಾಸವದತ್ತೆಯ ತೌರುಮನೆಯಿಂದ ಬಂದ ಸಾಂಕೃತ್ಯಾಯನಿಯ ಮರೆಹೊಕ್ಕು ವತ್ಸರಾಜನು ರಾಣಿಯನ್ನು ಒಲಿಸಿಕೊಂಡನು. ಆಮೇಲೆ ಅವಳೇ ಬಂಧುಮತಿಯನ್ನು ಗಂಡನಿಗೆ ಮದುವೆಮಾಡಿಕೊಟ್ಟಳು.

ಎಂದಿನಂತೆ ವತ್ಸರಾಜನು ಭೋಗಲೋಲುಪನಾಗಿ ಕಾಲಕಳೆಯುತ್ತಿರಲು ಮಹತ್ವಾಕಾಂಕ್ಷಿಯಾದ ಅವನ ಮಂತ್ರಿ ಯೌಗಂಧರಾಯಣನು ಒಡೆಯನಿಗೆ ಹೆಚ್ಚಾದ ರಾಜ್ಯಸಂಪಾದನೆ ಮಾಡಿಕೊಡುವ ಉದ್ದೇಶದಿಂದ ತಮಗೆ ವೈರಿಯಾಗಿದ್ದ ಮಗಧದೇಶದ ಪ್ರದ್ಯೋತರಾಯನೊಡನೆ ಸಂಬಂಧ ಬೆಳೆಸಬೇಕೆಂದು ಯೋಚಿಸಿ, ಅವನು ಹೆಣ್ಣಿನ ಮೇಲೆ ಹೆಣ್ಣು ಕೊಡುವುದಕ್ಕೆ ಒಪ್ಪದಿರಲು, ವತ್ಸರಾಜನು ಲಾವಾಣಕ ಪ್ರಾಂತಕ್ಕೆ ಬೇಟೆಗೆಂದು ಹೋಗಿದ್ದಾಗ ವಾಸವದತ್ತೆಯು ಸುಟ್ಟುಹೋದಳೆಂದು ವರ್ತಮಾನ ಹುಟ್ಟಿಸಿ ಬ್ರಾಹ್ಮಣವೇಷದಿಂದ ಅವಳನ್ನು ಕರೆದುಕೊಂಡು ಹೋಗಿ ಅವಳು ತನ್ನ ಮಗಳು ಅವಂತಿಕೆಯೆಂದೂ ಅವಳ ಗಂಡನು ದೇಶಾಂತರ ಹೋಗಿದ್ದನೆಂದೂ ಹೇಳಿ ಪ್ರದ್ಯೋತರಾಯನ ಮಗಳಾದ ಪದ್ಮಾವತಿಯ ವಶಕ್ಕೆ ಒಪ್ಪಿಸಿ, ವಸಂತಕನನ್ನು ಕುರುಡ ಹುಡುಗನೆಂದು ಅವಳ ಜೊತೆಯಲ್ಲಿಟ್ಟು ಹೊರಟುಹೋದನು. ಇದೆಲ್ಲವೂ ವಾಸವದತ್ತೆ ಒಪ್ಪಿಯೇ ನಡೆದದ್ದು. ಅತ್ತ ವತ್ಸರಾಜನಿಗೆ ತನ್ನ ಹೆಂಡತಿ ಸುಟ್ಟು ಹೋದಳೆಂದು ದುಃಖವಾಗುತ್ತಿದ್ದರೂ ತನ್ನ ಭಾವ ಮೈದುನ ಮಂತ್ರಿ ಇವರ ನಡತೆಯನ್ನು ನೋಡಿ ಒಳಗೆ ಏನೋ ಗುಟ್ಟಿರಬಹುದೆಂದು ಸಂಶಯವಾಗುತ್ತಿತ್ತು. ಈ ದುಃಖಕಾಲದಲ್ಲಿಯೇ ಯೌಗಂಧರಾಯಣನು ಮಗಧರಾಜನಿಗೆ ಹೇಳಿಸಿ ಪದ್ಮಾವತಿಯನ್ನು ವತ್ಸರಾಜನಿಗೆ ಮದುವೆಮಾಡಿಸಿದನು. ರಾಜನು ಹೊಸ ಹೆಂಡತಿಯೊಡನೆ ಲಾವಾಣಕ ಪಟ್ಟಣಕ್ಕೆ ಹಿಂತಿರುಗಿ ಬಂದು ಅಲ್ಲಿ ತನ್ನ ಭಾವಮೈದುನನ ಬೀಡಾರದಲ್ಲಿ ವಾಸವದತ್ತೆಯನ್ನು ಕಂಡು ಎಲ್ಲವನ್ನೂ ತಿಳಿದು ಸುಖವಾಗಿದ್ದನು.

ಈ ಕಥೆಯು ಬಹುಮಟ್ಟಿಗೆ ಗುಣಾಢ್ಯನ ಬೃಹತ್ಕಥೆಯಲ್ಲಿಯೂ ಹೀಗೆಯೇ ಇದ್ದಿರಬೇಕು. ಇದರ ಎರಡನೆಯ ಭಾಗವನ್ನು ಆಧಾರ

ವಾಗಿಟ್ಟುಕೊಂಡು ಶ್ರೀಹರ್ಷನು* ಪ್ರಿಯದರ್ಶಿಕೆ ರತ್ನಾವಳಿಯೆಂಬೆರಡು ಶೃಂಗಾರ ನಾಟಕಗಳನ್ನು ಬರೆದಿದ್ದಾನೆ. (ಲಾವಾಣಕದ ಕಾಡು ಒಂದ ರಲ್ಲಿ ಆರಣ್ಯಕೆಯನ್ನೂ ಲಾವಣ್ಯಜಲಧಿಯು ಇನ್ನೊಂದರಲ್ಲಿ ಸಾಗರಿಕೆ ಯನ್ನೂ ಸೂಚಿಸಿರಬೇಕೆಂಬುದು ಸ್ಪಷ್ಟವಾಗಿದೆ.) ಇವೆರಡರಲ್ಲಿಯೂ ಹೆಚ್ಚುಕಡಿಮೆ ಇರುವುದು ಒಂದೇ ಕಥೆ. ಒಂದರ ಪ್ರತಿಬಿಂಬವೇ ಮತ್ತೊಂದೆಂದು ಹೇಳಬಹುದು. ಎರಡರಲ್ಲಿಯೂ ಉದಯನನೇ ನಾಯಕ. ವಾಸವದತ್ತೆಯು ಅವನ ರಾಣಿ. ಒಂದರಲ್ಲಿ ಆರಣ್ಯಕೆಯೂ ಇನ್ನೊಂದರಲ್ಲಿ ಸಾಗರಿಕೆಯೂ ವಾಸವದತ್ತೆಯ ಕೈವಿಾರಿ ರಾಜನ ಮೋಹಕ್ಕೂ ರಾಣಿಯ ಕೋಪಕ್ಕೂ ಪಾತ್ರರಾಗಿ, ಆತ್ಮಹತ್ಯ ಮಾಡಿ ಕೊಳ್ಳುವುದಕ್ಕೆ ಹೋಗಿ ರಾಣಿಯ ಕೈಗೆ ಸಿಕ್ಕಿ ಬಂಧನದಲ್ಲಿದ್ದು ಕೊನೆಗೆ ಸಂಬಂಧಿಗಳಾಗಿ ಪರಿಣಮಿಸುವರು. ರಾಣಿಯೇ ಅವರನ್ನು ತನ್ನ ಗಂಡನಿಗೆ ಮದುವೆಮಾಡಿಕೊಡುವಳು. ಹೀಗೆ ವಸ್ತುವು ಒಂದೇ ಆದರೂ ಸಂವಿಧಾನ ಕೌಶಲ್ಯವು ಮಾತ್ರ ರತ್ನಾವಳಿಯಲ್ಲಿ ಮೇಲು. ಪ್ರಿಯ ದರ್ಶಿಕೆಯ ಸಂವಿಧಾನವನ್ನು ನೋಡಿದರೆ ಕವಿಯ ಶಕ್ತಿ ಇನ್ನೂ ಪರಿ ಪಾಕಕ್ಕೆ ಬಂದಿರಲಿಲ್ಲವೆಂದು ತೋರುತ್ತದೆ. ಆದರೆ ಪ್ರಿಯದರ್ಶಿಕೆಯು ಇನ್ನೂ ಮೊಗ್ಗಿನಂತಿದ್ದರೆ ಅದರ ತಂಗಿಯಾದ ರತ್ನಾವಳಿಯು ಮಕ ರಂದ ತುಂಬಿ ತುಳುಕುವ ಫುಲ್ಲ ಕುಸುಮದಂತಿದೆ.

ಈ ಕಥೆಯ ಕೊನೆಯ ಭಾಗವನ್ನು ಭಾಸ ಕವಿಯು 'ಸ್ವಪ್ನ ವಾಸವದತ್ತ' ಎಂಬ ಹೆಸರಿನಿಂದ ನಾಟಕ ಮಾಡಿದ್ದಾನೆ. ಇದರಲ್ಲಿ ವಾಸವದತ್ತೆಯು ಅವಂತಿಕೆ ಎಂಬ ಹೆಸರಿನಿಂದ ಪದ್ಮಾವತಿಯ ಜೊತೆ ಯಲ್ಲಿದ್ದು ಕೊನೆಗೆ ರಾಜನಿಗೆ ಗೊತ್ತಾಗುವ ಬಗೆ, ವಾಸವದತ್ತೆಯ ಮೇಲೆ ವತ್ಸರಾಜನಿಗಿದ್ದ ಅಪೂರ್ವ ಪ್ರೇಮ ಮುಂತಾದವುಗಳನ್ನು ಕವಿಯು ಬಹಳ ಚಮತ್ಕಾರವಾಗಿ ಪ್ರತಿಪಾದಿಸಿದ್ದಾನೆ. ಸ್ತ್ರೀಯರ ಕೋಮಲ ಹೃದಯದಲ್ಲಿ ಉಂಟಾಗುವ ಸೂಕ್ಷ್ಮಭಾವಗಳನ್ನು ವರ್ಣಿಸಿ ಅಶ್ಲೀಲದ ಲವಲೇಶವೂ ಇಲ್ಲದಂತೆ ಶೃಂಗಾರ ರಸವನ್ನು ಪುಷ್ಟೀಕರಿಸಿ

---

* ಶ್ರೀಹರ್ಷನೇ ಧಾವಕನೇ ಬಾಣನೇ ಎಂಬ ವಿಚಾರ ಇಲ್ಲಿ ಬೇಕಿಲ್ಲ.

ಮನೋಹರವಾಗಿರುವಂತೆ ಕಾವ್ಯರಚನೆ ಮಾಡಿರುವುದೆಂದರೆ ಸಂಸ್ಕೃತದಲ್ಲಿ ಭಾಸನೊಬ್ಬನೇಯೆಂದು ತೋರುತ್ತದೆ. ಇದರಲ್ಲಿ ಪದ್ಮಾವತಿಯು ದರ್ಶಕರಾಜನ ಮಗಳು; ಅವಂತಿಕೆಯು ಬ್ರಾಹ್ಮಣನ ತಂಗಿ; ಅವಳಿಗೆ ಕುರುಡ ತಮ್ಮನಿಲ್ಲ; ಪದ್ಮಾವತಿಯನ್ನು ಮದುವೆಯಾಗಿ ವತ್ಸರಾಜನು ಸಾರ್ವಭೌಮನಾಗುವನೆಂಬ "ಸಿದ್ಧಾದೇಶ"ವು ಸ್ಪಷ್ಟವಾಗಿದೆ.

ಕಾಳಿದಾಸನು ವತ್ಸರಾಜನ ಕಥೆಯನ್ನೇ ತೆಗೆದುಕೊಳ್ಳದಿದ್ದರೂ ಅಂಥ ಶೃಂಗಾರ ಪ್ರಧಾನವಾದ ವಸ್ತುವನ್ನೇ ಅವಲಂಬಿಸಿ ತನ್ನ ನಾಟಕಗಳನ್ನು ಬರೆದಿದ್ದಾನೆ. ಇವು ಗಾಂಭೀರ್ಯದಲ್ಲಿ ಭಾಸನ ಗ್ರಂಥಕ್ಕೆ ಒಂದು ಕೈ ಕಡಿಮೆಯೆಂದೂ ರತ್ನಾವಳಿಗೆ ಮೇಲೆಂದೂ ಹೇಳಬಹುದು. ಶೃಂಗಾರರಸವು ಇವರ ಕೈಯಲ್ಲಿ ಸಾಯಂಕಾಲಕ್ಕೆ ಮುಂಚಿನ ಶುಭ್ರಸ್ನಿಗ್ಧವಾದ ಬೆಳಕು ಕ್ರಮ ಕ್ರಮವಾಗಿ ಕೆಂಪು ತಿರುಗಿ ಉಜ್ವಲವಾದ ಸಂಧ್ಯಾರಾಗವಾಗಿ ಪರಿಣಮಿಸುವಂತಿದೆ.

ಶ್ರೀಹರ್ಷನು ಗುಣಾಢ್ಯನಿಂದ ಮೊದಲು ಉಪದೇಶವನ್ನು ಪಡೆದು ಅನಂತರ ಭಾಸಕಾಳಿದಾಸಾದಿಗಳನ್ನು ಸೇರಿ ಅವರ ಸೇವೆಯ ಫಲವನ್ನು ಪಡೆದಿರುವನೆಂದು ಹೇಳಬಹುದು. ವಿಕ್ರಮೋರ್ವಶೀಯ ಮಾಳವಿಕಾಗ್ನಿಮಿತ್ರಗಳಿಂದಂತೂ ಅನೇಕ ಸಂಭಾಷಣಾಸನ್ನಿವೇಶಗಳನ್ನು ನಿರ್ದಾಕ್ಷಿಣ್ಯವಾಗಿ ತಂದು ರತ್ನಾವಳಿಯಲ್ಲಿ ತುಂಬಿಕೊಂಡಿದ್ದಾನೆ. ಆದರೆ ಹಿಂದೆಯೇ ಸೂಚಿಸಿರುವಂತೆ ಅವುಗಳಿಗಿಂತಲೂ ರತ್ನಾವಳಿಯಲ್ಲಿ ಅರಿಸಿನ ಕುಂಕುಮದ ಬಣ್ಣವು ಪ್ರಬಲವಾಗಿದೆ. ನಾಗಾನಂದ ನಾಟಕವನ್ನೂ ಈತನೇ ಬರೆದಿರುವ ಪಕ್ಷದಲ್ಲಿ ಈ ಅತಿಶಯವಾದ ಶೃಂಗಾರಕ್ಕೆ ಷಡಕ್ಷರಿಯಂತೆ ತನ್ನ ಸ್ವಭಾವಗುಣದಿಂದ "ಬಲಾದಿವ ನಿಯೋಜಿತ"ನಾಗಿ ಮನಸೋತನೆಂದು ಹೇಳುವುದಕ್ಕಾಗುವುದಿಲ್ಲ. ವಿಚಾರ ಮಾಡಿದರೆ ಒಂದು ವಿಧದಲ್ಲಿ ಕಳಂಕವಾಗಿ ಕಾಣುವುದೇ ಶ್ರೀವತ್ಸವಾಗುತ್ತದೆ. ಕಥಾಸರಿತ್ಸಾಗರವನ್ನು ಓದಿದರೆ ವತ್ಸರಾಜನು ಸ್ತ್ರೀಲೋಲುಪತೆಯಲ್ಲಿಯೇ ಸದಾ ಮಗ್ನನಾಗಿ ಶೃಂಗಾರಶಾಸ್ತ್ರವಿಶಾರದನಾಗಿರುವಂತೆ

ಕಂಡುಬರುತ್ತದೆ. ಇಂಥ ರಾಜರೂ ಕೆಲವರಿರುವರು.* ಅವರ ಮೈಗೆ ಬಿಳಿಯ ಬಣ್ಣವನ್ನು ಬಳಿದರೆ ಸ್ವಭಾವವು ಬೆಳ್ಳಗಾಗುವುದೇ? ಸಾಹಿತ್ಯವು ಕವಿಯ ಪ್ರತಿಭಾಶಕ್ತಿಯೆಂಬ ಮಣಿದರ್ಪಣದಲ್ಲಿ ಗೋಚರವಾಗುವ ಪ್ರಪಂಚದ ಪ್ರತಿಬಿಂಬವೆಂದು ಹೇಳುವ ಪಕ್ಷಕ್ಕೆ ಆ ದರ್ಪಣವು ತನ್ನ ಮುಂದೆ ಬಂದ ಪದಾರ್ಥವನ್ನು ತಾನು ಪ್ರತಿಬಿಂಬಿಸುವುದಕ್ಕೆ ಪ್ರತಿಬಂಧಕವೇನು? ಅಲ್ಲದೆ ಭಾರತದ ದುಷ್ಯಂತನನ್ನು ಶಾಕುಂತಲದ ದುಷ್ಯಂತನನ್ನಾಗಿ ಪರಿಣಾಮ ಮಾಡಿದ ಕಾಳಿದಾಸನ ಕವಿತಾ ಸಾಮರ್ಥ್ಯವು ಅತಿಶಯವಾದದ್ದಿರಬಹುದು; ಆದರೂ ಪೂರ್ವ ಪಶ್ಚಿಮಗಳಂತಿರುವ ಜೀಮೂತವಾಹನ ವತ್ಸರಾಜರನ್ನು ಏಕಕಾಲದಲ್ಲಿ ಭಾವಿಸಬಲ್ಲ ಕವಿಯ ಸಾಮರ್ಥ್ಯವೂ ಮೆಚ್ಚತಕ್ಕದ್ದೇ; ಆದರೆ ಇಂಥ ಶೃಂಗಾರಪ್ರಧಾನವಾದ ನಾಟಿಕಗಳು† ಅದರಲ್ಲಿಯೂ ಈಗಿನ ಕಾಲದಲ್ಲಿ ಪಠ್ಯಪುಸ್ತಕಗಳೆಂದು ಸನ್ನದನ್ನು ಪಡೆದು ಗಂಭೀರವಾದ ಪಾಠ ನಡೆಯಬೇಕಾದ ಕಡೆಗಳಲ್ಲಿ ಬರುವುದು ಅಷ್ಟು ಹಿತವಾಗಿ ತೋರುವುದಿಲ್ಲ.

---

* ಇಂಥ ನಾಯಕರಿಗೆ ಧೀರಲಲಿತರೆಂದು ಹೆಸರು. ಅವರ ಲಕ್ಷಣವನ್ನು ದಶರೂಪಕದಲ್ಲಿ ಹೀಗೆ ಹೇಳಿದೆ—

ನಿಶ್ಚಿಂತೋ ಧೀರಲಲಿತಃ ಕಲಾಸಕ್ತಃ ಸುಖೀ ಮೃದುಃ ॥೨-೩.

† ರತ್ನಾವಳಿಗೆ ನಾಟಿಕಾ ಎಂದು ಹೆಸರು: ಇದು ಉಪರೂಪಕಗಳಲ್ಲಿ ಒಂದು. ಅದರ ಲಕ್ಷಣವು ಸಾಹಿತ್ಯದರ್ಪಣದಲ್ಲಿ ಹೀಗೆ ಹೇಳಿದೆ—

ನಾಟಿಕಾ ಕ್ಲ್ಪಪ್ತವೃತ್ತಾ ಸ್ಯಾತ್ ಸ್ತ್ರೀಪ್ರಾಯಾ ಚತುರಂಕಿಕಾ ।
ಪ್ರಖ್ಯಾತೋ ಧೀರಲಲಿತ ಸ್ತತ್ರ ಸ್ಯಾನ್ನಾಯಕೋ ನೃಪಃ ॥
ಸ್ಯಾದಂತಃಪುರಸಂಬದ್ಧಾ ಸಂಗೀತವ್ಯಾಪೃತಾಥವಾ ।
ನವಾನುರಾಗಾಕನ್ಯಾತ್ರ ನಾಯಿಕಾ ನೃಪವಂಶಜಾ ॥
ಸಂಪ್ರವರ್ತೇತ ನೇತಾಸ್ಯಾಂ ದೇವ್ಯಾಸ್ತ್ರಾಸೇನ ಶಂಕಿತಃ ।
ದೇವೀ ತತ್ರ ಭವೇಜ್ಜ್ಯೇಷ್ಠಾ ಪ್ರಗಲ್ಭಾ ನೃಪವಂಶಜಾ ॥
ಪದೇಪದೇ ಮಾನವತೀ ತದ್ವಶಃ ಸಂಗಮೋ ದ್ವಯೋಃ ।
ವೃತ್ತಿಃ ಸ್ಯಾತ್ಕೈಶಿಕೀ ಸ್ವಲ್ಪವಿಮರ್ಶಾಃ ಸಂಧಯಃ ಪುನಃ ॥

ದಶರೂಪಕದ ವ್ಯಾಖ್ಯಾನಕಾರನಾದ (ಹತ್ತನೆಯ ಶತಮಾನದ ಕೊನೆಯಲ್ಲಿದ್ದ) ಧನಿಕನು ತನ್ನ ವ್ಯಾಖ್ಯಾನದ ಸುಮಾರು ಎಂಬತ್ತು ಕಡೆಗಳಲ್ಲಿ ರತ್ನಾವಳಿಯ ಪ್ರಸ್ತಾಪವನ್ನೆತ್ತಿ, ಅರ್ಥಪ್ರಕೃತಿಗಳು ಅವಸ್ಥೆಗಳು ಸಂಧಿಗಳು ಅವುಗಳ ಅಂಗಗಳು ಮುಂತಾದವುಗಳಿಗೆಲ್ಲಾ ಉದಾಹರಣೆಯನ್ನು ಕೊಟ್ಟಿದ್ದಾನೆ. ಇದರಿಂದ ರತ್ನಾವಳಿಯು ಎಷ್ಟು ಲಕ್ಷಣಬದ್ಧವಾದದ್ದೆಂದು ಗೊತ್ತಾಗುತ್ತದೆ.

ಇವು ಕೆಂಡಸಂಪಗೆಯ ಹೂವಿನಂತೆ; ಅದರ ವಾಸನೆಯು ಬಹು ತೀಕ್ಷ್ಣ ವಾಗಿ ಆರಡಿಯ ದುಂಬಿಗಳಿಗೆ ತಲೆನೋವು ಬರುವುದಿರಲಿ, ಈರಡಿಯ ದುಂಬಿಗಳಿಗೂ ಅದರ ಸೇವನೆಯು ಅನಾರೋಗ್ಯವನ್ನುಂಟುಮಾಡು ವುದು. ಮೂಸಿನೋಡಿದರೆ ಮೂಗಿನಲ್ಲಿ ಹುಳು ಸೇರಿಕೊಳ್ಳುವುದು.

ರತ್ನಾವಳಿಗೆ ಸಾಮಗ್ರಿಯನ್ನು ಒದಗಿಸಿಕೊಟ್ಟ ಮೇಲಣ ಗ್ರಂಥ ಗಳನ್ನೂ ಅವುಗಳಲ್ಲಿ ಹೇಳಿರುವ ಕಥೆಯ ಸ್ವರೂಪವನ್ನೂ ನೋಡಿದರೆ ಶ್ರೀಹರ್ಷನು ತನ್ನ ಕೃತಿಯಲ್ಲಿ ಅಪೂರ್ವಕಲ್ಪನಾಸಾಮರ್ಥ್ಯವನ್ನೂ ಸಂವಿಧಾನ ಕೌಶಲ್ಯವನ್ನೂ ತೋರ್ಪಡಿಸಿರುವುದು ಗೊತ್ತಾಗುತ್ತದೆ ಆ ಕಾಲದ ಜನರಲ್ಲಿಯೋ ಅಥವಾ ಅವರ ನಂಬುಗೆಯಲ್ಲಿಯೋ ಪ್ರಚಾರ ದಲ್ಲಿದ್ದ ಯಕ್ಷಿಣೀವಿದ್ಯೆ ದೋಹದವಿದ್ಯೆ ಮುಂತಾದ ವಿದ್ಯೆಗಳನ್ನೂ ಅಂತಃಪುರದಲ್ಲಿ ಸಾಕುತ್ತಿದ್ದ ಗಿಣಿ ಕೋತಿ ಮುಂತಾದ ಪ್ರಾಣಿಗಳನ್ನೂ ಹಿಡಿದುಕೊಂಡು ಬಂದು ತನ್ನ ನಾಟಕದಲ್ಲಿ ಎಂಥ ವಿಚಿತ್ರವಾದ ಕೆಲಸ ಮಾಡಿಸಿದ್ದಾನೆ! ಕೋತಿಯು ಸರಪಳಿ ಕಿತ್ತುಕೊಂಡುಬಂದು ಮೊಸರನ್ನ ಕ್ಕಾಗಿ ಪಂಜರದ ಬಾಗಿಲನ್ನು ತೆಗೆದು ಶಾರಿಕೆಯನ್ನು ಓಡಿಸಿ ತಾನೂ ಓಡಿ ಹೋಗಲು ಎಷ್ಟು ನೈಸರ್ಗಿಕವಾಗಿ ಎಷ್ಟು ಬೇಗ ಎಷ್ಟು ಘಟನಾವಳಿಗಳಾಗ ವುವು! ಈ ವಾನರನು ತನ್ನ ಪೂರ್ವಿಕರು ರಾಮನಿಗೂ ಸೀತೆಗೂ ಮಧ್ಯೆ ಸೇತುವೆ ಕಟ್ಟಿದ್ದನ್ನು ಜ್ಞಾಪಿಸಿಕೊಂಡು ತಾನೂ ವತ್ಸರಾಜಸಾಗರಿಕೆ ಯರಿಗೆ ಮಧ್ಯೆಯಿದ್ದ ಕಂದಕಕ್ಕೆ ಸೇತುವೆ ಕಟ್ಟಿದ್ದಾನೆ. ಆಮೇಲೆ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂಬಂತೆ ವಸಂತಕನ ಅತಿ ಬುದ್ಧಿವಂತಿಕೆಯ ಮಾತಿನಿಂದ ನಾಯಕ ನಾಯಕಿಯರು ಚದರಿ ಹೋಗುವುದೂ, ಪೆಚ್ಚು ಬ್ರಾಹ್ಮಣನ ಬುದ್ಧಿಗೆ ಸದೃಶವಾದ ತಳ ತಂತ್ರವು ಹೊರಬಿದ್ದು, ರಾಜನು ಸಾಗರಿಕೆ ಬಂದಳೆಂದು ಮೋಹಪರ ವಶನಾಗಿ ಮಾತನಾಡಿಸುವುದಕ್ಕೆ ಹೋದಾಗ ಬರಸಿಡಿಲು ಬಿದ್ದಂತೆ ವಾಸವದತ್ತೆಯು ಕಾಣಿಸಿಕೊಂಡದ್ದೂ, ಹೆಂಡತಿಯು ಕೋಪದಿಂದ ನೇಣುಹಾಕಿಕೊಳ್ಳುತ್ತಾಳೆಂದು ನಿರಾಶನಾಗಿ ಬಿಡಿಸುವುದಕ್ಕೆ ಹೋದಾಗ ಸೊರಗಿ ಹೋದ ಹೂವಿನ ಗಿಡದ ಮೇಲೆ ಅಮೃತವರ್ಷ ವಾದಂತೆ ರತ್ನಾವಳಿಯು ಕಂಡದ್ದೂ, ಕೊನೆಗೆ ವಾಸವದತ್ತೆಯೇ

ಬಾಯಿಬಿಟ್ಟು ಹೇಳಿ ವತ್ಸರಾಜನು ರತ್ನಾವಳಿಯನ್ನು ಎತ್ತಿಕೊಂಡು ಬರುವಂತೆ ಮಾಡಿರುವ ಐಂದ್ರಜಾಲ ಘಟನೆಯೂ ಬಹು ವಿಚಿತ್ರವಾದುವು. ಕಾಳಿದಾಸನು ಶಾಕುಂತಲ ನಾಟಕದಲ್ಲಿ ನಾಯಕ ನಾಯಕಿಯರನ್ನು ಬಹು ಕುಶಲತೆಯಿಂದ ತಂದು ಸೇರಿಸಿದ್ದಾನೆ. ರತ್ನಾವಳಿಯಲ್ಲಿ ಸೇರುವವರು ನಾಯಕ ನಾಯಕಿಯರು ಮಾತ್ರವೇ ಅಲ್ಲ. ಹಡಗು ಒಡೆದು ದಿಕ್ಪಾಪಾಲಾದವರೂ ಪರದೇಶಕ್ಕೆ ಹೋಗಿದ್ದವರೂ ಸ್ವಕೀಯರೂ ಪರಕೀಯರೂ ಎಲ್ಲರೂ ಸೇರಿ ದೊಡ್ಡ ಅವಾಂತರವು ತಪ್ಪಿಹೋಗಿ ಮಹೋತ್ಸವವಾಗುವುದು. ಇದೊಂದು ಅಪೂರ್ವವಾದ ರೂಪಕಸನ್ನಿವೇಶ.

ಈ ನಾಟಕದಲ್ಲಿ ಪ್ರತಿಯೊಂದು ಪಾತ್ರವೂ ಘಟನೆಯೂ ಫಲಪ್ರಾಪ್ತಿಗೆ ಸಹಕಾರಿಯಾಗಿದೆ. ಒಂದಾದರೂ ಹೆಚ್ಚಿನದೆನ್ನಿಸಿಕೊಳ್ಳುವ ಹಾಗಿಲ್ಲ. ಅಭಿನಯದ ದೃಷ್ಟಿಯಿಂದ ನೋಡಿದರೆ ಉತ್ತರರಾಮ ಚರಿತ್ರೆ ಮುಂತಾದ ಕೆಲವು ನಾಟಕಗಳಿಗಿಂತ ಇದು ಎಷ್ಟೋ ಶ್ಲಾಘ್ಯವಾಗಿದೆಯೆಂದು ಹೇಳಬಹುದು. ರಂಗವು ಜನಗಳಿಂದ ಯಾವಾಗಲೂ ತುಂಬಿ ತುಳುಕುತ್ತಿರುತ್ತದೆ. ಉತ್ತೇಜಕವಾದ ಘಟನೆಯ ಮೇಲೆ ಘಟನೆಯು ಬರುತ್ತದೆ. ಪ್ರೇಕ್ಷಕರು ಕವಿತಾಪ್ರೌಢಿಮೆಯನ್ನು ಗ್ರಹಿಸಲಾರದೆ ನಿದ್ರೆ ಹೋಗುವಹಾಗಿಲ್ಲ. ಸಮುದ್ರದಲ್ಲಿ ಹಡಗು ಒಡೆದು ಹೋಗುವ ದೃಶ್ಯದಿಂದಾಗಲಿ, ವಸಂತೋತ್ಸವದ ದೃಶ್ಯದಿಂದಾಗಲಿ ಆರಂಭಮಾಡಿ ರತ್ನಾವಳಿ ಕಂಪೆನಿಯವರು ಅಭಿನಯಿಸುವ ಈ ನಾಟಕದ ಮೊದಲನೆಯ ಅಂಕವನ್ನು ಉತ್ತರರಾಮ ಚರಿತ್ರೆಯ ಮೊದಲನೆಯ ಅಂಕದೊಡನೆ ಹೋಲಿಸಿ ನೋಡಿದರೆ ಇದರ ನಿಜತ್ವವು ಗೊತ್ತಾಗುತ್ತದೆ.

ಮಿತ್ರವಿಂದಾಗೋವಿಂದದ ವಿಚಾರ ಹೇಳುವುದಕ್ಕೆ ಹೋಗಿ ರತ್ನಾವಳಿಯ ಚರಿತ್ರೆಯನ್ನು ಬರೆಯಬೇಕಾಯಿತು. ಏಕೆಂದರೆ ಮಿತ್ರವಿಂದಾಗೋವಿಂದಕ್ಕೆ ಭೂಷಣಬರಬೇಕಾದರೆ ರತ್ನಾವಳಿಯಿಂದಲೇ. ಅದು "ರಸದ ಹೊರಲೇಪದಲಿ ಹುದುಗಿದ ವಿಸುನಿ" ಯಂತೆ ಒಳಗೆ ಸೇರಿಕೊಂಡಿದೆ. ಆದರೂ ವಾಸುದೇವನು ವತ್ಸರಾಜನ ಅವತಾರವೆಂದೂ,

ರುಕ್ಮಿಣಿಯು ವಾಸವದತ್ತೆಯೆಂದೂ ಕುಚೇಲನು "ಸಬ್ಬವಕಾರ"ನಾದ ವಸಂತಕನೆಂದೂ ತಿಳಿದುಕೊಳ್ಳಬೇಕಾದರೆ ಶ್ರಮವಾಗುವುದಿಲ್ಲ. ಇದು ರತ್ನಾವಳಿಯ ಭಾಷಾಂತರವೆಂದು ಸಿಂಗರಾರ್ಯನು ಹೇಳಿಕೊಂಡಿಲ್ಲ. ಆತನ ಕಾಲದಲ್ಲಿ ಈ ಉದಾರವಾದ ಪದ್ಧತಿ ಇತ್ತೋ ಇಲ್ಲವೋ! ಪ್ರಾಯಶಃ ಇರಲಿಲ್ಲವೆಂದು ತೋರುತ್ತದೆ. ರತ್ನಾವಳಿಯನ್ನು ಓದಿದವರು ಮಿತ್ರವಿಂದಾಗೋವಿಂದ ಎಂಬ ಹೆಸರನ್ನು ಕೇಳುತ್ತಿದ್ದ ಹಾಗೇ "ಇದೇನು ಗೊವಿಂದಾ ಗೋವಿಂದ!" ಎನ್ನುವ ಹಾಗಾಗುವುದು. ಆಮೇಲೆ, ಗೌರಿದೇವಿಯ ಜೀವನಚರಿತ್ರೆಯಿಂದ ನಾಲ್ಕು ಸೊಗಸಾದ ಚಿತ್ರಗಳನ್ನು ತಂದು ಮುಂದಿಟ್ಟು ರತ್ನಾವಳಿಯ ನಾಲ್ಕು ಅಂಕಗಳನ್ನು ಸೂಚಿಸುವ ನಾಂದೀಪದ್ಯಗಳಿಗೆ ಬದಲಾಗಿ ಇಲ್ಲಿ ಚತುರ್ಮುಖನು ಮೂರು ತಲೆಗಳನ್ನು ಕಳೆದುಕೊಂಡು ಏಕಮುಖನಾದಂತೆ ಒಂದು ಪದ್ಯವಿದೆ. ಇದನ್ನು ತುಂಡುಮಾಡಿದ್ದಕ್ಕಾಗಿ ಬಂದ ಪಾಪದ ಪರಿಹಾರಕ್ಕೋಸ್ಕರಲೋ ಎಂಬಂತೆ ಸಣ್ಣದಾಗಿದ್ದ ಪ್ರಸ್ತಾವನೆಯನ್ನು ಸುಮ್ಮನೆ ಬೆಳೆಸಿ ಗ್ರಂಥಕರ್ತನು ತಾನು ತನ್ನ ಸಹೋದರ ತಮ್ಮದೊರೆ ಇವರನ್ನು ಹೊಗಳಿಕೊಂಡಿದ್ದಾನೆ. ಇನ್ನು ಸ್ವಲ್ಪ ದೂರ ಹೋದರೆ ಮಾತುಗಳ ಕೊನೆಯಲ್ಲಿ "ಎನೆ" "ಎಂಬುದುಂ" ಎಂಬ ಶಬ್ದಗಳು ಬಂದು ಇದು ನಿಜವಾಗಿಯೂ ರೂಪಕವೇ ದೃಶ್ಯಕಾವ್ಯವೇ ಎಂದು ಭ್ರಾಂತಿಯುಂಟಾಗುತ್ತದೆ. ಆಮೇಲೆ "ಅರಳೀಮರಬುಡತಳಿರೊಡೆರಡೆಲೆ" ಎಂಬಂಥ ಶೈಲಿಯು ಒಗಟಿನಂತೆ ಮುಂದೆ ಬಂದು ನಿಂತು ಆ ಭ್ರಾಂತಿಯನ್ನು ಬಲಪಡಿಸುತ್ತದೆ. ಠಕ್ಕು ಎಂಬ ಅರ್ಥ ಉಳ್ಳ ಉಕ್ತಿವವು ಹೆಜ್ಜೆಹೆಜ್ಜೆಗೂ ಅಡ್ಡಗಟ್ಟಿ ಅಪಾರ್ಥದಲ್ಲಿ ಪೆರ್ಗಳಿಸುತ್ತದೆ. ನಾಟಕವಿರುವುದು ಅಭಿನಯಿಸುವುದಕ್ಕೆ; ಆನಂದನಿಸ್ಯಂದಿಯಾಗಿ ಆನಂದವನ್ನು ಬೀರುವುದಕ್ಕೆ; ಹಳಗನ್ನಡದಲ್ಲಿ ಪಂಡಿತರಾಗಿರುವರ ಪಾಂಡಿತ್ಯ ಪ್ರದರ್ಶನಕ್ಕಲ್ಲ. ಇಂಥ ಕವಿಪುಂಗವರು ಷೇಕ್ಸ್‌ಪಿಯರಿನ ಕಾಲದಲ್ಲಿದ್ದಿದ್ದರೆ ಅವರನ್ನು ನೋಡಿ ಅವನು ತನ್ನ ನಾಟಕಗಳನ್ನೆಲ್ಲಾ ಆಂಗ್ಲೋಸ್ಯಾಕ್ಸನ್ ಭಾಷೆಯಲ್ಲಿ ಬರೆಯುತ್ತಿದ್ದನೋ ಏನೋ!

ಇದು ರತ್ನಾವಳಿಯ ಅಕ್ಷರಶಃ ಮಾಡಿದ ಭಾಷಾಂತರವಲ್ಲ.

ಅಲ್ಲಲ್ಲೇ ಏನು ಕಾರಣದಿಂದಲೋ ಸ್ವಲ್ಪಸ್ವಲ್ಪ ವ್ಯತ್ಯಾಸವಾಗಿದೆ. ವ್ಯತಾಸವಿರುವ ಕಡೆಯಲ್ಲೆಲ್ಲಾ ಸಾಮಾನ್ಯವಾಗಿ ಆಭಾಸವೇ; ದಿಕ್ಪ್ರದರ್ಶನಾರ್ಥವಾಗಿ ಇಲ್ಲಿ ಕೆಲವು ಉದಾಹರಣೆಗಳನ್ನು ಕೊಡುವೆವು—

ಪುಟ ೧೪. ಕಲಾ—ಇದು ದ್ವಿಪದೀಖಂಡಮೆಂಬ ಗಾನಂ. ಮೂಲದಲ್ಲಿ 'ಗಾನಂ' ಎಂಬುದಿಲ್ಲ. ಅದನ್ನು ಕೇಳಿಯೂ ವಿದೂಷಕನು ಎಷ್ಟು ದಡ್ಡನೇ ಆಗಲಿ "ಇದಱಿನೇಂ ಪೂಱಣಗಡುಬಂ ಮಾಡಲಕ್ಕುಮೆ" ಎಂದು ಪ್ರಶ್ನೆ ಮಾಡುತ್ತಿದ್ದನೇ?

ಪುಟ ೪೩. ವಿದೂ—ಎಲೆ ಮಾರಾಯನೆ ಇದೆಕೊಳ್ ಪಟ್ಟದರಸಿ ರುಕ್ಮಿಣೀದೇವಿಯೇ ಬಂದಪಳ್.

ಮೂಲದಲ್ಲಿ ಇವಳು "ಮತ್ತೊಬ್ಬಳು ವಾಸವದತ್ತೆ!" ಎಂದಿದೆ. ವಿದೂಷಕನು ಸಾಗರಿಕೆಯ ಕೋಪದ ಸ್ವಭಾವವನ್ನು ಹೀಗೆ ಸೂಚಿಸುತ್ತಾನೆ; ಆದರೆ ವಾಸವದತ್ತೆಯ ಹೆಸರು ಕಿವಿಗೆ ಬಿದ್ದ ಕೂಡಲೇ ಕಳ್ಳರ ಮನಸ್ಸೆಲ್ಲಾ ಹುಳ್ಳಗಾಗಿ ಎಲ್ಲರೂ ಓಡಿಹೋಗುತ್ತಾರೆ. ಅದನ್ನು "ಇದೆಕೊಳ್.........ಬಂದಪಳ್" ಎಂದು ಹೇಳಿದರೆ ಅದರ ಸ್ವಾರಸ್ಯವೆಲ್ಲಾ ಹೋಗುವುದಿಲ್ಲವೇ? ವಿದೂಷಕನು ಬೇಕೆಂದು ಅವರನ್ನು ಹೆದರಿಸಿದ ಹಾಗಾಗುವುದಿಲ್ಲವೇ?

ಪುಟ ೪೭. ಕುಚೇಲನು ದೇವಿಯನ್ನು ಅಪಮೃತ್ಯುವಿಗೆ ಹೋಲಿಸಿದ್ದಾನೆ. ಮೂಲದಲ್ಲಿ ಅಕಾಲದಲ್ಲಿ ಬಂದ ಮಳೆಗೆ ಹೋಲಿಸಿದೆ. ಅಪಮೃತ್ಯುವೂ ಅಕಾಲ ವರ್ಷವೂ ಎರಡೂ ಒಂದೇಯೇ? ಅಪಮೃತ್ಯು ಬಹು ಘೋರವಾಗುವುದಿಲ್ಲವೇ?

ಪುಟ ೫೮. ಇಲ್ಲಿ ವಾಸವದತ್ತೆಯ ಸ್ವಭಾವಕ್ಕೆ ಅನುಗುಣವಾದ ಒಂದು ಬಿರುಸಾದ ವಾಕ್ಯವು ಬಿಟ್ಟು ಹೋಗಿದೆ;—"ನಿಜ ನಾನು ಸಾಗರಿಕೆಯೇ ಹೌದು....ಸರ್ವವನ್ನೂ ಸಾಗರಿಕಾಮಯವನ್ನಾಗಿಯೇ ನೋಡುತ್ತಿರುವೆ"

ನಾಟಕವನ್ನು ಕಣ್ಣಿಂದ ನೋಡಿದವರು, ಈ ವಾಕ್ಯವು ಬಿಟ್ಟುಹೋದರೆ ಅಭಿನಯ ಸಾಮರ್ಥ್ಯವನ್ನು ಒರೆಹಚ್ಚಿ

ನೋಡುವ ಒಂದು ಸೊಗಸಾದ ದೃಶ್ಯವೇ ಕೈಬಿಟ್ಟು ಹೋಯಿತೆನ್ನದಿರಲಾರರು.

ಪುಟ ೬೭. ರತ್ನಾವಳಿಯಲ್ಲಿ ರಾಣಿಯು ಸಾಗರಿಕೆಯನ್ನು ಎಲ್ಲಿಟ್ಟಿದ್ದ ಳೆಂಬುದು ಕೊನೆಯವರೆಗೂ ಗೊತ್ತಾಗುವುದಿಲ್ಲ. ಇದರಿಂದ ಅವಳಿಗೆ ರಾಜನ ಮೇಲಿದ್ದ ಸಂದೇಹವೂ (ಕೊನೆಯಲ್ಲಿ) ಅವಳ ಆಂತರಿಕ ಮೃದು ಸ್ವಭಾವವೂ ಗೊತ್ತಾಗುತ್ತದೆ. ಮಿತ್ರವಿಂದಾಗೋವಿಂದದಲ್ಲಿ "ಅಂತಪುರದೊಳೇ ಅವಿಸಿ ದಳ್" ಎಂದು ಚಂದ್ರಲೇಖೆ ಮುಂಚೆಯೇ ಹೇಳಿಬಿಡು ತ್ತಾಳೆ.

ಇವೇ ಮುಂತಾದ ಬದಲಾವಣೆಗಳ ಫಲಾಫಲವನ್ನು ವಿಚಾರ ಮಾಡುತ್ತ ಹೋದಷ್ಟೂ ಪಾಂಡಿತ್ಯಕ್ಕೂ ರಸಿಕತೆಗೂ ಎಷ್ಟು ವೈತ್ರಿ ಇರುವುದೆಂಬುದು ಪಾಠಕರಿಗೇ ಗೊತ್ತಾಗುವುದು.

ಶೈಲಿಯ ಪ್ರಸ್ತಾಪ ಆಗಲೇ ಬಂದಿತ್ತು. ನಮಗೇನೋ ಶೃಂಗಾರ ರಸಭರಿತವಾದ ಈ ನಾಟಕಕ್ಕೆ ಈ ಭಾರವಾದ ಲೊಡಬಡ ಶೈಲಿಯು ಒಪ್ಪುವಂತೆ ತೋರುವುದಿಲ್ಲ. ಇದನ್ನು ಓದಿದಾಗಲೆಲ್ಲಾ ಪಾರಿಜಾತದ ಹೂಗಳನ್ನು ಕುಯ್ದು ದುಬಟಿಯಲ್ಲಿ ಗಂಟುಕಟ್ಟಿ ಹಾಕಿದಂತೆ ಭಾವನೆ ಯಾಗುತ್ತದೆ. ಅಲ್ಲದೆ ಕೆಲವೆಡೆಗಳಲ್ಲಿ ಸರಿಯಾದ ಪದಗಳನ್ನು ಹಾಕದೆ ಅರ್ಥವು ಎಷ್ಟು ಆಭಾಸವಾಗಿ ಪರಿಣಮಿಸಿದೆ! ಇದನ್ನು ನೋಡಿ :— (ಪುಟ ೩೭)ಯುದ್ಧದಲ್ಲಿ "ಪ್ರದ್ಯುಮ್ನನವನ ತಲೆಯುಂ ಶಸ್ತ್ರದಿಂ ಬೇಟೆ ಕೊಯ್ದಂ"(ಕರಕರನೆ)ಕೊಯ್ಯುವುದಕ್ಕೆ ಅವನೇನು ?—ಅದು ಯುದ್ಧ ರಂಗವೋ ಕಟುಕರ ಮನೆಯೋ ?

ಈ ನಾಟಕದಲ್ಲಿ ಬರುವ ಪಾತ್ರಗಳ ಹೆಸರನ್ನು ಕುರಿತು ಎರಡು ಮಾತು ಹೇಳಿ ಈ ಲೇಖನವನ್ನು ಮುಗಿಸುವೆವು. ರತ್ನಾವಳಿಯೆಂಬ ಹೆಸರಿನಿಂದುಂಟಾಗುವ ಸೌಂದರ್ಯಬೋಧೆಯು ಮಿತ್ರವಿಂದಾಗೋವಿಂದ ಎಂಬುದರಿಂದ ಖಂಡಿತವಾಗಿ ಆಗುವುದಿಲ್ಲ. ಮಿಕ್ಕ ಹೆಸರುಗಳನ್ನು ಬದಲಾಯಿಸಿರುವುದು ತನ್ನ ವೈಷ್ಣವಮತಪಕ್ಷಪಾತಿತ್ವವನ್ನು ತೋರಿ ಸುವ ಉದ್ದೇಶದಿಂದಲೂ ಈ ನಾಟಕ ಓದುವವರು ಕೃಷ್ಣಚರಿತ್ರೆಯನ್ನು

ಪಾರಾಯಣ ಮಾಡಿದ ಫಲ ಪಡೆಯಬೇಕೆಂಬ ಉದ್ದೇಶದಿಂದಲೂ ಆಗಿರುವುದಾದರೆ, ಇದೇನು ವಿಷ್ಣುವಿನ ವಿಷ್ಣುಭಕ್ತರ ಮತ್ತು ವೈಷ್ಣವ ಮತದ ದುರದೃಷ್ಟ ! ಈ ಉದ್ದೇಶ್ಯವನ್ನು ಸಫಲಗೊಳಿಸಿಕೊಳ್ಳುವುದಕ್ಕೆ ಇನ್ನು ಸ್ವಲ್ಪ ಗಂಭೀರವಾದ ಕಥೆಯೇ ಇರಲಿಲ್ಲವೆ ? ಕೃಷ್ಣನನ್ನು ನಾಟಕೆಯ ನಾಯಕನಾದ ಧೀರಲಲಿತನನ್ನಾಗಿ ಮಾಡಬೇಕಾಗಿತ್ತೆ ? ನಿಷ್ಕಾಮಕರ್ಮವನ್ನು ಆಚರಿಸಿ ಬೋಧಿಸಿದ ಮತ್ತು ಸಾವಿರಾರು ವರ್ಷಗಳಾದರೂ ಇನ್ನೂ ಒಡೆಯಲಾರದ ಒಂದು ಗಹನವಾದ ಸಮಸ್ಯೆಯಂತಿರುವ ಆ ವಾಸುದೇವನೆಲ್ಲಿ ! ಹೆಂಡತಿಯ ಹೆದರಿಕೆಯಿಂದ ಎಲ್ಲಿ ತನ್ನ ಗುಟ್ಟು ರಟ್ಟಾದೀತೋ ಎಂದು ಗಾಬರಿಪಡುತ್ತ ಅವಳು ಗೋಪ್ಯವಾಗಿಟ್ಟಿದ್ದ ಪರಿಚಾರಿಕೆಯನ್ನರಸಿಕೊಂಡು ತಿರುಗುತ್ತಿರುವ ಈ ವಾಸುದೇವನೆಲ್ಲಿ ? ಆಧ್ಯಾತ್ಮಿಕ ವಿಚಾರಗಳಲ್ಲಿಯೇ ಸದಾ ಮಗ್ನನಾಗಿರುತ್ತ ಹೆಂಡತಿ ಮಕ್ಕಳು ಹಸಿವಿನಿಂದ ಸಾಯುತ್ತಿದ್ದರೂ ಕೃಷ್ಣಪರಮಾತ್ಮನ ಮುಂದೆ ಅನ್ನಕ್ಕೆ ಕೈನೀಡದಿದ್ದ ಆ ಕುಚೇಲನೆಲ್ಲಿ ? ಆಧಿಭೌತಿಕ ವಿಚಾರಗಳಲ್ಲಿಯೇ ಸದಾ ಮಗ್ನನಾಗಿ ಮೂರು ಹೊತ್ತೂ ಹೊಟ್ಟೆಯ ಪ್ರಸ್ತಾಪವನ್ನೇ ಮಾಡುತ್ತ ಚಂದ್ರಲೇಖೆಯೊಡನೆ ನಾಯಕನಾಯಕಿಯರ ಸಂಗಮಕ್ಕೆ ಉಪಾಯವನ್ನು ಚಿಂತಿಸುವ ಅಂಜುಬುರುಕನಾದ ಈ ಐಲುತನದ ಕುಚೇಲನೆಲ್ಲಿ ? ಅವರ ಸ್ನೇಹವೆಲ್ಲಿ, ಇವರ ಸ್ನೇಹವೆಲ್ಲಿ !

ಇದನ್ನು ನೋಡಿದರೆ ಚಿಕ್ಕದೇವರಾಜವೊಡೆಯರ ಕಾಲದಲ್ಲಿ ಈ ವೀರವೈಷ್ಣವ ಸಹೋದರರು ಅರಸುಮನೆತನದವರಿಗೆಲ್ಲಾ ನಾಮ ಹಾಕಿಸಿ ಅವರಿಗೆ ವೈಷ್ಣವ ದೀಕ್ಷೆ ಕೊಟ್ಟು ಕೊನೆಗೆ ಹಾಸ್ಯಾಸ್ಪದವಾದದ್ದು ಜ್ಞಾಪಕಕ್ಕೆ ಬರುತ್ತಿದೆ.

ಹೀಗೆ ಅರಸಿಕತೆಯೆಂಬ ಕಾರ್ಕೋಟಕ ವಿಷವು ಕಾವ್ಯದ ದೇಹವನ್ನು ಹೊಕ್ಕರೆ, ಅದು ನಳಚಕ್ರವರ್ತಿಯಂತೆ ಭುವನಮೋಹನವಾಗಿದ್ದರೂ ಸೌಂದರ್ಯವಳಿದು "ಅಡ್ಡಮೋರೆಯ ಗಂಟುಮೂಗಿನ........" ಬಾಹುಕನಾಗಿ ಪರಿಣಮಿಸುವುದು.

೬.

---

# ಕೆಲವು ಸಣ್ಣ ಕತೆಗಳು

ಈ ಕಥೆಗಳನ್ನು ಬರೆದವರು ನಮ್ರತೆಯನ್ನು ತೋರ್ಪಡಿಸುವುದಕ್ಕೋ ಅಥವಾ ಅಹಂಕಾರ ಖಂಡನೆಗೋಸ್ಕರವೋ ತಮ್ಮ ಹೆಸರನ್ನು 'ಶ್ರೀನಿವಾಸನು' ಎಂದು ಹೇಳಿಕೊಂಡಿದ್ದಾರೆ. ಆದರೆ ಈ ಕಥೆಗಳ ಕರ್ತೃಗಳೆಂದು ಅವರಲ್ಲಿ ಕನ್ನಡಿಗರಾದ ನಮಗೆ ಗೌರವ; ಆ ಗೌರವವನ್ನು ಸೂಚಿಸುವುದು ಹೇಗೆ? ಅವರನ್ನು ಶ್ರೀನಿವಾಸರಾಯರು ಎಂದು ಕರೆಯೋಣವೇ, ಶ್ರೀನಿವಾಸಯ್ಯರೆಂದು ಕರೆಯೋಣವೇ? ಇಲ್ಲ, ಶ್ರೀನಿವಾಸಯ್ಯನವರೆಂದು ಕರೆಯೋಣವೋ, ಅಥವಾ ಶ್ರೀನಿವಾಸಯ್ಯಂಗಾರ್ಯರೆಂದೋ? ಇವರ ಗ್ರಂಥದಲ್ಲಿ ದೊರಕಬಹುದಾದ ಆಂತರಿಕ ಪ್ರಮಾಣದಿಂದ ಇವರು ಯಾವ ಪಂಗಡಕ್ಕೆ ಸೇರಿದವರೆಂಬುದು ಗೊತ್ತಾಗುವುದಿಲ್ಲ. ಆದರೆ ನಾವೂ ಅವರನ್ನು "ಶ್ರೀನಿವಾಸನು" ಎಂದು ಏಕವಚನದಲ್ಲಿ ನಿರ್ದೇಶಮಾಡುತ್ತಾ ನಮ್ಮ ಗ್ರಾಮ್ಯತೆಯನ್ನು ವ್ಯಕ್ತಪಡಿಸಿಕೊಳ್ಳಲಿಷ್ಟವಿಲ್ಲದೆ ಅವರನ್ನು ಶ್ರೀನಿವಾಸ—ರು ಎಂದು ಮಾತ್ರ ಹೇಳುತ್ತ ಹೋಗುತ್ತೇವೆ.

"ಈ ಸಣ್ಣ ಪುಸ್ತಕದಲ್ಲಿ ಹತ್ತು ಕತೆಗಳಿವೆ. (೧) ರಂಗನ ಮದುವೆ, (೨) ರಂಗಪ್ಪನ ದೀಪಾವಳಿ, (೩) ರಂಗಪ್ಪನ ಕೋರ್ಟುಷಿಪ್, (೪) ವೆಂಕಟರಾಯನ ಪಿಶಾಚ, (೫) ಒಂದು ಹಳೆಯ ಕತೆ, (೬) ಬಾದಷಹನ ನ್ಯಾಯ, (೭) ರಂಗಸಾಮಿಯ ಅವಿವೇಕ, (೮) ನಮ್ಮ ಮೇಷ್ಟರು, (೯) ಬೀದಿಯಲ್ಲಿ ಹೋಗುವ ನಾರಿ, (೧೦) ಇಂದಿರೆಯೋ ಅಲ್ಲವೊ?)........ಕೆಲವು ಮೊದಲೇ ಮಧುರವಾಣಿಯಲ್ಲಿ ಪ್ರಕಟವಾಗಿವೆ. ಉಳಿದುವು ಅಚ್ಚಾಗುವುದು ಇದೇ ಮೊದಲು" ಮಧುರವಾಣಿಯಲ್ಲಿ "ಇಲ್ಲಿಯ ತೀರ್ಪು" ಎಂಬ ಮತ್ತೊಂದು ಕಥೆಯನ್ನು ಓದಿದ್ದೆವು. ಅದೂ "ರಂಗನ ಮದುವೆ" ಯನ್ನು ಬರೆದವರೇ ಬರೆದದ್ದೆಂದು ಕೀರ್ತಿಶೇಷರಾಗಿರುವ ಆ ಪತ್ರಿಕೆಯ ಸಂಪಾದಕರು ನಮಗೆ ತಿಳಿಸಿದ್ದರು. ಅದೇಕೆ ಇಲ್ಲಿ ಸೇರಲಿಲ್ಲವೋ!

"ಸಣ್ಣ ಕಥೆ" ಯೆಂಬುದು ಈಚಿಗೆ ಬಂದ ಆಂಗ್ಲೇಯ ಸಾಹಿತ್ಯ ವಿಶೇಷ. ಗುಣಪೂರ್ಣವಾಗಿದ್ದರೆ, ಸಣ್ಣವು—ಅದರಲ್ಲಿಯೂ ಅವಕಾಶವೇ ಇಲ್ಲದ ಈಗಿನ ಕಾಲದಲ್ಲಿ—ಗ್ರಾಹ್ಯವಾಗುವಂತೆ ದೊಡ್ಡವಾಗುವುದಿಲ್ಲ. ಡಬ್ಲಿಯು. ಟಿ. ಸ್ಟೆಡ್ ಮಹಾಶಯನ ಒಂದಾಣೆಯ ಪುಸ್ತಕಗಳಲ್ಲಿದ್ದ ಆದರವು ಅನೇಕರಿಗೆ ಮೂಲ ಗ್ರಂಥಗಳಲ್ಲಿಲ್ಲ. ಇಂಥವು ಕೇವಲ ಪುಷ್ಪಸಾರವಿದ್ದಂತೆ; ಆನಂದವನ್ನು ಕೊಡುವ ರಸವತ್ತಾದ ಪದ್ಯ ಪಂಕ್ತಿಯಂತೆ.

ನಮ್ಮ ದೇಶದಲ್ಲಿ ಮೊದಲು ಪ್ರಸಿದ್ಧಿಗೆ ಬಂದ ಸಣ್ಣ ಕಥೆಗಳು ಸರ್ ರವೀಂದ್ರನಾಥ ಠಾಕೂರರು ಬರೆದವು. ಅವುಗಳ ರಚನಾ ಕೌಶಲ್ಯವೂ ಪ್ರತಿಪಾದನ ಕ್ರಮವೂ ವಸ್ತುವಿಶೇಷವೂ ಅನ್ಯಾದೃಶವಾಗಿವೆ. ಅವುಗಳನ್ನು ಓದಿದ ಹಿಂದೂದೇಶೀಯರಿಗೆ ಮತ್ತೊಬ್ಬ ಲೇಖಕನು ಬರೆದ ಸಣ್ಣ ಕಥೆಯು ಪ್ರಾಯಶಃ ರುಚಿಸಲಾರದು. ಆದರೆ ನಿಷ್ಪಕ್ಷ ಪಾತಿಯಾದ ರಸಿಕನಾದ ಯಾವ ಕನ್ನಡಿಗನೇ ಆಗಲಿ ಮ|| ಶ್ರೀನಿವಾಸ—ರು ಬರೆದ ಕಥೆಗಳನ್ನು ಕೈಗೆ ತೆಗೆದುಕೊಂಡರೆ ಆನಂದದಿಂದ ಉಬ್ಬಿ ಹೋಗದಿರಲಾರನು.

ಇವುಗಳಲ್ಲಿ ಕಂಡು ಬರುವ ಗುಣಗಳನ್ನು ಪರ್ಯಾಲೋಚಿಸುವುದಕ್ಕೆ ಮೊದಲು "ಬಾದಷಹನ ನ್ಯಾಯ" ಕ್ಕೆ ತಾಂಬೂಲ ಕೊಟ್ಟು ಕಳುಹಿಸಬೇಕು. ಇದನ್ನು ಓದುತ್ತ ಓದುತ್ತ ಅರ್ಥಾಲಂಕಾರಗಳ ಮಧ್ಯದಲ್ಲಿ ಬರುವ ಶಬ್ದಾಲಂಕಾರವೂ, ರಸವತ್ತಾದ ಪದ್ಯಗಳ ಮಧ್ಯದಲ್ಲಿ ಬರುವ ಪ್ರೌಢವಾದ ಗದ್ಯವೂ, ಧ್ವನಿ ಕಾವ್ಯದ ಮಧ್ಯೆ ಬರುವ ಚಿತ್ರ ಕಾವ್ಯವೂ ಜ್ಞಾಪಕಕ್ಕೆ ಬರುತ್ತವೆ. ಇದರಲ್ಲಿ ಪತ್ತೆದಾರಿಯ ಕಥೆಯಲ್ಲಿ ಬರುವಂಥ ಒಂದು ವಿಧವಾದ ವೈಚಿತ್ರ್ಯವೂ ಚಮತ್ಕಾರವೂ ಕಂಡು ಬರುತ್ತದೆಯೇ ಹೊರತು ಮಿಕ್ಕ ಕಥೆಗಳ ಸ್ವಾರಸ್ಯವೂ ಕಲಾ ಕೌಶಲ್ಯವೂ ಇರುವುದಿಲ್ಲ. ಗ್ರಂಥಕರ್ತರಿಗೆ ಮಿಕ್ಕ ಕಥಾವಸ್ತುಗಳಲ್ಲಿದ್ದಿರ ಬಹುದಾದ ಸ್ವಾನುಭವವು ಇದರಲ್ಲಿಲ್ಲದ್ದೇ ಇದಕ್ಕೆ ಕಾರಣವಿರಬಹುದೆಂದು ಹೇಳಬಿಡುತ್ತಿದ್ದೆವು; ಆದರೆ ಮ|| ಶ್ರೀನಿವಾಸ—ರು ತಮ್ಮ ಗ್ರಂಥದ ಆಧಾರದ ಮೇಲೆ ಅವರ ಜೀವನ ಸಂಗತಿಗಳನ್ನು ಊಹಿಸಕೂಡದೆಂದು ನಿಷೇಧಿಸಿದ್ದಾರೆ.

ಈ ವಿದೇಶೀಯ ಬಾದಷಹನು ಅಲ್ಲಿರಲಿ. ರಂಗಪ್ಪ, ರಂಗಸಾಮಿ ಎಲ್ಲಾ ನಮ್ಮವರು, ಮೈಸೂರು (ಮಯಿಳೂರು) ದೇಶದವರು. ನಮ್ಮ ದೇಶದವರೆಂದರೆ ಯಾರಿಗೆ ಅಭಿಮಾನವಿಲ್ಲ? ಅದರಲ್ಲಿಯೂ ಮೊದಲು ರಂಗನ ಮದುವೆ, ಮೊದಲನೆಯ ಮದುವೆ; ನಾರಾಯಣಮೂರ್ತಿಯ ಎರಡನೆಯ ಮದುವೆಯಲ್ಲ. ಅಲ್ಲಿಗೆ ಯಾರು ಹೋಗರು? ಅಲ್ಲಿ ಎಲ್ಲರೂ ಆದರ ಮಾಡುವರು; ತಿಳಿಯುವಂತೆ ಮಾತನಾಡುವರು—ವ್ಯಾಕರಣ ಪಾಂಡಿತ್ಯವನ್ನು ತೋರಿಸಬೇಕೆನ್ನುವ ಪಂಡಿತರಂತಲ್ಲ. ಎಲ್ಲರೂ ನಗುವರು; ಮನಸ್ಸಿಗೆ ನೋಯುದಂತೆ, ಬುದ್ಧಿ ಬರುವಂತೆ, ವಿನೋದ ವಾಗಿ ಮಾತನಾಡುವರು; ಸರಸವಾಗಿ ನಡೆದುಕೊಳ್ಳುವರು.

ರಂಗಪ್ಪನ ಕಥೆಗಳಲ್ಲಿ ಆರೇಳು ಮಕ್ಕಳ ತಂದೆಯಾದರೂ ಶಾಮಣ್ಣನವರು, ಕೆಲವು ವೃದ್ಧರಂತೆ ಅರಸಿಕರಾಗದೆ, ಸಂಸಾರದಲ್ಲಿ ಮುಳುಗಿ ಅದರ ರಸಾಸ್ವಾದ ಮಾಡುತ್ತ ಹಿಂದಿನ ಕಾಲದ ಪದ್ಧತಿ ಗಳನ್ನೂ ಈಗಿನ ಕಾಲದ ಪದ್ಧತಿಗಳನ್ನೂ ಹೋಲಿಸುತ್ತಾ ಅವುಗಳನ್ನು ಉಪಾಯವಾಗಿ ಖಂಡಿಸುತ್ತಾ ಸಂಸಾರವೆಂದರೆ ಬಾಯಲ್ಲಿ ನೀರಿಳಿಯು ವಂತೆ ಮಾಡುತ್ತಾರೆ. ಮುಂದಿನ ಕಥೆಗಳಲ್ಲಿ ಚಿಕ್ಕವಯಸ್ಸಿನವರಾದರೂ ಶ್ರೀನಿವಾಸ—ರು, ಅನುಭವಶಾಲಿಗಳಾದ ವೃದ್ಧರಂತೆ ಸಂಸಾರದಲ್ಲಿ ಬರ ಬಹುದಾದ ಅವಿವೇಕ ಅಪ್ರಬುದ್ಧತೆ ಕಷ್ಟ ಸುಖ ಮುಂತಾದುವುಗಳನ್ನು ಕುರಿತು ಪ್ರಸ್ತಾಪಿಸುತ್ತಾರೆ.

ಏನೇ ಆಗಲಿ ಇವು ಎಂದಿಗೂ ಉಪನ್ಯಾಸಗಳಂತಿಲ್ಲ. ಸ್ವಲ್ಪ ಮೊಂಡಬುದ್ಧಿಯವರಾದರೆ ಇವುಗಳಲ್ಲಿ ಬೋಧನೆಯಿದೆ ಎಂದೇ ತಿಳಿಯು ವುದಿಲ್ಲ. ಇವುಗಳನ್ನು ಓದಿದರೆ ಮನೆಯಲ್ಲಿ ಅಣ್ಣತಮ್ಮಂದಿರೂ ಅಕ್ಕ ತಂಗಿಯರೂ ಇಷ್ಟಮಿತ್ರರೂ ಸೇರಿ ಮಾತನಾಡಿದರೆ ಹೇಗೋ ಹಾಗೆ ಭಾವನೆಯಾಗುತ್ತದೆ. ವಿಷಯವು ಅಷ್ಟು ಕೋಮಲವಾದದ್ದೋ ಪ್ರತಿ ಪಾದನಕ್ರಮವೂ ಅಷ್ಟೇ ಮೃದುವಾದದ್ದು. ಈ ತಮ್ಮ ಮೃದುವಾದ ಪದ್ಧತಿಯಲ್ಲಿಯೇ ಈಗಿನ ಕಾಲದ ನಮ್ಮ ಸಮಾಜದಲ್ಲಿರುವ ಎಷ್ಟೋ ಹುಳುಕುಗಳನ್ನು ಶ್ರೀನಿವಾಸ-ರು ತೆಗೆದು ಈಡಾಡಿದ್ದಾರೆ:—ಇಂಗ್ಲಿಷ್ ಓದುವ ಹುಡುಗರಲ್ಲಿರಬಹುದಾದ ಬೆಡಗು ದುರಭ್ಯಾಸಗಳು, ಅವಿವೇಕ

ಅಪ್ರಬುದ್ಧತೆ ಸ್ಕೂಲು ಮೇಷ್ಟರುಗಳ ಬಡತನ, ಇನ್ಸ್‌ಪೆಕ್ಟರುಗಳ ಧೂರ್ತತೆ, ಇತ್ಯಾದಿ; ಆದರೆ ಅವನ್ನು ಓದಿದರೆ ಕಿವಿಹಿಂಡಿಸಿಕೊಂಡಂತೆ ಯಾಗಲಿ ದೊಣ್ಣೆಯ ಪೆಟ್ಟುಗಳನ್ನು ತಿಂದಂತೆಯಾಗಲಿ ವಾಚಾಮ ಗೋಚರವಾಗಿ ಬೈಸಿಕೊಂಡಂತೆಯಾಗಲಿ ಭಾವನೆಯಾಗುವುದಿಲ್ಲ. ಹಾಗಾದರೆ ನಮ್ಮ ಮನಸ್ಸಿನ ಮೇಲೆ ಆಗುವ ಪರಿಣಾಮದ ಬಗೆ ಎಂತಹದು?

ಹಿಂದೆ ಇಟಲಿದೇಶದಲ್ಲಿ ಒಬ್ಬ ಪ್ರಸಿದ್ಧನಾದ ಶಿಲ್ಪಿಯಿದ್ದನು. ಅವನು ಇನ್ನೂ ಚಿಕ್ಕವನಾಗಿದ್ದಾಗಲೇ ಒಬ್ಬ ದೊಡ್ಡ ಅಧಿಕಾರಿಯು ತಮ್ಮ ಮನೆಗೆ ಬರಬೇಕಾದ ಸಂದರ್ಭ ಒದಗಿತು. ಆಗ ಬಡವರಾದ ಇವನ ತಾಯಿತಂದೆಗಳು ಮನೆಯ ಮಧ್ಯದಲ್ಲಿ ಒಂದು ಮೇಜುಹಾಕಿ, ಬೆಳ್ಳಗಿರುವ ಒಂದು ಬಟ್ಟೆಯನ್ನು ಅದರ ಮೇಲೆ ಹಾಸಿ ಫಲಾಹಾರಕ್ಕೆ ತಂದಿಟ್ಟರು. ಆದರೆ—ಮೇಜಿನ ಮಧ್ಯೆ ಅಲಂಕಾರಕ್ಕಾಗಿ ಸುಂದರ ವಾದ ಯಾವುದಾದರೊಂದು ಪದಾರ್ಥವನ್ನು ತಂದಿಡುವ ಪದ್ಧತಿ. ಅದರಂತೆ ತಂದಿಡಲು ಅವರಲ್ಲಿ ಯಾವುದೂ ಇರಲಿಲ್ಲ. ಹುಡುಗನು ಇದನ್ನು ಕಂಡು, ಗಟ್ಟಿಯಾಗಿದ್ದ ಸ್ವಲ್ಪ ಬೆಣ್ಣೆಯನ್ನು ತೆಗೆದುಕೊಂಡು ಅದರಲ್ಲಿ ಹೊಸದಾಗಿ ಸಣ್ಣ ಕೆತ್ತನೆಯ ಕೆಲಸ ಮಾಡಿ ಒಂದು ಸಿಂಹ ವನ್ನು ಮಾಡಿಟ್ಟನಂತೆ. ಆ ಅಧಿಕಾರಿಯು ಅದನ್ನು ನೋಡಿ ಆ ಹುಡುಗನ ಕೌಶಲ್ಯವನ್ನು ಮೆಚ್ಚಿ ಬಹಳವಾಗಿ ಶ್ಲಾಘಿಸಿದನಂತೆ.!

ಶ್ರೀನಿವಾಸ—ರ ಸಣ್ಣ ಕಥೆಗಳನ್ನು ಓದುತ್ತಿದ್ದರೆ ಇಂಥ ಬೆಣ್ಣೆಯ ಸಿಂಹಗಳನ್ನು ನೋಡಿದಂತೆ ಭಾವನೆಯಾಗುತ್ತದೆ. ಸಿಂಹವು ಜ್ಞಾಪ ಕಕ್ಕೆ ಬಂದು ಸ್ವಲ್ಪ ಎಚ್ಚತ್ತವರಂತಾಗುತ್ತೇವೆ. ಉತ್ತರಕ್ಷಣದಲ್ಲಿ ಎಂಥ ಮೃದುವಾದ ವಸ್ತುವಿನಲ್ಲಿ ಎಷ್ಟು ಸುಲಭವಾಗಿ, ಎಷ್ಟು ಕುಶಲತೆ ಯಿಂದ, ಎಂಥ ಪದಾರ್ಥವನ್ನು ಮಾಡಿಟ್ಟಿದ್ದಾರೆಂದು ಮೆಚ್ಚುತ್ತ ಆದ ರಲ್ಲಿ ಮುಗ್ಧರಾಗುತ್ತೇವೆ. (ಇದಕ್ಕೆ ವಿಪರೀತವಾದ ಮಾರ್ಗಬೇಕಾದರೆ ' ಸತ್ಯರಾಜನ ಪೂರ್ವದೇಶದ ಯಾತ್ರೆ ' ಗಳನ್ನು ನೋಡಬಹುದು.)

ಈ ವಿಧವಾದ ಕೋಮಲವಾದ ಸರಸವಾದ ಹಾಸ್ಯ ಮತ್ತು ವಿಡಂಬನ ಮಾಡುವ ಪದ್ಧತಿಯು ಕನ್ನಡಸಾಹಿತ್ಯಕ್ಕೆ ನೂತನವಾದದ್ದು.

ಇದರಿಂದ ಯಾರಿಗೂ ಮನಸ್ಸಿಗೆ ಅಸಮಾಧಾನವಾಗುವುದಿಲ್ಲ ; ಓದುವವರೆಲ್ಲರೂ ಅದು ತಮ್ಮ ವಿಷಯವಲ್ಲವೆಂದೂ ತಾವು ಎಷ್ಟೋ ಬುದ್ಧಿವಂತರೆಂದೂ ಎಂದುಕೊಳ್ಳುವರು. ಆದರೆ ಅದರಿಂದ ಉಪಯೋಗವಾಗದವರಿಲ್ಲ; ಅದನ್ನು ಓದಿ ಆನಂದಪಡಲಾರದವರಿಲ್ಲ.

ಲ

---

# ಕೃಷ್ಣಕಾಂತನ ಉಯಿಲು

'ಕೃಷ್ಣಕಾಂತನ ಉಯಿಲು' 'ವಿಷವೃಕ್ಷ' ದಂತಿರುವ ಒಂದು ಸಾಮಾಜಿಕ ಅಥವಾ ಸಾಂಸಾರಿಕ ಕಾದಂಬರಿ. ಅದನ್ನು ವಿಷವೃಕ್ಷದ ದ್ವಿತೀಯಖಂಡವೆಂದು ಬೇಕಾದರೂ ಹೇಳಬಹುದು. ಏಕೆಂದರೆ ಇವೆರಡರಲ್ಲಿಯೂ ಇರತಕ್ಕ ಕಥೆಯು ಬೇರೆ ಬೇರೆಯಾದರೂ ವಿಷಯವು ಒಂದೇ:—ವಿಷವೃಕ್ಷ ಮತ್ತು ಅದರ ಫಲ. ಇದು ಗೊತ್ತಾಗಬೇಕಾದರೆ 'ಕೃಷ್ಣಕಾಂತನ ಉಯಿಲು' ನಲ್ಲಿ ಬರುವ ಕಥೆಯನ್ನು ಜ್ಞಾಪಿಸಿಕೊಳ್ಳಬೇಕು—

ಹರಿದ್ರಾಗ್ರಾಮದಲ್ಲಿ ಕೃಷ್ಣಕಾಂತರಾಯ ರಮಾಕಾಂತರಾಯ ಎಂಬ ಇಬ್ಬರು ಅಣ್ಣತಮ್ಮಂದಿರು ಸಮುಷ್ಟಿಯಾಗಿ ದೊಡ್ಡ ಆಸ್ತಿಯನ್ನು ಸಂಪಾದಿಸಿ ಅವಿಭಕ್ತಕುಟುಂಬದಲ್ಲಿ ಅನುಭವಿಸಿಕೊಂಡಿದ್ದರು. ಕೃಷ್ಣಕಾಂತರಾಯನಿಗೆ ಹರಲಾಲ, ವಿನೋದಲಾಲ, ಶೈಲವತಿ ಎಂದು ಮೂರು ಮಕ್ಕಳು; ರಮಾಕಾಂತನಿಗೆ ಗೋವಿಂದಲಾಲನೆಂಬ ಒಬ್ಬನೇ ಮಗ; ಹೀಗಿರಲು, ಒಂದು ದಿನ ರಮಾಕಾಂತನು ಹಟಾತ್ತಾಗಿ ಸ್ವರ್ಗಸ್ಥನಾಗಿಬಿಟ್ಟನು. ಆಮೇಲೆ ಕೃಷ್ಣಕಾಂತನು ಒಂದು ಉಯಿಲನ್ನು ಬರೆಸಿ ಅದರಲ್ಲಿ ಆಸ್ತಿಯ ಅರ್ಧಪಾಲನ್ನು ತನ್ನ ತಮ್ಮನ ಮಗನಿಗೂ, ಮೂರು ಮೂರು ಆಣೆಯ ಪಾಲನ್ನು ತನ್ನ ಗಂಡುಮಕ್ಕಳಿಗೂ, ಒಂದೊಂದು ಆಣೆಯ ಪಾಲನ್ನು ತನ್ನ ಮಗಳು ಹೆಂಡತಿಯರಿಗೂ, ಗೊತ್ತುಮಾಡಿದನು. ಹರಲಾಲನು ಇದಕ್ಕೆ ಒಪ್ಪದೆ ತನಗೆ ಆಸ್ತಿಯಲ್ಲಿ ಅರ್ಧಭಾಗ ಬರಬೇಕೆಂದು ಅವಿಧೇಯತೆಯಿಂದ ಒರಟಾಟ ಮಾಡಿದನು. ಕೃಷ್ಣಕಾಂತನಿಗೆ ಸಿಟ್ಟುಬರಲು, ತಾನೇ ಆ ಉಯಿಲನ್ನು ಹರಿದು ಹಾಕಿ ಮತ್ತೊಂದನ್ನು ಬರೆಸಿ ಅದರಲ್ಲಿ ಹರಲಾಲನಿಗೆ ಒಂದಾಣೆಯ ಭಾಗವನ್ನು ಮಾತ್ರ ಗೊತ್ತುಮಾಡಿದನು. ಇದರಿಂದ ಹರಲಾಲನಿಗೆ ಸಿಟ್ಟು ಹೆಚ್ಚಾಗಿ ಕಲ್ಕತ್ತೆಗೆ ಓಡಿಹೋಗಿ ತನ್ನ ಇಷ್ಟದಂತೆ ಉಯಿಲನ್ನು ಬರೆಸದಿದ್ದರೆ ತಾನೊಬ್ಬಳು ವಿಧವೆಯನ್ನು ಮದುವೆಮಾಡಿಕೊಳ್ಳುವುದಾಗಿ ಹೆದರಿಸಿ ತಂದೆಗೆ ಕಾಗದ ಬರೆದನು. ಹಾಗೆ ಮದುವೆಮಾಡಿ

ಕೊಂಡನೆಂಬ ವರ್ತಮಾನವೂ ಬಂತು. ಇದನ್ನು ಕೇಳಿ ಕೃಷ್ಣಕಾಂತನು ಎರಡನೆಯ ಉಯಿಲನ್ನೂ ಹರಿದುಹಾಕಿ ಇನ್ನೊಂದನ್ನು ಬರೆಸಿ ಅದ ರಲ್ಲಿ ಹರಲಾಲನಿಗೆ ಸೊನ್ನೆಸುತ್ತಬೇಕೆಂದಿದ್ದನು.

ಕೃಷ್ಣಕಾಂತನ ನೆರೆಮನೆಯಲ್ಲಿ ಬ್ರಹ್ಮಾನಂದನೆಂಬಾತನೊಬ್ಬ ನಿದ್ದನು. ಅವನು ಕೃಷ್ಣಕಾಂತನ ಮನೆಯ ಬರವಣಿಗೆಯ ಕೆಲಸ ಗಳನ್ನೆಲ್ಲಾ ಮಾಡುತ್ತಿದ್ದನು. ಈಗ ಉಯಿಲನ್ನು ಅವನೇ ಬರೆಯುವ ನಾಗಿದ್ದದ್ದರಿಂದ ಹರಲಾಲನು ಅವನ ಹತ್ತಿರಕ್ಕೆ ಬಂದು, ಅವನ ಕೈಯಲ್ಲಿ ತನಗೆ ಬೇಕಾದಂತೆ ಒಂದು ಉಯಿಲನ್ನು ಬರೆಸಿ ಅದಕ್ಕೆ ಕೃಷ್ಣಕಾಂತನ ಮತ್ತು ನಾಲ್ಕು ಸಾಕ್ಷಿಗಳ ರುಜುವನ್ನು ತಾನೇ ಹಾಕಿ ಒಂದು ಸುಳ್ಳು ಉಯಿಲನ್ನು ಸೃಷ್ಟಿಸಿ ನಿಜವಾದ ಉಯಿಲನ್ನು ಬರೆದ ಮೇಲೆ ಬಿಕ್ಕಲಂ ಹಾಕುವಾಗ ಅವುಗಳನ್ನು ಅದಲು ಬದಲುಮಾಡ ಬೇಕೆಂದು ದುಡ್ಡಿನ ಆಶೆಯನ್ನು ತೋರಿ ಬ್ರಹ್ಮಾನಂದವನ್ನು ಒಡಂಬಡಿ ಸಿದನು. ಇದರಿಂದ ತನ್ನ ಮೋಸಗಾರಿಕೆಯ ವಿದ್ಯೆಗಳೆಲ್ಲವೂ ಹೊರ ಪಟ್ಟವೇ ಹೊರತು ಕೆಲಸವಾಗಲಿಲ್ಲ. ಬ್ರಹ್ಮಾನಂದನಿಗೆ ಅದು ಅಸಾಧ್ಯ ವಾಗಿ ತಾನು ತೆಗೆದುಕೊಂಡಿದ್ದ ಹಣವನ್ನೂ ಉಯಿಲನ್ನೂ ಹರಲಾಲ ನಿಗೆ ಹಿಂದಕ್ಕೆ ಕೊಟ್ಟುಬಿಟ್ಟನು. ಬ್ರಹ್ಮಾನಂದನ ಅಣ್ಣನ ಮಗಳು ಸುಂದರಿಯೂ, ಬುದ್ಧಿಮತಿಯೂ, ವಿಧವೆಯೂ ಆದ ರೋಹಿಣಿಯು ತನ್ನನ್ನು ಹರಲಾಲನು ಮದುವೆಮಾಡಿಕೊಳ್ಳಬಹುದೆಂಬ ಆಶೆಯಿಂದ ಆ ಕೆಲಸವನ್ನು ಮಾಡಿಕೊಡುವುದಾಗಿ ಒಪ್ಪಿಕೊಂಡು ಬಹುಚತುರತೆ ಯಿಂದ ಉಯಿಲುಗಳನ್ನು ಅದಲು ಬದಲುಮಾಡಿದಳು. ಆದರೆ ಹರ ಲಾಲನ ಅಪೇಕ್ಷೆಯಂತೆ ನಿಜವಾದ ಉಯಿಲನ್ನು ಅವನ ಕೈಗೆ ಕೊಡ ಲೊಪ್ಪಲಿಲ್ಲ. ಅದರ ಬಲದ ಮೇಲೆ ತಾನು ಅವನನ್ನು ಮದುವೆಮಾಡಿ ಕೊಂಡು ಸುಖಪಡಬೇಕೆಂಬ ಆಶೆ; ಹರಲಾಲನು ಅದಕ್ಕೆ ಒಪ್ಪಲಿಲ್ಲ— ಆದ್ದರಿಂದ ಅವರವರಿಗೆ ಜಗಳವಾಗಿ ಉಯಿಲು ರೋಹಿಣಿಯ ಹತ್ತಿರವೇ ನಿಂತಿತು. ಹರಲಾಲನು ಹೊರಟು ಹೋದನು; ಮನಸ್ಸು ಕ್ಷುಬ್ಧ ವಾಯಿತು; ಈ ಸ್ಥಿತಿಯಲ್ಲಿ ಅವಳು ವಸಂತಕಾಲದಲ್ಲಿ, ಸುಂದರವಾದ ಪುಷ್ಪೋದ್ಯಾನದಲ್ಲಿ, ಬೆಳದಿಂಗಳಲ್ಲಿ, ಕೋಗಿಲೆಯು ಕೂಗುತ್ತಿರಲು,

ಸುಂದರನಾದ ಗೋವಿಂದಲಾಲನನ್ನು ನೋಡಿದಳು. ವಿಷವೃಕ್ಷಕ್ಕೆ ಬೀಜಾವಾಪವಾಯಿತು. (ಅಧ್ಯಾಯ ೧-೭)

ಗೋವಿಂದಲಾಲನ ಮೇಲೆ ಪ್ರಣಯವುಂಟಾಗಲು, ಅವನಿಗೆ ಅನಿಷ್ಟವಾಗುವ ಸೃಷ್ಟನೆಯ ಉಯಿಲನ್ನು ಕದ್ದು ಅದರ ಸ್ಥಾನದಲ್ಲಿ ತನ್ನ ಹತ್ತಿರವಿದ್ದ ನಿಜವಾದ ಉಯಿಲನ್ನು ಇರಿಸಬೇಕೆಂದು ರೋಹಿಣಿಯು ತೀರ್ಮಾನಿಸಿಕೊಂಡಳು. ಆದರೆ ಈ ಸಾರಿ ಕಳವು ಮಾಡುತ್ತಿದ್ದಾಗ ಕೃಷ್ಣಕಾಂತನ ಕೈಗೆ ಸಿಕ್ಕಿಬಿದ್ದಳು. ನಿಜವಾದ ಉಯಿಲನ್ನು ಕೃಷ್ಣಕಾಂತನ ಪೆಟ್ಟಿಗೆಯುಲ್ಲಿಟ್ಟು ಸೃಷ್ಟನೆಯದನ್ನು ನಾಶಪಡಿಸಿದ್ದಾಯಿತು. ಆದರೆ ನಡೆದ ಸಂಗತಿಯನ್ನೆಲ್ಲಾ ಅವಳು ಕೃಷ್ಣಕಾಂತನೊಡನೆ ತಿಳಿಸಲಾರದೆ ಇದ್ದದ್ದರಿಂದ, ಕೃಷ್ಣಕಾಂತನು ಅವಳು ಹರಲಾಲನಿಂದ ಹಣವನ್ನು ತಿಂದು ಸೃಷ್ಟನೆಯ ಉಯಿಲನ್ನು ಇಟ್ಟು ಹೋಗಲು ಬಂದಿದ್ದಳೆಂದು ಭಾವಿಸಿ ಅವಳನ್ನು ಅಲ್ಲಿಯೇ ಬಂಧಿಸಿಟ್ಟು ಮಾರನೆಯ ದಿನ ಅವಳಿಗೆ ಅಪಮಾನವಾಗುವಂತೆ ಶಿಕ್ಷೆಮಾಡಬೇಕೆಂದು ತೀರ್ಮಾನ ಮಾಡಿದನು. (ಅ ೮-೯)

ಗೋವಿಂದಲಾಲನ ಕಿವಿಗೆ ಈ ವರ್ತಮಾನವು ಬಂದು ತಲುಪಿತು. ನಿಜಸ್ಥಿತಿಯನ್ನು ಅವಳಿಂದ ಕೇಳಿ ತಿಳಿದುಕೊಂಡು, ಅವಳು ನಿರಪರಾಧಿನಿಯಾಗಿದ್ದರೆ, ದೊಡ್ಡಪ್ಪನಿಗೆ ಹೇಳಿ ಅವಳಿಗೆ ಮಾಡಬೇಕೆಂದಿದ್ದ ಶಿಕ್ಷೆಯನ್ನು ತಪ್ಪಿಸಬೇಕೆಂದು ಸಂಕಲ್ಪಿಸಿದನು. ನಿಜಸ್ಥಿತಿಯು ಗೊತ್ತಾಯಿತು. ಆದರ ಜೊತೆಗೆ ಅವಳು ತನ್ನಲ್ಲಿ ಪ್ರಣಯವನ್ನಿಟ್ಟಿರುವುದೂ ತಿಳಿಯಿತು. ವಿಷವೃಕ್ಷದ ಬೀಜವು ಅವನ ಮನೆಯ ಅಂಗಳದಲ್ಲಿಯೂ ನೆಡಲ್ಪಟ್ಟಿತು. (ಅ ೧೦-೧೨)

ಗೋವಿಂದಲಾಲನ ಸಹಾಯದಿಂದ ರೋಹಿಣಿಗೆ ಬಿಡುಗಡೆಯಾಯಿತು. ಆದರೆ ಅವನು ರೋಹಿಣಿಯು ಕಲ್ಕತ್ತೆಗೆ ಹೊರಟು ಹೋಗಬೇಕೆಂದೂ ಬೇಕಾದರೆ ಖರ್ಚಿಗೂ ಕೊಡುವೆನೆಂದೂ ವಿಧಿಸಿದ್ದನು. ಅದರಂತೆ ಮಾತ್ರ ರೋಹಿಣಿಗೆ ಹೋಗಲು ಮನಸ್ಸು ಬರಲಿಲ್ಲ. ಅವಳ ಪ್ರಣಯದ ಸಮಾಚಾರವು ಗೋವಿಂದಲಾಲನ ಪ್ರಾಣಪತ್ನಿಯಾದ ಭ್ರಮರೆಗೆ ತಿಳಿದು ಅವಳು ಅರ್ಧ ಹುಡುಗಾಟದಲ್ಲಿ ' ಪುಷ್ಕರಣಿ

ಯಲ್ಲಿ ಬಿದ್ದು ಸಾಯಿ' ಎಂದು ರೋಹಿಣಿಗೆ ಹೇಳಿಕಳುಹಿಸಿದಳು. ಆದರಂತೆ ಅವಳು ಬಿದ್ದೇಬಿದ್ದಳು. ಆಕಸ್ಮಾತ್ತಾಗಿ ಬಂದು ಹತ್ತಿರದ ಲ್ಲಿಯೇ ಇದ್ದ ಗೋವಿಂದಲಾಲನು ಅವಳು ಬಿದ್ದ ಸ್ವಲ್ಪ ಹೊತ್ತಿನ ಮೇಲೆ ನಡೆದ ಅಚಾತುರ್ಯವನ್ನು ತಿಳಿದು, ಅವಳನ್ನು ನೀರಿನಿಂದ ತೆಗೆದು ತೋಟದ ಮಾಲಿಯ ಸಹಾಯದಿಂದ ಅವಳ ಬಾಯಲ್ಲಿ ಊದುತ್ತಾ ಕೃತಕಶ್ವಾಸವನ್ನುಂಟುಮಾಡಿ ಪ್ರಾಣಬರುವ ಹಾಗೆ ಮಾಡಿದನು. ಅವಳು ಎಚ್ಚತ್ತು ತನ್ನ ಪ್ರಣಯವನ್ನು ಮತ್ತಷ್ಟು ಸ್ಪಷ್ಟಪಡಿಸಿದಳು. ಗೋವಿಂದಲಾಲನಿಗೂ ಆತ್ಮಸಂಯಮ ಮಾಡಿ ಕೊಳ್ಳುವುದು ಕಷ್ಟತರವಾಗುತ್ತ ಬಂತು. ಭ್ರಮರೆಯಲ್ಲಿ ಅವಿಶ್ವಾಸಿ ಯಾಗಿ ಅವಳನ್ನು ಸಂಕಟಪಡಿಸುವುದಕ್ಕೆ ಮನಸ್ಸಿಲ್ಲದೆ ಪಿತ್ರಾರ್ಜಿತ ವಾದ ಜಮೀನನ್ನು ವಿಚಾರಣೆ ಮಾಡಬೇಕೆಂದು ನೆಪಹಾಕಿಕೊಂಡು ಊರನ್ನು ಬಿಟ್ಟು ಹೊರಟು ಹೋದನು. (ಅ ೧೩-೧೯)

ಭ್ರಮರೆಯ ಮನಸ್ಸಿಗೆ ಕೊರಗು ಹತ್ತಿತು. ಈ ಮಧ್ಯೆ, ಒಂದು ಹೋಗಿ ನೂರಾಗಿ, ರೋಹಿಣಿಯು ಗೋವಿಂದಲಾಲನಿಂದ ಅನುಗೃಹೀತ ಳೆಂದೂ ಅವನು ಅವಳಿಗೆ ಏಳು ಸಾವಿರ ರೂಪಾಯಿಗಳ ನಗನಾಣ್ಯ ವನ್ನು ಕೊಟ್ಟನೆಂದೂ ಪ್ರವಾದ ಹುಟ್ಟಿ ಅದು ಬೇಡವೆಂದರೂ ಭ್ರಮ ರೆಯ ಕಿವಿಗೂ ರೋಹಿಣಿಯ ಕಿವಿಗೂ ಬಂದು ಬಿತ್ತು. ಈ ವಾರ್ತೆಗೆ ಭ್ರಮರೆಯೇ ಕಾರಣಳೆಂದು ಯೋಚಿಸಿ ರೋಹಿಣಿಯು ಬಂದು ಗೋವಿಂದಲಾಲನು ಕೊಟ್ಟವೆಂದು ಕೆಲವು ವಸ್ತ್ರಾಲಂಕಾರಗಳನ್ನು ಭ್ರಮರೆಗೆ ತೋರಿಸಿ ಅವಳ ಹೊಟ್ಟೆಯುರಿಸಿ ಪ್ರಣಯದ ವಿಚಾರವನ್ನು ದೃಢೀಕರಿಸಿದಳು. ಇನ್ನು ಸಹಿಸಲಾರದೆ ಭ್ರಮರೆಯು ಅಸಮಾಧಾನ ಪಟ್ಟುಕೊಂಡು ಗಂಡನಿಗೆ ಒಂದು ಕಾಗದವನ್ನು ಬರೆದಳು. ಬ್ರಹ್ಮಾ ನಂದನೂ ಭ್ರಮರೆಯೇ ಈ ವಾರ್ತೆಯನ್ನು ಹುಟ್ಟಿಸಿದವಳೆಂದು ಸೂಚಿಸಿ ಒಂದು ಕಾಗದ ಬರೆದನು. ಗೋವಿಂದಲಾಲನು ಹಿಂತಿರುಗಿ ಬರ ಬೇಕಾಯಿತು. ಆದರೆ ಬರುವ ಹೊತ್ತಿಗೆ ತನ್ನ ತಾಯಿಗೆ ಆಲಸ್ಯವೆಂದು ಸುಳ್ಳುನೆಪವನ್ನು ಹಾಕಿಕೊಂಡು ಭ್ರಮರೆಯು ತೌರುಮನೆಗೆ ಹೊರಟು ಹೋಗಿದ್ದಳು. ಇದರಿಂದ ಅವನಿಗೆ ಅವಳ ಮೇಲೆ ಅಸಮಾಧಾನವು

ಹೆಚ್ಚಿ ಕೋಪವುಂಟಾಯಿತು. ಅವಳನ್ನು ಮರೆಯುವುದಕ್ಕೆಂದು ರೋಹಿಣಿಯನ್ನು ನೆನೆಯತೊಡಗಿದನು; ಅವಳ ರೂಪಿನಲ್ಲಿಯೇ ಮನಸ್ಸು ನೆಟ್ಟುಹೋಯಿತು. (ಅ. ೧೩—೨೫)

ಯಥಾಕಾಲದಲ್ಲಿ ರೋಹಿಣಿ ಗೋವಿಂದಲಾಲರ ಸಮಾಚಾರವು ಕೃಷ್ಣಕಾಂತನ ಕಿವಿಗೂ ಬಿತ್ತು. ಅದನ್ನು ಕೇಳಿ ಅವನು ಮತ್ತೊಂದು ಉಯಿಲನ್ನು ಬರೆಯಿಸಿ ಅದರಲ್ಲಿ ಆಸ್ತಿಯ ಅರ್ಧ ಪಾಲನ್ನು ಭ್ರಮರೆಯ ಹೆಸರಿಗೆ ಮಾಡಿಸಿದನು. ಗೋವಿಂದಲಾಲನ ಹೆಸರೇ ಇಲ್ಲ. ಇದಾದ ಮೇಲೆ ಕೃಷ್ಣಕಾಂತನು ಕಾಲವಾದನು.

ಇದರಿಂದ ಗೋವಿಂದಲಾಲನಿಗೂ ಅವನ ತಾಯಿಗೂ ಭ್ರಮರೆಯ ಮೇಲೆ ಅಸಮಾಧಾನವು ಹೆಚ್ಚಾಯಿತು. ಭ್ರಮರೆಯು ಆಗ ಇನ್ನೂ ಹದಿನೇಳು ವರ್ಷದ ಹುಡುಗಿ; ಅವಳು ಎಷ್ಟೋ ವಿವೇಕದಿಂದ ನಡೆದುಕೊಂಡಳು; ಕ್ಷಮಾಪಣೆ ಕೇಳಿಕೊಂಡಳು, ತನ್ನ ಹೆಸರಿನಲ್ಲಿದ್ದ ಆಸ್ತಿಯನ್ನೆಲ್ಲಾ ತನ್ನ ಗಂಡನ ಹೆಸರಿಗೆ ಮಾಡಿದಳು. ಗೋವಿಂದಲಾಲನ ತಾಯಿಯು ತಾನು ಸೊಸೆಯ ಅನ್ನವನ್ನು ತಿಂದುಕೊಂಡಿರಲಾರಳೆಂದೂ, ಕಾಶಿಗೆ ಹೋಗಿ ಇದ್ದುಬಿಡುವಳೆಂದೂ ಹೇಳಿದಳು. ಅವನೂ ತನ್ನ ಸ್ವಂತ ನಗನಾಣ್ಯಗಳನ್ನು ಮಾರಿ ಸುಮಾರು ಎರಡು ಲಕ್ಷ ರೂಪಾಯಿ ಗಂಟುಮಾಡಿಕೊಂಡು ತಾಯಿಯನ್ನು ಕಳುಹಿಸಿ ಬರುವುದಕ್ಕೆಂದು ಅವಳನ್ನು ಕರೆದುಕೊಂಡು ಹೊರಟು ಹೋದನು. ಭ್ರಮರೆಯನ್ನು ಅಸಡ್ಡೆಮಾಡಿದಷ್ಟೂ ರೋಹಿಣಿಯು ಅವನ ಹೃದಯವನ್ನು ಆಕ್ರಮಿಸುತ್ತ ಬಂದಳು. (ಅ. ೨೬–೩೧)

## ಎರಡನೆಯ ಭಾಗ

ಗೋವಿಂದಲಾಲನು ತಾಯಿಯನ್ನು ಕಾಶಿಯಲ್ಲಿ ಬಿಟ್ಟು ಎಲ್ಲಿಗೋ ಹೊರಟು ಹೋದನು. ರೋಹಿಣಿಯು ಕೆಲವು ದಿನ ಹಾಸಿಗೆ ಹತ್ತಿ ಕಾಯಿಲೆಯಲ್ಲಿ ಮಲಗಿದ್ದು, ಒಂದು ದಿನ ಹರಕೆ ತೀರಿಸಬೇಕೆಂಬ ನೆವದಿಂದ ಹರಿದ್ರಾಗ್ರಾಮವನ್ನು ಬಿಟ್ಟು ಹೊರಟು ಹೋದಳು. ಹೀಗೆ ಒಂದು ವರ್ಷವಾಯಿತು. ಭ್ರಮರೆಗೆ ಕೊರಗು ಹತ್ತಿ ರೋಗಪೀಡಿತಳಾದಳು.

ಇದು ಭ್ರಮರೆಯ ತಂದೆಯಾದ ಮಾಧವೀನಾಥನಿಗೆ ಗೊತ್ತಾಯಿತು. ಇದಕ್ಕೆಲ್ಲ ಮೂಲಕಾರಣವು ರೋಹಿಣಿ ಗೋವಿಂದಲಾಲರ ಪಾಪಕರ್ಮವೆಂದು ಅವನು ತಿಳಿದು ಅವರಿಗೆ ಅದಕ್ಕೆ ತಕ್ಕ ಶಿಕ್ಷೆಮಾಡಬೇಕೆಂದು ನಿಶ್ಚಯಿಸಿ, ಬಹು ಚಾತುರ್ಯದಿಂದ ಅವರಿದ್ದ ಸ್ಥಳವು ಪ್ರಸಾದಪುರವೆಂದು ಪತ್ತೆಮಾಡಿದನು. ಅಲ್ಲಿಗೆ ಅವನೂ ಅವನ ಸ್ನೇಹಿತನಾದ ನಿಶಾಕರನೂ ಹೋದರು. ನಿಶಾಕರನು ಪ್ರಮೋದದಲ್ಲಿದ್ದ ಗೋವಿಂದಲಾಲನನ್ನು ಕಂಡು, ಭ್ರಮರೆಯು ಅವಳ ಆಸ್ತಿಯನ್ನೆಲ್ಲಾ ತನಗೆ ಬರೆದು ಕೊಟ್ಟಿದ್ದಳೆಂದೂ ಅದಕ್ಕೆ ಗೋವಿಂದಲಾಲನ ಅನುಮತಿ ಬೇಕಾಗಿತ್ತೆಂದೂ ಹೇಳಿದನು. ಗೋವಿಂದಲಾಲನು ಆಸ್ತಿಯು ಅವಳದಾಗಿದ್ದದ್ದರಿಂದ ಅವಳು ಏನುಬೇಕಾದರೂ ಮಾಡಬಹುದೆಂದನು. ಈ ಮಧ್ಯೆ ರೋಹಿಣಿಯು, ನಿಶಾಕರನ ರೂಪವನ್ನು ನೋಡಿ ಮನಸ್ಸು ವಿಕಾರವಾಗಲು, ಅವನನ್ನು ಕಂಡು ಎರಡು ಮಾತನಾಡಬೇಕೆಂದು ತನ್ನ ಆಳಿನ ಕೈಯಲ್ಲಿ ಹೇಳಿ ಕಳುಹಿಸಿದಳು. ಅವನು ಅದಕ್ಕೆ ಒಪ್ಪಿ ಒಂದು ಸಂಕೇತಸ್ಥಾನವನ್ನು ಗೊತ್ತುಮಾಡಿಕೊಂಡು, ಈ ವಿಷಯವನ್ನು ಗೋವಿಂದಲಾಲನಿಗೆ ಮತ್ತೊಬ್ಬ ಆಳಿನೊಡನೆ ಹೇಳಿ ಕಳುಹಿಸಿದನು. ಗೊತ್ತಾಗಿದ್ದ ಕಾಲಕ್ಕೆ ಸರಿಯಾಗಿ ರೋಹಿಣಿಯು ನಿಶಾಕರನು ಇದ್ದ ಸ್ಥಳಕ್ಕೆ ಬಂದಳು. ಅವಳ ಹೆಜ್ಜೆಯನ್ನು ಹಿಡಿದು ಗೋವಿಂದಲಾಲನೂ ಬಂದನು. ಅವನಿಗೆ ರೂಪತೃಷ್ಣೆಯೆಲ್ಲಾ ತೀರಿತ್ತು. ಆಗ ಭ್ರಮರೆಯ ವೃತ್ತಾಂತವು ತಿಳಿದು ಅವಳ ಅಕೃತ್ರಿಮವಾದ ಗಾಢಪ್ರೇಮವು ಜ್ಞಾಪಕಕ್ಕೆ ಬಂದು ಮನಸ್ಸೆಲ್ಲಾ ಕಲಕಿಹೋಗಿತ್ತು. ಆ ಸಮಯಕ್ಕೆ ಸರಿಯಾಗಿ ರೋಹಿಣಿಯ ಅಕೃತ್ಯವನ್ನು ನೋಡಿ ಬೇಸರಪಟ್ಟುಕೊಂಡು ಅವಳನ್ನು ಎಳೆದುಕೊಂಡು ಬಂದು ಎಷ್ಟು ಬೇಡವೆಂದರೂ ಕೇಳದೆ ಪಿಸ್ತೂಲಿನಿಂದ ಹೊಡೆದು ಕೊಂದು ಆ ಊರನ್ನು ಬಿಟ್ಟು ಹೊರಟು ಹೋದನು. (ಅ. ೧–೯)

ಗೋವಿಂದಲಾಲನು ಅಲ್ಲಿಂದ ತಮ್ಮ ಊರಿಗೆ ಹೋಗಲಿಲ್ಲ. ಭ್ರಮರೆಗಾದರೋ ದಿನದಿನಕ್ಕೆ ಕಾಯಿಲೆಯು ಹೆಚ್ಚಿತು. ಸಾಲದುದಕ್ಕೆ ಅವನು ಕೈಯಾರ ಸ್ತ್ರೀಹತ್ಯ ಮಾಡಿದವನೆಂಬುದು ಗೊತ್ತಾಗಿ ಅದರ

ಯೋಚನೆಯು ಮರ್ಮವನ್ನೇ ಭೇದಿಸುವುದಕ್ಕೆ ತೊಡಗಿತು. ಅವಳು ಬದುಕುವುದೇ ಕಷ್ಟವಾಯಿತು (ಅ. ೧೦–೧೧)

ಈ ಮಧ್ಯೆ ಬೈರಾಗಿಯ ವೇಷವನ್ನು ಹಾಕಿಕೊಂಡು ಬೃಂದಾವನ ದಲ್ಲಿದ್ದ ಗೋವಿಂದಲಾಲನು ಸಿಕ್ಕಿಬಿದ್ದು ಜೈಲಿಗೆ ಹೋದನು. ಅಲ್ಲಿಂದ ಅವನು ತನ್ನ ದಿವಾನನಿಗೆ ಬಹಳ ಸಂಕಟಪಟ್ಟುಕೊಂಡು ಈ ವರ್ತ ಮಾನವನ್ನು ತಿಳಿಸಿದನು. ಭ್ರಮರೆಯು ತಂದೆಯ ಕೈಗೆ ಐವತ್ತು ಸಾವಿರ ರೂಪಾಯಿಗಳನ್ನು ಕೊಟ್ಟು ತನ್ನ ಗಂಡನ ಜೀವವನ್ನು ಉಳಿಸಬೇಕೆಂದು ಬೇಡಿಕೊಂಡಳು. ಅವನು ವ್ಯವಹಾರವನ್ನು ಬಲ್ಲ ವನು; ಪೋಲೀಸಿನವರು ಕರೆತಂದಿದ್ದ ಸುಳ್ಳುಸಾಕ್ಷಿಗಾರರಿಗೆ ಚೆನ್ನಾಗಿ ಕೈಬೆಚ್ಚಗೆಮಾಡಿ ಮೊಕದ್ದಮೆಯನ್ನು ತಲೆಕೆಳಗು ಮಾಡಿ ಗೋವಿಂದ ಲಾಲನನ್ನು ಬಿಡಿಸಿದನು. ಅಲ್ಲಿಂದ ಗೋವಿಂದಲಾಲನು ಪ್ರಸಾದ ಪುರಕ್ಕೆ ಹೋಗಿ ನೋಡಲು ಎಲ್ಲವೂ ಕೊಳ್ಳೆಯಾಗಿ ಹೋಗಿದ್ದಿತು. ಉಳಿದದ್ದನ್ನು ಮಾರಿ ಸ್ವಲ್ಪ ಹಣಕಾಸು ಮಾಡಿಕೊಂಡು ಕಲ್ಕತ್ತೆಗೆ ಹೋದನು. ಒಂದು ವರ್ಷದಲ್ಲಿ ಕೈ ಬರಿದಾಯಿತು. ಆಗ ಹೊಟ್ಟೆ ಗಿಲ್ಲದೆ ಆರುವರ್ಷಗಳ ಮೇಲೆ ಹೆಂಡತಿಗೊಂದು ಕಾಗದ ಬರೆದನು— ಮಹಾದೀನನೂ ಪಾಪಿಯೂ ಆದ ಭಿಕ್ಷುಕನ ಹಾಗೆ, ನೊಂದುಕೊಂಡು, 'ಹೊಟ್ಟೆಗೆ ಸಲುವಾಗಿ' ಆಶ್ರಯವನ್ನು ಬೇಡಿ ಬರೆದನು. ಆಗ ಭ್ರಮರೆಗೆ ಗಂಡನಮೇಲಿದ್ದ ಕೋಮಲವಾದ ಪ್ರಣಯವು ಪೆಡಸಾದ ಗೌರವವಾಗಿ ಪರಿಣಮಿಸಿತ್ತು. ಆವಳು ಆಸ್ತಿಯೆಲ್ಲಾ ಅವನದೇಯೆಂದೂ ಬಂದು ಅನುಭವಿಸಬಹುದೆಂದೂ ಬದಲು ಬರೆದಳು. ಅದಕ್ಕೆ ಅವನು ಒಪ್ಪಲಿಲ್ಲ. ತಿಂಗಳು ತಿಂಗಳಿಗೆ ಐದುನೂರು ರೂಪಾಯಿಗಳನ್ನು ತರಿಸಿಕೊಂಡು, ಕಲ್ಕತ್ತೆಯಲ್ಲಿಯೇ ಇರುತ್ತಿದ್ದನು (ಅ. ೧೨-೧೩)

ಭ್ರಮರೆಗೆ ರೋಗವು ದಿನದಿನಕ್ಕೂ ಹೆಚ್ಚಿತು. ಅವಸಾನಕಾಲ ದಲ್ಲಿ ಗಂಡನನ್ನು ನೋಡಬೇಕೆಂಬ ಉತ್ಕಟೇಚ್ಛೆಯುಂಟಾಯಿತು. ಅದಕ್ಕೆ ಸ್ವಲ್ಪ ಮುಂಚೆ ಗೋವಿಂದಲಾಲನು ಅಲ್ಲಿಗೆ ಬಂದಿದ್ದು ಅವಳ ಸ್ಥಿತಿಯನ್ನು ನೋಡಿ ಧೈರ್ಯವಾಗಿ ಮುಖತೋರಿಸಲಾರದೆ ಇದ್ದನು. ಈಗ ಅವಳ ಇಚ್ಛೆಯನ್ನು ಕೇಳಿ ಅವಳನ್ನು ನೋಡುವುದಕ್ಕೆ

ಹೋದನು; ಇಬ್ಬರೂ ಅತ್ತರು. ಭ್ರಮರೆಯು ಗಂಡನನ್ನು ತನ್ನ ಹತ್ತಿರ ಮಂಚದ ಮೇಲೆ ಕರೆದು ಕೂರಿಸಿಕೊಂಡು 'ಸ್ವಾಮಿಯ ಚರಣವು ಕೈಗೆ ಎಟಕಿದಾಗ ಆ ಚರಣಯುಗಳವನ್ನು ಸ್ಪರ್ಶಮಾಡಿ ಪಾದರೇಣುವನ್ನು ತೆಗೆದುಕೊಂಡು ಶಿರದಲ್ಲಿ ಧರಿಸಿಕೊಂಡಳು. ಬಳಿಕ ಇಂದು ನನ್ನ ಸಕಲಾಪರಾಧಗಳನ್ನು ಕ್ಷಮಿಸಿ ಆಶೀರ್ವಾದ ಮಾಡೋಣಾಗಲಿ, ಜನ್ಮಾಂತರದಲ್ಲಿಯೂ ಸುಖಿಯಾಗುವೆನು' ಎಂದು ಹೇಳಿ ಶಬ್ದವಿಲ್ಲದೆ ಪ್ರಾಣತ್ಯಾಗಮಾಡಿದಳು (ಅ. ೧೪)

ಆಮೇಲೆ ಅವನು ಹೆಚ್ಚುದಿನ ಬದುಕಿರಲಿಲ್ಲ; ಹುಚ್ಚುಹಿಡಿದಂತಾಗಿ ಮರ್ಮವೇದನೆಯನ್ನು ಅನುಭವಿಸಿ ರೋಹಿಣಿಯು ಬಿದ್ದ ಪುಷ್ಕರಿಣಿಯಲ್ಲಿಯೇ ಬಿದ್ದು ಪ್ರಾಣವನ್ನು ಕಳೆದುಕೊಂಡನು. (ಅ.೧೫)

ಪರಿಶಿಷ್ಟ

ಗೋವಿಂದಲಾಲನ ಆಸ್ತಿಯು ಅವನ ಸೋದರಿಯ ಮಗ ಶಚೀಕಾಂತನಿಗೆ ಬಂದಿತು. ಅವನು ಕಾಡುಬೆಳೆದುಕೊಂಡಿದ್ದ ಉದ್ಯಾನವನ್ನು ಸರಿಮಾಡಿಸಿ ಫಲಪುಷ್ಪ ಬಿಡುವ ಗಿಡಮರಗಳನ್ನು ಹಾಕಿಸಿ ಪ್ರಮೋದವನಕ್ಕೆ ಬದಲಾಗಿ ಮತ್ತೊಂದು ಮಂದಿರವನ್ನು ಕಟ್ಟಿಸಿದನು. ಮಂದಿರದಲ್ಲಿ ದೇವದೇವಿಯರ ಮೂರ್ತಿಯನ್ನಿಡಲಿಲ್ಲ; ಹೇರಳವಾಗಿ ಹಣವನ್ನು ವೆಚ್ಚಮಾಡಿ ಬಂಗಾರದಲ್ಲಿ ಭ್ರಮರೆಯ ಪ್ರತಿಮೂರ್ತಿಯನ್ನು ಮುದ್ದಾಗಿ ಎರಕವೆರೆಯಿಸಿ ಮಂದಿರದ ಮಧ್ಯದಲ್ಲಿ ಸ್ಥಾಪಿಸಿದನು. ಆ ಬಂಗಾರದ ಪ್ರತಿಮೆಯ ಪದತಳದಲ್ಲಿ ಸ್ವರ್ಣಾಕ್ಷರಗಳಿಂದ ಕೆತ್ತಿಸಿದ್ದುದೇನೆಂದರೆ :—

"ಸುಖದಲ್ಲಿಯೂ ದುಃಖದಲ್ಲಿಯೂ ದೋಷದಲ್ಲಿಯೂ
ಗುಣದಲ್ಲಿಯೂ ಆರು ಭ್ರಮರೆಗೆ ಸಮಾನರೋ ಅಂಥ
ವರಿಗೆ ಈ ಸ್ವರ್ಣ ಪ್ರತಿಮೆಯನ್ನು ದಾನಮಾಡುವೆನು"

ಎಂದು.

ಈ ಕಥೆಯನ್ನು ಓದಿದ ಕೂಡಲೆ ಇದರಲ್ಲಿ ಗೋವಿಂದಲಾಲ ರೋಹಿಣಿ ಭ್ರಮರೆ ಇವರೇ ಮುಖ್ಯ ಪಾತ್ರಗಳೆಂಬುದೂ, ಗೋವಿಂದ

ಲಾಲನು ಸಾಧ್ವಿಯಾದ ತನ್ನ ಹೆಂಡತಿಯ ಪ್ರೇಮವನ್ನು ಅರಿಯದೆ ಬರಿಯ ರೂಪಿಗೆ ಮರುಳಾಗಿ ರೋಹಿಣಿಯನ್ನು ಕಟ್ಟಿಕೊಂಡು ಹೋಗಲು ಬಂಗಾರದಂಥ ಸಂಸಾರವು ಹಾಳಾಗಿ ಹೋದದ್ದೇ ಕಥಾ ವಸ್ತುವೆಂಬುದೂ ಗೊತ್ತಾಗುವುದು. ಮಿಕ್ಕ ಘಟನೆಗಳೂ ಪಾತ್ರಗಳೂ ಕಥೆಯನ್ನು ಚಚ್ಚಾಕವಾಗಿ ಬೆಳೆಸುವುದಕ್ಕೆ ಮಾತ್ರ; 'ವಿಷವೃಕ್ಷ'ದ ಲ್ಲಿಯೂ ಹೀಗೆಯೇ. ನಾಗೇಂದ್ರನು ಸೂರ್ಯಮುಖಿಯ ಸ್ಥಾಯಿ ಯಾದ ಪ್ರೇಮವನ್ನು ಅರಿಯದೆ ವಿಧವೆಯಾದ ಕುಂದನಂದಿನಿಯ ರೂಪಕ್ಕೆ ಮೋಹಗೊಂಡು ಅನರ್ಥಕ್ಕೆ ಕಾರಣನಾಗುವನು. ಆದರೆ ಅಲ್ಲಿ ಕುಂದೆಯನ್ನು ಸೂರ್ಯಮುಖಿಯೇ ಮದುವೆಮಾಡಿಕೊಡು ತ್ತಾಳೆ. ಇದರಿಂದ ನಾಗೇಂದ್ರನ ಪಾಪದಲ್ಲಿ ತೀಕ್ಷ್ಣತೆಯು ಕಡಿಮೆ ಯಾಯಿತೋ ಎಂಬಂತೆ ಕೊನೆಯಲ್ಲಿ ಕುಂದೆ ಮಾತ್ರ ಸಾಯುವಳು. ಎಲ್ಲರಿಗೂ ಅಪಾರವಾದ ದುಃಖವೂ ಕಷ್ಟವೂ ಮೇಲೆ ಮೇಲೆ ಒದಗಿ ಬಂದರೂ ಕುಂದನಂದಿನಿಯ ಮರಣಾನಂತರ ನಾಗೇಂದ್ರನ ಸಂಸಾರವು ನೆಟ್ಟಗಾಯಿತೆಂದೂ ಅಲ್ಲಿಂದ ಅವನು 'ಶಿಕ್ಷಣ'ವನ್ನು ಹೊಂದಿ ಹೆಚ್ಚು ಸುಖಿಯಾಗಿದ್ದನೆಂದೂ ಊಹಿಸಬಹುದು. ಪ್ರವೃತ್ತಿ ಸಾಮರ್ಥ್ಯಗಳುಳ್ಳ ಕಮಲಮಣಿ ಶ್ರೀಶರು ಸುಖವಾಗಿದ್ದರು. ಅವೆರಡೂ ಇಲ್ಲದ ದೇವೇಂದ್ರ ಹೀರೆಯರು ಹಾಳಾದರು. ಇಲ್ಲಿ ಹಾಗಲ್ಲ; ಸರ್ವನಾಶ. ಗೋವಿಂದ ಲಾಲನಲ್ಲಿ ನಾಗೇಂದ್ರ ದೇವೇಂದ್ರರಿಬ್ಬರೂ ಅವತಾರ ಮಾಡಿದ್ದರೆಂದು ಹೇಳಬಹುದು. ಇದರಂತೆ ಭ್ರಮರೆಯಲ್ಲಿ ಕಮಲಮಣಿ ಸೂರ್ಯಮುಖಿ ಯರ ಗುಣಗಳೂ ರೋಹಿಣಿಯಲ್ಲಿ ಹೀರೆ ಕುಂದೆಯರ ಗುಣಗಳೂ ಸೇರಿವೆ. ಮೊದಲಿನಿಂದಲೂ ಪ್ರಪಂಚದ ಅನುಭವವಿಲ್ಲದೆ ಐಶ್ವರ್ಯ ದಲ್ಲಿಯೇ ಬೆಳೆದು ಚಿತ್ತಸಂಯಮ ಮಾಡಿಕೊಳ್ಳುವುದಕ್ಕೆ ತಕ್ಕಷ್ಟು ಸಾಮರ್ಥ್ಯವಿಲ್ಲದೆ ಗೋವಿಂದಲಾಲನು 'ವಿಷವೃಕ್ಷ'ದ ಫಲವನ್ನು ಅನುಭವಿಸಬೇಕಾಯಿತು. ನಾಗೇಂದ್ರನಂತೆ ಅವನೂ ದೀನಾನಾಥೆ ಯಾದ ಒಬ್ಬ ಹೆಂಗಸನ್ನು ಕಷ್ಟದಿಂದ ಬಿಡುಗಡೆಮಾಡುವುದಕ್ಕೆ ಹೋಗಿ ತಾನೇ ಕಷ್ಟಕ್ಕೆ ಸಿಕ್ಕಿ ಪಾಪಮಾರ್ಗದಿಂದ ಪಾರಾಗುವುದಕ್ಕೆ ಪ್ರಯತ್ನಪಟ್ಟನು. ಆದರೆ ಅದು ನಡೆಯಲಿಲ್ಲ. ದೈವೇಚ್ಛೆಯು ಬೇರೆ

ಯಿದ್ದಿತು. ಘಟನಾವಳಿಗಳು ಅದಕ್ಕೆ ತಕ್ಕಂತೆ ಬಂದೊದಗಿ ಅವನನ್ನು ಕಟ್ಟಿಹಾಕಿದುವು—ಸುಖಾಭಿಲಾಷಿಣಿಯಾದ ರೋಹಿಣಿಯು ವಿಧವೆಯಾಗಿ ಅವನ ಮನೆಯ ಹತ್ತಿರವೇ ಏಕೆ ಇರಬೇಕು? ಅವಳು ಅಳುತ್ತಿದ್ದದ್ದು ಅವನ ಕಣ್ಣಿಗೆ ಏಕೆ ಬೀಳಬೇಕು? ಅವಳು ಉಯಿಲನ್ನು ಕದಿಯುವುದಕ್ಕೆ ಬಂದು ಸಿಕ್ಕಿ ಗೋವಿಂದಲಾಲನು ಬಿಡಿಸುವಂತೇಕಾಗಬೇಕು? ಕೊಳದಲ್ಲಿ ಬಿದ್ದಾಗ ಜೀವ ಹೋಗದೆ ಉಳಿದುಕೊಂಡು, ಗೋವಿಂದಲಾಲನೇ ಬಂದು ಏಕೆ ಅವಳನ್ನು ಬದುಕಿಸಬೇಕು? ಕಲ್ಕತ್ತೆಗೆ ಹೋಗೆಂದರೂ ಅವಳು ಹೋಗದೆ ಗೋವಿಂದಲಾಲನ ಎದುರಿಗೇ ಇರುವಂತೇಕಾಗಬೇಕು? ಅವನ ತಾಯಿಯು ಮಗನಿಗೂ ಸೊಸೆಗೂ ಬುದ್ಧಿಹೇಳಿ ಸಂಸಾರವನ್ನು ನೆಟ್ಟಗೆ ಮಾಡದೆ ತಾನೇ ಮುರಿತುಕೊಂಡು ಕಾಶಿಗೇಕೆ ಓಡಿಹೋಗಬೇಕು? ಮೊದಲು ಅಚಲವಾದ ಪ್ರೇಮದಲ್ಲಿ ಸುಖವಾಗಿ ಸಂಸಾರಮಾಡಿಕೊಂಡಿದ್ದ ಭ್ರಮರೆ ಗೋವಿಂದಲಾಲರಿಗೆ ಸಮಯದಲ್ಲೇಕೆ ಬುದ್ಧಿಯು ವಕ್ರವಾಗಬೇಕು? ಹೀಗೆ ಎಲ್ಲವೂ ದೈವಸಂಕಲ್ಪಿತವೆಂಬ ಅಭಿಪ್ರಾಯವನ್ನು ಗ್ರಂಥಕರ್ತನು 'ವಿಷವೃಕ್ಷ' ದಲ್ಲಿಯೂ ಸೂಚಿಸಿದ್ದಾನೆ. ಆದರೆ ಮನುಷ್ಯನು ವಿಧಿಯ ಹೆಸರು ಹೇಳಿಕೊಂಡು ತನ್ನ ಪಾಪಕ್ಕೆ ಶಿಕ್ಷೆಯನ್ನು ತಪ್ಪಿಸಿಕೊಳ್ಳುವಹಾಗಿಲ್ಲ.

"ಕವಿಗಳು ಲೋಕಕ್ಕೆ ಧರ್ಮದರ್ಶಕರು, ಆದರೆ ಆ ಹೆಸರಿನಿಂದ ಮಾತ್ರ ಯಾರೂ ಅವರನ್ನು ಕರೆಯರು." ಇದಕ್ಕೆ ಕಾರಣವು ಜನರ ಅಜ್ಞತೆಯಲ್ಲ, ಕೃತಘ್ನತೆಯಲ್ಲ; ಕವಿಯ ಮಹಿಮೆ. ಅವನು ರಸಪ್ರಯೋಗಾದಿಗಳನ್ನು ಬಲ್ಲ ಒಬ್ಬ ವೈದ್ಯ ಶ್ರೇಷ್ಠ; ಅವನ ಜೀವನವಿಮರ್ಶ ರಸಾಯನವು ಬಹು ಸಿಹಿ; ಜನರು ಮಕ್ಕಳಂತೆ ಸಿಹಿಗೆ ಆಶೆಪಟ್ಟು ಅದನ್ನು ತಿಂದು ಬಾಯಿಚಪ್ಪರಿಸುವರು. ಔಷಧಿಯು ಮಾಡುವ ಕೆಲಸವನ್ನೇನೋ ಮಾಡಿಬಿಡುವುದು; ಮತ್ತಷ್ಟು ಚೆನ್ನಾಗಿಯೇ ಮಾಡುವುದು; ಆದರೆ ತಿನ್ನುವವರಿಗೆ ಮಾತ್ರ ಅದು ಔಷಧಿಯೆಂಬ ಪರಿಜ್ಞಾನವಿರುವುದಿಲ್ಲ. ಸಿಹಿಯ ಮೇಲೆಯೇ ಗಮನ. ಇದನ್ನೇ ಬೇರೊಂದು ಉಪಮಾನದಲ್ಲಿ ಕಾವ್ಯಪ್ರಕಾಶಕಾರರು

"ಕಾಂತಾ ಸಮ್ಮಿತತಯೋಪದೇಶಯುಜೇ" ಎಂದು ಹೇಳಿದ್ದಾರೆ. ಪ್ರಕೃತದಲ್ಲಿ, ಬಂಕಿಂಚಂದ್ರರ ಉಪದೇಶವೇನು ಎಂಬುದನ್ನು ನೋಡೋಣ. ಇದನ್ನು 'ವಿಷವೃಕ್ಷ'ದ ಇಪ್ಪತ್ತೊಂಬತ್ತನೆಯ ಅಧ್ಯಾಯದಲ್ಲಿರುವಂತೆ ಇಲ್ಲಿ ವಿವರಿಸಿಯೂ ಇಲ್ಲ, ಸಮನ್ವಯ ಮಾಡಿ ತೋರಿಸಿಯೂ ಇಲ್ಲ. ಆದರೂ ಅದನ್ನು ಸ್ಪಷ್ಟವಾಗಿ ತಿಳಿದುಕೊಳ್ಳ ಬಹುದು. ಪ್ರಥಮತಃ, ದೇಶದಲ್ಲೆಲ್ಲಾ ಕಿವಿಯಿಂದ ಬಾಯಿಗೂ ಬಾಯಿಂದ ಕಿವಿಗೂ ಬಂದು ಬಿದ್ದು ಓಡಿಯಾಡುತ್ತಿರುವ 'ಸಮಾಜ ಸಂಸ್ಕಾರ'ವನ್ನು ಅವರು ಅನುಮೋದಿಸುವವರಲ್ಲವೆಂದು ಹೇಳ ಬಹುದು. "ವಿಧವಾ ವಿವಾಹವು ಆಗಬಹುದೆಂದು ಹೇಳುವವರೆಲ್ಲ ಪಂಡಿತರಾಗುವುದಾದರೆ ಮೂರ್ಖರು ಉಳಿಯುವವರು ಯಾರು?" ಲೋಕಸಂಗ್ರಹ ಬುದ್ಧಿಯನ್ನೇ ಇಟ್ಟುಕೊಂಡು, ಪ್ರಾಣಿಗಳ ಕಷ್ಟ ಪರಿ ಹಾರಮಾಡುವ ಉದ್ದೇಶ್ಯದಿಂದಲೇ, ಕನಿಕರಪಡುತ್ತಾ, ಈ ಕೆಲಸಕ್ಕೆ ಕೈ ಹಾಕುವವರು ಎಷ್ಟು ಜನ? ದೇವೇಂದ್ರನಂಥ ತೊಂಡುದನಗಳು ತಾರಾಚರಣನಂಥ ಮಂಕುದಾಸಯ್ಯಗಳು, ನಾಗೇಂದ್ರ ಗೋವಿಂದ ಲಾಲರಂಥ ಪ್ರಪಂಚಾನುಭವವಿಲ್ಲದ, ತಲೆತಾಕಿಲ್ಲದ, ತಮ್ಮ ಪಾಲಿಗೆ ಬಂದ ರತ್ನದ ಬೆಲೆಯನ್ನು ಅರಿಯುವುದಕ್ಕೆ ಯೋಗ್ಯತೆ ಇಲ್ಲದೆ, ಅಪ್ಪ ಸಂಪಾದಿಸಿದ ಆಸ್ತಿಯನ್ನು ಮನಸ್ಸುಬಂದಂತೆ ಖರ್ಚುಮಾಡಬಲ್ಲ ಹಣಗಾರರು; ಇಂಥವರೇ ಈ ಗ್ರಂಥಗಳಲ್ಲಿ ಸಮಾಜವನ್ನು ಉದ್ಧಾರ ಮಾಡುವುದಕ್ಕೆ ಹೊರಡುವವರು; ಇದರ ಪರಿಣಾಮ ಸಂಸಾರ ಸಂಹಾರ; ಸಮಾಜ ಸಂಸ್ಕಾರವಲ್ಲ. ವಿಧವಾವಿವಾಹ ಆಗಬಹುದೆಂದು ಸಪ್ರಮಾಣವಾಗಿ ಹೇಳುತ್ತ ಹೊರಟರೆ ಎಂಥ ಅನರ್ಥಗಳಾಗಬಹು ದೆಂಬುದನ್ನು ಈ ಎರಡು ಕಥೆಗಳಿಂದ ಕವಿಯು ಉದಾಹರಿಸಿರುವಂತೆ ತೋರುತ್ತದೆ.

ವಿಧವೆಯರೆಲ್ಲರೂ ಮದುವೆಮಾಡಿಕೊಂಡೇ ತೀರಬೇಕೆಂದು ರಾಜ ಶಾಸನವು ಹೊಸದಾಗಿ ಏರ್ಪಾಡಾದರೂ ಎಲ್ಲಾ ವಿಧವೆಯರೂ ಮದುವೆ ಯಾಗರು; ಆ ಮಾತದಂತಿರಲಿ. ಅಂಥ ಶಾಸನದಿಂದಲೋ ಅಥವಾ ಮತ್ತಾವ ಕಾರಣದಿಂದಲೋ ನಮ್ಮ ರೀತಿ ನೀತಿಗಳೆಲ್ಲಾ ಮಾರ್ಪಟ್ಟು

ವಿಧವಾ ವಿವಾಹದಲ್ಲಿ ಪಾಪಬುದ್ಧಿಯೂ ಎಗ್ಗೂ ಅಳಿದುಹೋಗುವ ಕಾಲ ಬರುವತನಕ, ಜನರ ನಡವಳಿಕೆ ಹೇಗೆ ಇರಬೇಕು? ಇಬ್ಬರು ಅರಸಿಕರು ಸೇರಿದರೆ ಯಾವ ಮಾತೂ ಇಲ್ಲ; ಇಬ್ಬರಲ್ಲಿ ಒಬ್ಬರು ಮಾತ್ರ ರಸಿಕರಾಗಿದ್ದರೆ ಒಂಟಿ ಕೈಯಿನ ಚಪ್ಪಾಳೆಯಾಗುವುದು. ಹಾಗಲ್ಲದೆ ಉಭಯ ಪಕ್ಷದವರೂ ರಸಿಕರಾಗಿದ್ದರೆ? ಅಥವಾ ಹಾಲಿಗೆ ಕಲ್ಲುಸಕ್ಕರೆಯು ಬಿದ್ದು ಕರಗಿ ಒಂದಾಗಿ ಹೋದರೆ? ವಿಧಿಯು ತಾನೇ ಗೌಳಿಗನ ಮನೆಗೆ ಹೋಗಿ ಹಾಲನ್ನು ಕರೆದು ತಂದು, ಅಂಗಡಿಗೆ ಹೋಗಿ ಕಲ್ಲುಸಕ್ಕರೆಯನ್ನು ಕೊಂಡುತಂದು, ಬೇಡ ಬೇಡವೆಂದರೂ ಅದನ್ನು ಕುಟ್ಟಿ ಪುಡಿಮಾಡಿ ಆ ನೊರೆ ನೊರೆಯಾದ ಹಾಲಿಗೆ ಹಾಕಿ ಕಿಲಕಿಲನೆ ನಕ್ಕು ತಮಾಷೆ ಮಾಡಿ ನೋಡಿದರೆ? ಸಕ್ಕರೆಯ ಬೊಂಬೆಗಳನ್ನು ಇಟ್ಟುಕೊಂಡು ಮಕ್ಕಳು ಆಡುತ್ತಿದ್ದು ಕೊನೆಗೆ ಮುರಿದು ಬಾಯಿಗೆ ಹಾಕಿಕೊಂಡು ಬಿಡುವಂತೆ, ಆ ಹಾಲು ಸಕ್ಕರೆಯನ್ನು ಅದು ತನ್ನ ಬಾಯಿಗೆ ಬಸಿದು ಕೊಂಡುಬಿಟ್ಟರೆ? ತಪ್ಪು ಹಾಲಿನದೋ, ಕಲ್ಲುಸಕ್ಕರೆಯದೋ? ದ್ರವ ದ್ರವ್ಯವಾಗಿ ಬೆಳ್ಳಗೆ ರುಚಿಕರವಾಗಿರುವುದು ಹಾಲಿನ ತಪ್ಪೇ? ಕಲ್ಲಿನಹಾಗಿದ್ದರೂ ಸಿಹಿಸಕ್ಕರೆಯಾಗಿ ದ್ರವದ್ರವ್ಯದಲ್ಲಿ ಬಿದ್ದರೆ ಕರಗಿ ಹೋಗುವಂತಿರುವುದು ಕಲ್ಲುಸಕ್ಕರೆಯ ತಪ್ಪೋ? ಶಿಕ್ಷೆಯಾಗಬೇಕಾದ್ದು ಯಾವುದಕ್ಕೆ? ಇಲ್ಲ, ಶಿಕ್ಷೆಯೇ ಇಲ್ಲವೋ? ಅಥವಾ ಆ ವಿಧಿಯನ್ನು ಹಿಡಿದು ಶಿಕ್ಷಿಸೋಣವೋ? ಕೈಗೆ ಸಿಕ್ಕಿದರೆ ಎಲ್ಲರೂ ಶಿಕ್ಷಿಸಿಯಾರು! ಆದರೆ ಅದು ಸಿಕ್ಕದು; ಸಿದ್ಧವಾಗಿದ್ದಾ ಹಾಲನ್ನು ಅಭ್ಯಾಸವಾದ ಬೆಕ್ಕಿನಂತೆ ನಿಶ್ಶಬ್ದವಾಗಿಯೂ ನಿಶ್ಚಿಂತೆಯಾಗಿಯೂ ಕುಡಿದು ಬಾಯಿ ಚಪ್ಪರಿಸುತ್ತಾ ತಪ್ಪಿಸಿಕೊಂಡು ಹೋಗಿಬಿಡುವುದು. ಹಾಲಿಗೂ ಶಿಕ್ಷೆ, ಸಕ್ಕರೆಗೂ ಶಿಕ್ಷೆ, ಅವನ್ನು ಮುಚ್ಚಿಡದಿದ್ದವರಿಗೂ ಶಿಕ್ಷೆ.

ಇವುಗಳಲ್ಲಿ ಅಪರಾಧವು ಯಾರದು? (ವಿಧಿಯಮಾತು ಸದ್ಯಕ್ಕೆ ಹಾಗಿರಲಿ.) ಸಕ್ಕರೆಯು ತಾನು ಪುಡಿಯಾಗಿರಕೂಡದೆಂದೂ, ಕರಗದಂತೆ ಗಟ್ಟಿಯಾಗಿರಬೇಕೆಂದೂ, ಇಲ್ಲದಿದ್ದರೆ ತಪ್ಪೆಂದೂ ಕವಿಯು ಅಭಿಪ್ರಾಯಪಡುವಂತೆ ತೋರುತ್ತದೆ. 'ವಿಷವೃಕ್ಷ'ದಲ್ಲಿ ಹುಡುಗಿಯಾದ ಕುಂದೆಯನ್ನು ನೋಡಿ ಮನಸ್ಸನ್ನು ಸಡಿಲಬಿಡುವವನು ನಾಗೇಂದ್ರ;

ಇಲ್ಲಿ, ರೋಹಿಣಿಯಲ್ಲಿ ಚಾಪಲ್ಯವನ್ನುಂಟುಮಾಡಿದವನು ಹರಲಾಲ; ಪ್ರಣಯವು ಬೆಳೆಯುವುದಕ್ಕೆ ಅವಕಾಶಕೊಟ್ಟವನು ಗೋವಿಂದಲಾಲ; ಹೀರೆ ರೋಹಿಣಿಯರೇನೋ ವಿಧವೆಯರಾದರೂ ವಿಧವೆಯರಂತಿರದೆ ಸುಖಲಾಲಸೆಯರಾಗಿದ್ದರು. ಆದರೆ ಈ ಸಂದರ್ಭಗಳಲ್ಲಿ ಪುರುಷರು ತಮ್ಮ ಮನಸ್ಸನ್ನು ಬಿಗಿಹಿಡಿದುಕೊಂಡಿದ್ದರೆ ತಮಗೂ ತಮ್ಮನ್ನು ನೆಚ್ಚಿಕೊಂಡಿದ್ದವರಿಗೂ ಅನರ್ಥವಾಗುತ್ತಿರಲಿಲ್ಲ. ಪುರುಷನು ಹೆಚ್ಚು ಸುಲಭವಾಗಿ ಅಡ್ಡದಾರಿಗೆ ಬೀಳಬಹುದು. ಶಿಕ್ಷಣವನ್ನು ಪಡೆದಿದ್ದ ಮಾತ್ರವೇ ಅದು ಕಾರ್ಯಕಾರಿಯಾಗುವುದಿಲ್ಲ. ಅವನು ತನ್ನ ಜ್ಞಾನವನ್ನು-ಯುದ್ಧಕ್ಕೆ ಮದ್ದುಗುಂಡುಗಳನ್ನು ತಯಾರುಮಾಡುವುದರಲ್ಲಿ ಉಪಯೋಗಿಸುವಂತೆ—-ಕುತರ್ಕಕ್ಕಾಗಿ ಉಪಯೋಗಿಸಬಹುದು: "ರೂಪದಲ್ಲಿ ಮೋಹಗೊಳ್ಳದಿರುವವರಾರು? ನಾವು ನಮ್ಮೆದುರಿಗೆ ಹಾರಾಡುವ ಹಳದಿ ನೀಲಿ ಬಣ್ಣಗಳಿಂದ ವಿಚಿತ್ರವಾಗಿ ಚಿತ್ರಿತವಾಗಿರುವ ಪತಂಗದ ಹುಳುವನ್ನು ಕಂಡು ಅದರ ರೂಪದಲ್ಲಿ ಮೋಹಗೊಳ್ಳುವೆವು. ನೀವು ಕುಸುಮಿತವಾಗಿರುವ ಆ ಕಾಮಿನಿಯ ಶಾಖೆಯನ್ನು ಕಂಡು ಮುಗ್ಧರಾಗುವಿರಿ. ಅದರಿಂದ ದೋಷವೇನು? ರೂಪವು ಮೋಹಗೊಳಿಸುವುದಕ್ಕೆ ಸಲುವಾಗಿಯೇ ಉಂಟಾಗಿರುವುದು." ಎಂದು ವಾದಿಸಬಹುದು. ಆದರೆ "ರಮಣಿಯು ಕ್ಷಮಾಮಯಿ, ಸ್ನೇಹಮಯಿ, ದಯಾಮಯಿ; ರಮಣಿಯು ಈಶ್ವರನ ಕೀರ್ತಿಗೆ ಚರಮೋತ್ಕರ್ಷಳು, ದೇವರ ಛಾಯೆ—ಪುರುಷನು ದೇವರ ಸೃಷ್ಟಿಮಾತ್ರ." ಕೆಲವು ವೇಳೆ, ರಮಣಿಯ ಕ್ಷಮಾ-(ಭೂಮಿ, ಮಣ್ಣು)-ಮಯಿ, ದೆವ್ವದ ಛಾಯೆ—ಆಗಿರುವುದೂ ಉಂಟು. ಪ್ರಪಂಚವು ಸೃಷ್ಟಿಯಾದಂದಿನಿಂದ ಇಂದಿನವರೆಗೆ ಅಂಥ ಮಹಾರಾಯತಿಯರು ಎಷ್ಟೋ ಪುರುಷರ ಹೃದಯದಲ್ಲಿಯೂ, ಸಂಸಾರದಲ್ಲಿಯೂ ಗಾಢಾಂಧಕಾರವನ್ನು ತಂದು ತುಂಬಿರುವರು. ಶ್ರೀಮತೀ ಹೈಮವತೀ ದೇವಿಯೇ (ದೇವೇಂದ್ರನ ಹೆಂಡತಿ) ಇದಕ್ಕೆ ಉದಾಹರಣೆ; ಇದನ್ನು ಗ್ರಂಥಕರ್ತನು ಬಲ್ಲನು; ಆದರೆ ಇಲ್ಲಿ ಅವನ ಇಷ್ಟಪ್ರಾಪ್ತಿಗೆ ಅದು ಸಾಧಕವಾಗುವುದಿಲ್ಲ. ಆದಕ್ಕೋಸ್ಕರ ಅಂಥವರ ಮಾತನ್ನು ಎತ್ತಿಲ್ಲ.

ಒಟ್ಟಿನ ಮೇಲೆ, ಗಂಡಸಿನಲ್ಲಿ ದೌರ್ಬಲ್ಯವನ್ನು ತೋರಿಸಿ ಅವನು ಕಲಿಯತಕ್ಕ ಪಾಠಗಳು ಬಹಳವಿವೆಯೆಂದು ಹೇಳಿದ ಹಾಗಾಯಿತು. ಸಂಸಾರದ ಸೂತ್ರಗಳನ್ನು ಕೈಯಲ್ಲಿ ಹಿಡಿದುಕೊಂಡಿರುವ ಕುಟುಂಬದ ಯಜಮಾನನು ವಿವೇಕಿಯಾಗಿರಬೇಕಾದದ್ದು ಅತ್ಯಂತ ಆವಶ್ಯಕ. ದೌರ್ಬಲ್ಯವು ಸ್ತ್ರೀಪುರುಷರಿಬ್ಬರಿಗೂ ಸಾಮಾನ್ಯವಾದದ್ದಾದರೂ, ಎಲ್ಲಿಯವರೆಗೆ ಆರ್ಯ ಧರ್ಮವೂ ಸಮಾಜ ರೀತಿನೀತಿಗಳೂ ಸಂಪೂರ್ಣವಾಗಿ ತಲೆಕೆಳಕಾಗುವುದಿಲ್ಲವೋ, ಎಲ್ಲಿಯವರೆಗೆ ನಮ್ಮ ಸ್ತ್ರೀಯರು ಪುರುಷರಷ್ಟೇ ಸ್ವತಂತ್ರೆಯರು ಅಥವಾ ಹೆಚ್ಚು ಸ್ವತಂತ್ರೆಯರು ಆಗುವುದಿಲ್ಲವೋ, ಎಂದರೆ, ಎಲ್ಲಿಯವರೆಗೆ ನಮ್ಮ ಸ್ತ್ರೀಯರು ತಮ್ಮ ತಮ್ಮ ಪತಿಯ ಅಧೀನದಲ್ಲಿರುವರೋ, ಅಲ್ಲಿಯವರೆಗೆ ಕವಿಗಳು ಹಿಂದೂ ಸ್ತ್ರೀಯರಲ್ಲಿರುವ ಗುಣವನ್ನೇ, ಪುರುಷರಲ್ಲಿರಬಹುದಾದ ಅವಿವೇಕವನ್ನೇ ತೋರಿಸುತ್ತ ಹೋಗಲಿ; ಅದರಿಂದ ಪುರುಷರಿಗೆ ಅವಮಾನವಿಲ್ಲ.

ಕೃಷ್ಣಕಾಂತನ ಉಯಿಲು "ವಿಷವೃಕ್ಷ" ದಂತೆಯೇ ಇದ್ದರೂ ಅದರಷ್ಟು ಸರ್ವಾಂಗಸುಂದರವಲ್ಲ. ಆ ಕೋಮಲತೆ ಇಲ್ಲ. ಆ ಪುಷ್ಟಿ ಇಲ್ಲ, ಆ ರಸ ಆ ವರ್ಣನೆಗಳಿಲ್ಲ; ಇದು ಹೂವಿನ ಕಾಲವೆಲ್ಲಾ ಮುಗಿದು ಗಿಡವು ಮರೆತು ಹೋದ ಮೇಲೆ ಬಿಡುವ ಪೀಚು ಹೂವಿನಂತೆಯೂ, ಎಲ್ಲಿಯೋ ಸಂದಿಯಲ್ಲಿ ಸಿಕ್ಕಿಕೊಂಡು ಸಾಕಾದಷ್ಟು ಗಾಳಿ ಬೆಳಕುಗಳಿಲ್ಲದೆ ಬೆಳೆದ, ಅಪುಷ್ಟವಾದ, ಅಷ್ಟೊಂದು ಮಧುರವಲ್ಲದ ಹಣ್ಣಿನಂತೆಯೂ ಇದೆಯೆಂದು ಹೇಳಬಹುದು. ಆದರೆ ಸುಮತಿ ಕುಮತಿಯರನ್ನು ಸೃಷ್ಟಿಸಿ ಮನುಷ್ಯನ ಹೃದಯದಲ್ಲಿ ಏಳುವ ವಿಚಾರ ತರಂಗಗಳನ್ನು ಅವರ ಕೈಯಲ್ಲಿ ಹೇಳಿಸಿರುವುದು ಬಹು ಸೊಗಸಾಗಿದೆ. ಹಾಸ್ಯವು ಅಲ್ಲಲ್ಲಿ ಬಂದೇ ಬರುತ್ತದೆ; ಕಥೆಯು ಇದಕ್ಕಿಂತ ಇನ್ನೂ ಘೋರವಾಗಿದ್ದರೂ ಅದು ಬಂದೇ ಬರುತ್ತಿತ್ತೆಂದು ತೋರುತ್ತದೆ; ಅದು ಕೆಲವರ ಸ್ವಭಾವ; ಅವರನ್ನು ಗಲ್ಲಿಗೆ ಹಾಕುವುದಕ್ಕೆಂದು ಎಳೆದುಕೊಂಡು ಹೋಗುತ್ತಿದ್ದರೂ, ಆಗಲೂ ವಿನೋದವನ್ನು ಬಿಡರು; ಅವರು ಅಳುವಿನಲ್ಲಿಯೂ ನಗಬಲ್ಲರು. ಈ ಗ್ರಂಥದಲ್ಲಿನ ಹಾಸ್ಯಕ್ಕೆ ಕೆಲವು ಉದಾಹರಣೆಗಳು :—

೧. ರೋಹಿಣಿ—(ಹರಲಾಲನನ್ನು ಕುರಿತು) ವಿಧವೆಯಾಗಲಿ, ಸಧವೆಯಾಗಲಿ-ಎಂದರೆ, ವಿಧವೆಯಾಗಲಿ ಕನ್ಯೆಯೇ ಆಗಲಿ-(ನೀನು) ಒಂದು ಮದುವೆಯನ್ನು ಮಾಡಿಕೊಂಡು ಸಂಸಾರಿಯಾಗಿರುವುದು ಒಳ್ಳೆಯದು.

೨. (ಕೃಷ್ಣಕಾಂತನು ಅಫೀಮನ್ನು ಸೇವಿಸಿ ಮತ್ತನಾಗಿದ್ದಾಗ) ಬ್ರಹ್ಮನ ಮಗನಾದ ವಿಷ್ಣುವು ಬಂದು ವೃಷಭಾರೂಢನಾದ ಮಹಾದೇವನಿಂದ ಒಂದು ಡಬ್ಬಾ ತುಂಬ ಅಫೀಮನ್ನು ಸಾಲವಾಗಿ ತೆಗೆದುಕೊಂಡು ಅದಕ್ಕೆ ಪ್ರಪಂಚವನ್ನೆಲ್ಲಾ ಅವಧಿಕ್ರಯದಿಂದ ಭೋಗ್ಯ ಮಾಡಿದ್ದ ಹಾಗೂ ಆದರೆ ಮಹಾದೇವನು ದಾವಾ ಮಾಡಿ ಅವಧಿಕ್ರಯವನ್ನು ಊರ್ಜಿತಪಡಿಸಿಕೊಳ್ಳಲು ಗಾಂಜಾದ ಅಮಲಿನಲ್ಲಿ ಮರೆತು ಹೋದನೆಂಬುದಾಗಿಯೂ ಭಾವಿಸಿಕೊಂಡನು.

೩. ಯಾರ ಮನೆಯಲ್ಲಿ ದಾಸಿಯರಿಲ್ಲವೋ ಅಂಥವರ ಮನೆಯಲ್ಲಿ ವಂಚನೆ ಸುಳ್ಳುಸಮಾಚಾರ ಕದನ ಕೊಳೆ ಈ ನಾಲ್ಕೂ ಇರುವುದಿಲ್ಲ. ಬ್ರಹ್ಮನು ಈ ನಾಲ್ಕು ಸಾಮಗ್ರಿಗಳನ್ನೂ ಒಬ್ಬೊಬ್ಬ ದಾಸಿಯಲ್ಲಿ ಸೃಷ್ಟಿಸಿರುವನು. ಯಾರ ಮನೆಯಲ್ಲಿ ಹೆಚ್ಚು ಮಂದಿ ದಾಸಿಯರಿರುವರೋ ಆ ಮನೆಯಲ್ಲಿ ನಿತ್ಯವೂ ಕುರುಕ್ಷೇತ್ರ ಯುದ್ಧವಾಗುತ್ತಿರುವುದು. ನಿತ್ಯವೂ ರಾವಣ ವಧೆ; ಭೀಮರೂಪಿಣಿಯಾದ ದಾಸಿಯೊಬ್ಬಳು ಸರ್ವದಾ ಸಮ್ಮಾರ್ಜನೀ ಎಂಬ ಗದೆಯನ್ನು ಕೈಯಲ್ಲಿ ಹಿಡಿದು ಗೃಹರಣಕ್ಷೇತ್ರದಲ್ಲಿ ತಿರುಗಾಡುತ್ತಿರುವಳು....

೪. ಬರಿದಾದ ಕೊಡದಲ್ಲಿ ನೀರನ್ನು ತುಂಬುವುದಕ್ಕೆ ಹೋದರೆ, ಅದು ಮಣ್ಣಿನ ಕೊಡವಾಗಿದ್ದರೂ ಮನುಷ್ಯ ಕೊಡವಾಗಿದ್ದರೂ ಹೀಗೆಯೇ ಅಡ್ಡಿಮಾಡುವುದು.

೫. ಗೋವಿಂದಲಾಲ—ಭ್ರಮರೆ, ಬೈಗಳನ್ನು ತಿಂದು ನಮ್ಮವರು ಹೊಟ್ಟೆ ತುಂಬಿಕೊಳ್ಳುವವರಾಗಿದ್ದರೆ, ಇಷ್ಟು ದಿನಕ್ಕಾಗಲೇ ದೇಶದವರಿಗೆಲ್ಲಾ ಅಜೀರ್ಣವುಂಟಾಗಿ ಎಲ್ಲರೂ ಸತ್ತು ಹೋಗುತ್ತಿದ್ದರು. ನಮ್ಮವರ ಹೊಟ್ಟೆಯಲ್ಲಿ ಬೈಗಳು ಬೇಗನೆ ಜೀರ್ಣವಾಗತಕ್ಕ ಪದಾರ್ಥ.

೬. ದಾಡೀಧಾರಿಯು . . . ಶ್ಮಶ್ರುವಿನ ಅಂಧಕಾರದ ಮಧ್ಯದಿಂದ

ತುಷಾರದಂತೆ ಧವಳವಾಗಿದ್ದ ದಂತಗಳನ್ನು ತೋರುತ್ತಾ ವೃಷಭದುರ್ಲಭವಾದ ಕಂಠಸ್ವರವನ್ನೆತ್ತಿದನು.

ಇನ್ನು ಈ ಗ್ರಂಥದ ಶೈಲಿಯನ್ನು ಕುರಿತು ಒಂದು ಮಾತನ್ನು ಹೇಳಿ ಈ ವಿಮರ್ಶೆಯನ್ನು ಮುಗಿಸಿಬಿಡುವೆವು. ಬಂಗಾಳಿ ಭಾಷೆಯಲ್ಲಿ ಸಂಸ್ಕೃತ ಶಬ್ದಗಳು ಹೇರಳವಾಗಿ ಬರುತ್ತವೆ. ಕನ್ನಡಕ್ಕೆ ತರ್ಜುಮೆ ಮಾಡುವಾಗ ಆ ಶಬ್ದಗಳನ್ನೇ ಇಟ್ಟುಕೊಂಡರೆ ಕನ್ನಡ ಶೈಲಿಯು ಸಂಸ್ಕೃತಭೂಯಿಷ್ಠವಾಗುತ್ತದೆ. ಸಂಸ್ಕೃತವನ್ನು ಸೇರಿಸುವುದು ತಪ್ಪೆಂದಲ್ಲ; ಸಂಸ್ಕೃತದ ಸಹಾಯವಿಲ್ಲದಿದ್ದರೆ ಎಲ್ಲಾ ಅಭಿಪ್ರಾಯಗಳನ್ನೂ ಕನ್ನಡದಲ್ಲಿ ತಿಳಿಸುವ ಬಗೆ ಹೇಗೆ? ಆದರೆ ಇದರಲ್ಲಿ ಸ್ವಲ್ಪ ವಿವೇಚನೆ ಬೇಕು. ಎಲ್ಲಿ ಸುಲಭವಾದ ಕನ್ನಡ ಮಾತುಗಳಿಂದಲೇ ಅರ್ಥವನ್ನು ತಿಳಿಸುವುದು ಸಾಧ್ಯವೋ ಅಲ್ಲಿ ಅನಾವಶ್ಯಕವಾಗಿ ಸಂಸ್ಕೃತವನ್ನು ಉಪಯೋಗಿಸಬಾರದು. ಮ॥ ವೆಂಕಟಾಚಾರ್ಯರು ಬಂಗಾಳಿಯಲ್ಲಿ ಬರುವ ಬಹು ಸಂಸ್ಕೃತ ಶಬ್ದಗಳನ್ನು ತಮ್ಮ ಗ್ರಂಥಗಳಲ್ಲಿ ಉಪಯೋಗಿಸಿ ಕನ್ನಡ ಭಾಷೆಯನ್ನು ಪುಷ್ಟೀಕರಿಸಿದರು. ಈ ಮಧ್ಯೆ ಆವಶ್ಯಕವಲ್ಲದ ಪೆಡಸಾದ ಸಂಸ್ಕೃತ ಶಬ್ದಗಳೂ ಬಂದು ತುಂಬಿಕೊಂಡುವು. ಇದನ್ನು ಅವರ ಮಿತ್ರರು ಕೆಲವರು ಗಮನಕ್ಕೆ ತಂದಂತೆಯೂ ಆವಾಗ ಅವರು ಕನ್ನಡ ಪದಗಳನ್ನು ಹೆಚ್ಚಾಗಿ ಉಪಯೋಗಿಸುವುದಕ್ಕೆ ಪ್ರಯತ್ನಪಟ್ಟಂತೆಯೂ ತೋರುತ್ತದೆ. ಆದ್ದರಿಂದ ಈ ಗ್ರಂಥದಲ್ಲಿ ಪ್ರಯತ್ನ ಪುರಸ್ಸರವಾಗಿ ಉಪಯೋಗಿಸಲ್ಪಟ್ಟ ಕೆಲವು ಅಪ್ರಸಿದ್ಧವಾದ ಕನ್ನಡ ಪದಗಳು ಬಂದು ಸೇರಿದುವು—

ಹರಳಿಸು, ಮೊಗವಣಿಗೆ, ಅಲರ್ಮೊಗ, ಮೊವಲಿಡಿದು ಅಲರ್ದ, ಸೋಸವ, ಕಣ್ಣೆವಂತಿಯು ಕಣ್ಮಣಿವಾದ ನೋಟ, ಅಚ್ಚುಳಾಯಿತ, ಅಟ್ಟಿಡ, ಅಟ್ಟುಲಿಗಿ, ಒಹಿಲು, ಹಳವಿಸು, ಹೆಳಿಗೆ, ಮೊಯಿಲು, ಸೆಗಳಿಗೆ, ಗಳುಸಾಳು, ಕೊರಿಪಿಡಿ, ಆರುದಲೆ, ಜಾಂಗಳ—ಇತ್ಯಾದಿ.

ಹೊಸಗನ್ನಡದಲ್ಲಿ ಬರೆಯುವುದಕ್ಕೆಂದು ಹೊರಟು, ಪಂಡಿತ ಪಾಮರರೆಲ್ಲರೂ ಓದಲೆಂದು ಗದ್ಯದಲ್ಲಿ ಕಥೆ ಬರೆಯುವುದಕ್ಕೆ ಹೊರಟು, ಅದರಲ್ಲಿ ಇಂಥ ಕನ್ನಡ ಪದಗಳನ್ನು ಪ್ರಯೋಗಿಸುವುದು ಚೆನ್ನಾಗಿ

ತೋರುವುದಿಲ್ಲ. ಅವುಗಳಿಗೆ ಬದಲಾಗಿ ಸಂಸ್ಕೃತ ಪದಗಳನ್ನು ಉಪಯೋಗಿಸುವುದು ಎಷ್ಟೋ ಮೇಲು.

ಕಮುಪರಮವಶಂ ನ ವಿಪ್ರಕುರ್ಯುಃ
ವಿಭುಮಪಿ ತಂ ಯದಮೀ ಸ್ಪೃಶಂತಿ ಭಾವಾಃ !

(ಕುಮಾರಸಂಭವ ೬–೯೫)

---

# ವಸಂತ ಕುಸುಮಾಂಜಲಿ

" ಈ ಚಿಕ್ಕ ಪುಸ್ತಕದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಜೀವನ ತತ್ವಾಲೋಚನೆಯೂ, ಎರಡನೆಯದರಲ್ಲಿ ಆಧುನಿಕ ಭಾರತೀಯ ಮಹಾಪುರುಷ ವಿಷಯಕವಾದ ಕವಿತೆಗಳೂ ಇವೆ........ ಮೊದಲನೆಯ ಭಾಗವು ಉತ್ತಮವಾದ ಜೀವನಕ್ರಮದ ಸ್ವರೂಪ ವನ್ನು ತೋರಿಸುತ್ತದೆ." ಎರಡನೆಯದರಲ್ಲಿ ಧರ್ಮಕ್ಷೇತ್ರ ಕರ್ಮಕ್ಷೇತ್ರ ಗಳಲ್ಲಿ ಮಾನವ ಸೇವೆಯನ್ನು ಕೈಕೊಂಡ ಆಧುನಿಕರಾದ ಕೆಲವು ಮಹನೀಯರ ಗುಣಪ್ರಶಂಸೆಗಳೂ ' ವಂದೇ ಮಾತರಂ ' ' ದೇಶಭಕ್ತ ಪ್ರತಿಜ್ಞಾಪಂಚಕ' ' ಭಕ್ತನ ಹಾರೈಕೆ ' ಎಂಬ ಇತರ ಮೂರು ಪದ್ಯಗಳೂ ಇವೆ. ಇವುಗಳಲ್ಲಿ ' ಭಕ್ತನ ಹಾರೈಕೆ 'ಯು ಮೊದಲನೆಯ ಭಾಗಕ್ಕೆ ಹೆಚ್ಚು ಸಂಬಂಧಪಟ್ಟದ್ದು.

' ವಸಂತಕುಸುಮಾಂಜಲಿ ' ಎಂಬ ಹೆಸರಿದ್ದರೂ ಇದರಿಂದ ಬರುವ ಆನಂದವು ವಸಂತದ ಕುಸುಮಾಮೋದವನ್ನೂ ಚಂಚಲ ಸೌಂದರ್ಯವನ್ನೂ ಕೋಕಿಲಗಾನವನ್ನೂ ಅನುಭವಿಸಿ ಉಂಟಾಗುವ ಮೋಹಕ್ಕೆ ಸದೃಶವಲ್ಲ. ಇದರಲ್ಲಿ ಕಂಡುಬರುವುದು ಜ್ಯೋತ್ಸ್ನಾವತಿಯ ದೂತಿಯಾದ ಪಶ್ಚಿಮದಿಗಂಗನೆಯ ಉಜ್ವಲಮುಖರಾಗವಲ್ಲ; ಅನಂತ ವಾದ ಅಂತರಿಕ್ಷದ ಸ್ನಿಗ್ಧಕಾಂತಿ. ಹರಿಣಗಳು ಹಾರಾಡುವ ಹಸುರು ಹುಲ್ಲುಗಾವಲಿನಲ್ಲಿ ಪಳಪಳನೆ ತಳತಳನೆ ಹರಿಯುವ ಹೊಳೆಯ ಚಪಲ ತೆಯಲ್ಲ; ಮಹಾಮಹಿಮಶಾಲಿಯಾದರೂ ಮೇರೆ ಮೀರದೆ ಅಖಂಡ ವಾಗಿ ನಿಂತಿರುವ ಸಮುದ್ರರಾಜನ ಘನಗಾಂಭೀರ್ಯ. ಮೋಹಿನೀ ಗಾನವಲ್ಲ; ಸರ್ವವೇದಾಂತಸಾರಸಂಗ್ರಹ.

ಮನುಷ್ಯನು ವಿಷಯಾನುಭವ ಮಾಡುವುದಕ್ಕೆ ತವಕಪಡುತ್ತಿ ರುವ ಬರಿಯ ಇಂದ್ರಿಯಗಳ ಕಂತೆಯಲ್ಲ. ಆದ್ದರಿಂದ ಅವನು ಅವಿ ಕಲೇಂದ್ರಿಯನಾಗಿದ್ದರೂ

" ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ ಸರ್ವಾನ್ ಕಾಮಾನ್ ಛಂದತಃ ಪ್ರಾರ್ಥಯಸ್ವ | ಇಮಾ ರಾಮಾಃ ಸರಥಾಃ ಸತೂರ್ಯಾಃ ನಹೀದೃಶಾ ಲಂಭನೀಯಾ ಮನುಷ್ಯೈಃ || ಆಭಿರ್ಮತ್ಪ್ರ

ಶ್ಚಾಭಿಃ ಪರಿಚಾರಯಸ್ವ...."
ಎಂದು ಹೇಳಿದರೆ

"ಶ್ವೋಭಾವಾ ಮರ್ತ್ಯಸ್ಯ ಯದಂತಕೈತತ್ ಸರ್ವೇಂದ್ರಿಯಾಣಾಂ ಜರಯಂತಿ ತೇಜಃ। ಅಪಿ ಸರ್ವಂ ಜೀವಿತಮಲ್ಪಮೇವ ತವೈವ ವಾಹಾಸ್ತವ ನೃತ್ಯಗೀತೇ ॥"

ಎಂದು ಉತ್ತರ ಕೊಡುವ ಚಿತ್ತವೃತ್ತಿಗಳೂ ಮಾನವ ಪ್ರಕೃತಿಗಳೂ ಇರುತ್ತವೆ. ಅವುಗಳಿಗೆ ಇಂದ್ರಿಯ ಸುಖವು ತುಚ್ಛವಾಗುವುದು; ಬಾಹ್ಯವಿಷಯಗಳು ಹುಚ್ಚುಹಿಡಿಸವು. ಇಂದ್ರಿಯಗಳಿಗೆ ತನ್ನ ಒಂದು ಅಂಶದಿಂದ ಇಂದ್ರಿಯಶಕ್ತಿಯನ್ನು ಕೊಟ್ಟಿರುವ ಅಖಂಡಶಕ್ತಿಯು ತಾನೇ ತಾನಾದರೆ ಇಂದ್ರಿಯಗಳ ಆಟವೆಲ್ಲಿಯದು? ನಿಧಿನಿಕ್ಷೇಪಗಳಿಗೆ ಒಡೆಯನಾದ ಧನಾಧಿಪನು ತನ್ನ ಭಂಡಾರಕ್ಕೆ ಬೀಗಮುದ್ರೆಯನ್ನು ಹಾಕಿಬಿಟ್ಟರೆ ಅವನ ಪರಿವಾರದವರು ಅನುಭವಿಸುವ ಐಶ್ವರ್ಯ ಭೋಗವೆಲ್ಲಿಯದು?

ಇಂದ್ರಿಯಗಳಿಗೆ ಬೇಕಾದ ವಿಷಯಗಳು ಹೇಗೆ ಇವೆಯೋ ಹಾಗೆಯೇ ಅಂತರಾತ್ಮಕ್ಕೂ ಬೇಕಾದ ವಿಷಯಗಳಿವೆ; ಇವೆರಡರಿಂದಲೂ ಆನಂದ ಉಂಟು ಎಂಬುದನ್ನು ಒಪ್ಪಿಕೊಂಡರೆ, ಕಾವ್ಯದ ಉದ್ದೇಶವು ನೀತಿಬೋಧೆಯೋ ಆಹ್ಲಾದವೇ ಎಂಬ ವಿಚಾರದಲ್ಲಿ ಅನಾದಿಯಾಗಿರುವ ಜಗಳವು ನಿಂತು ಹೋಗುವುದೆಂದು ತೋರುತ್ತದೆ.

ಈ ಪದ್ಯಗಳಲ್ಲಿ ಕೆಲವು ಇಂಗ್ಲಿಷ್ ಕವಿತೆಗಳ ಭಾಷಾಂತರಗಳು; ಆದರೂ ಅವು ಭಾಷಾಂತರಗಳಂತಿಲ್ಲ. ಇದು ಉತ್ತಮವಾದ ಭಾಷಾಂತರದ ಲಕ್ಷಣವೆಂದು ಹೇಳುವುದು ಅನಾವಶ್ಯಕ. ಇವುಗಳಿಗೆ ರಾಗದ ಕಟ್ಟಿಲ್ಲ; ಯಾವ ರಾಗದಲ್ಲಿ ಹೇಳಿದರೆ ಅದೇ ರಾಗ; ಪರಿಶುದ್ಧವಾದ ಬಿಳಿಯ ವಸ್ತ್ರಕ್ಕೆ ಯಾವ ಬಣ್ಣವನ್ನು ಹಾಕಿದರೂ ಒಪ್ಪುವುದು. ಹಾಗೆಯೇ ಬಿಟ್ಟರೆ ಅದೂ ರಮಣೀಯವೇ.

ತಮ್ಮ ಗ್ರಂಥವನ್ನು ಮ॥ ಗುಂಡಪ್ಪನವರು ಬಡಹುಲ್ಲಿಗೆ ಹೋಲಿಸಿದ್ದಾರೆ. ಇಂಥ ಹುಲ್ಲನ್ನು ತಿಂದು ಕನ್ನಡ ನಾಡಿನ ದನಕರುಗಳು ಅಮೃತವನ್ನು ಕರೆಯುವಂತಾದರೆ ಸಾಕು.

೧೨.

# ಟೊಳ್ಳುಗಟ್ಟಿ ಅಥ್ವಾ ಮಕ್ಕಳಿಸ್ಕೂಲ್ ಮನೇಲಲ್ವೇ?

ಇದು ಮ|| ಕೈಲಾಸಂ ಅವರಿಂದ ವಿರಚಿತವಾದ ಒಂದು ಗದ್ಯ ಸಾಮಾಜಿಕ ಪ್ರಹಸನ. ಇದರ ವಸ್ತುವು ಸಮಸಾಮಯಿಕ ಜೀವನ ದಿಂದ ತೆಗೆದುಕೊಂಡದ್ದೂ ನಮ್ಮ ಈಗಿನ ವಿದ್ಯಾಭ್ಯಾಸದ ಹುಳು ಕನ್ನು ತೆಗೆದು ತೋರಿಸುವ ಉದ್ದೇಶವುಳ್ಳದ್ದೂ ಆಗಿದೆ. ಇಂಗ್ಲೆಂಡಿ ನಲ್ಲಿ ಈಚಿಗೆ ಇಂಥ ಸಾಮಾಜಿಕ ನಾಟಕಗಳು ಬಹಳವಾಗಿವೆ; ಇವುಗಳಲ್ಲಿ ಒಂದೊಂದನ್ನು ಪ್ರದರ್ಶಿಸುವುದಕ್ಕೂ ಬಹು ಕಾಲವೂ ಬಹು ದ್ರವ್ಯವೂ ಬಹು ಶ್ರಮವೂ ವೆಚ್ಚವಾಗುತ್ತಿವೆ—ಇವುಗಳ ವಿವರವನ್ನು ಕೇಳಿದರೆ ಬಡವರಾದ ನಮಗೆ ಮೈ ಜುಮ್ಮೆನ್ನುತ್ತದೆ. ಆದರೂ ಇವುಗಳಿಂದ ಸಂಗೀತಶ್ರವಣ ಪ್ರಪಂಚದೃಶ್ಯಗಳನ್ನು ಬಹುಮಟ್ಟಿಗೆ ಇದ್ದಕ್ಕಿದ್ದ ಹಾಗೆ ಅನುಕರಣಮಾಡುವ ರಂಗದರ್ಶನ ಇವು ಹೊರತು ಇತರ ಉಪಯೋಗವು ಬಹಳ ಕಡಮೆಯೆಂದು ನಮ್ಮ ಭಾವನೆ. ಲೋಕವನ್ನು ಅನುಕರಣ ಮಾಡುವುದೂ ಜನಜೀವನವನ್ನು ವಿಮರ್ಶಿಸುವುದೂ ಸಾಹಿತ್ಯದ ಸ್ವಭಾವೋದ್ದೇಶಗಳೆಂದು ಒಪ್ಪಿಕೊಂಡರೂ, ರಸದೃಷ್ಟಿ ಯಿಂದಲೂ ಘನವಾದ ಉದ್ದೇಶದಿಂದಲೂ ನಮ್ಮ ಮುಂದಿರುವ ಪ್ರಾಪಂಚಿಕ ಸಾಮಗ್ರಿಯನ್ನು ವಿವೇಚಿಸಿ ಆರಿಸಿಕೊಂಡ ಹೊರತು ತಕ್ಕ ಫಲವು ದೊರೆಯುವುದಿಲ್ಲ. ಕಂಡಕಂಡ ಹಣ್ಣುಗಳೆಲ್ಲಾ ರುಚಿಯಾಗಿರು ವುದಿಲ್ಲ. ಕಂಡಕಂಡ ನೋಟವೆಲ್ಲಾ ಕಣ್ಣಿಗೆ ಇಂಪಾಗಿರುವುದಿಲ್ಲ; ಅದರಂತೆ ಲೋಕಾನುಕರಣ (Imitation of life) ಮಾಡುತ್ತೇ ವೆಂದು ಹೊರಟು ಸಾರಹೀನವಾದ ರಸಹೀನವಾದ ಕಂಡಕಂಡ ವಸ್ತುವ ನ್ನೆಲ್ಲಾ ತೆಗೆದುಕೊಂಡು ಸಾಹಿತ್ಯದಲ್ಲಿ ಪ್ರತಿಪಾದಿಸುವುದಕ್ಕೆ ಹೊರಟರೆ ಅದು ಶುಷ್ಕವಾಗುತ್ತದೆ. ಇಂಗ್ಲೆಂಡಿನಲ್ಲಿ ಈಗ ಇಂಥ ನಾಟಕಗಳಲ್ಲಿಯೇ ಜನರಿಗೆ ಅಭಿರುಚಿ; ಆದರೆ ಜನಬಾಹುಳ್ಯದಿಂದಲೇ ಯೋಗ್ಯತಾಪರೀಕ್ಷೆ ಮಾಡುವ ಮಾರ್ಗವನ್ನು ವಿವೇಕಿಗಳು ಒಪ್ಪುವುದಿಲ್ಲ. ರಾಜ್ಯದಲ್ಲಿ

ರಾಜನು ಹೇಗೋ ಹಾಗೆ ಸಾಹಿತ್ಯದಲ್ಲಿಯೂ ಕವಿಯಾದವನು ತನ್ನ ಜವಾಬ್ದಾರಿಯನ್ನು ಅರಿತು ಕೆಲಸ ಮಾಡಬೇಕು. " ರಾಜಾ ರಾಷ್ಟ್ರಸ್ಯ ಕಾರಣಂ" ಎಂಬುದು ನಿಜವಾದರೆ " ಕವೀ ರಾಷ್ಟ್ರಸ್ಯ ಕಾರಣಂ " ಎಂಬುದು ಅದಕ್ಕಿಂತ ಸಹಸ್ರದಷ್ಟು ನಿಜ. ಹಾಗಲ್ಲದೆ ಕವಿಯು, ಅದರಲ್ಲಿಯೂ ಜನರ ಮೆಚ್ಚುಗೆಗೆ ಪಾತ್ರನಾದ ಕವಿಯು, ತತ್ಕಾಲಕ್ಕೆ ದೊಡ್ಡದಾಗಿ ಕಾಣುವ, ಚಪಲಗೊಳಿಸುವ ಅಥವಾ ಸಂಪಾದನೆಯನ್ನು ಕೊಡುವ ವೃತ್ತಾಂತವನ್ನು ತೆಗೆದುಕೊಂಡು ಅದರಮೇಲೆ ತನ್ನ ಸಾಮರ್ಥ್ಯವನ್ನು ಉಪಯೋಗಿಸುತ್ತಾ ಹೋದರೆ ಪರಿಣಾಮವು ಮಕ್ಕಳಾಟದಂತೆ ನಿಷ್ಪ್ರಯೋಜಕವಾಗಿಯೋ ಕೊನೆಗೆ ವಿಪರೀತವಾಗಿಯೋ ಆಗಬಹುದು. ಇಂಥ ಉಚ್ಚ ಉದ್ದೇಶ್ಯವನ್ನು ತಿಳಿದೇ ನಮ್ಮವರು " ನಾನೃಷಿಃ ಕುರುತೇ ಕಾವ್ಯಂ " ಎಂದು ಹೇಳಿರುವುದು. ಪಾಶ್ಚಾತ್ಯರಿಗೆ ಇದು ತಿಳಿಯದೆಂದಲ್ಲ; ಆದರೆ ಸದ್ಯದಲ್ಲಿ ಅವರು ಬರೆಯುತ್ತಿರುವ ನಾಟಕಗಳನ್ನು ನೋಡಿದರೆ ಬಹುಮಟ್ಟಿಗೆ ಅವರಲ್ಲಿ ನಮಗೆ ಗೌರವವು ಕಡಮೆಯಾಗುವಂತಿದೆ.

" ಟೊಳ್ಳುಗಟ್ಟಿ " ಯೂ ಇಂಥ ಒಂದು ನಾಟಕವಾಗಿದೆ. ಆದರೆ ಇದರಲ್ಲಿ ಪ್ರತಿಪಾದಿತವಾಗಿರುವ ವಿಷಯವು ಘನವಾಗಿಯೂ ಎಲ್ಲರೂ ವಿಚಾರಮಾಡಲರ್ಹವೂ ಆಗಿದೆ; ಅದು ತಿಳಿಯುವಂತೆ ಮೊದಲು ಇಲ್ಲಿ ಸಂಗ್ರಹವಾಗಿ ಇದರ ಕಥೆಯನ್ನು ಬರೆಯುತ್ತೇವೆ—

ಹಿರಿಯಣ್ಣಯ್ಯನೆಂಬಾತನಿಗೆ ಪುಟ್ಟು ಮಾಧು ಎಂದು ಇಬ್ಬರು ಗಂಡುಮಕ್ಕಳು ಇದ್ದರು. ಇಬ್ಬರೂ ಪ್ರಾಪ್ತವಯಸ್ಕರು; ಅವರಿಗಾಗಲೇ ಹೆಂಡಿರು ಮನೆಗೆ ಬಂದಿದ್ದರು. ಮನೆಯಲ್ಲಿ ಇವರು, ಇವರ ತಾಯಿ ಭಾಗೀರಥಮ್ಮ, ಒಂದು ಕೈಮೊಗು, ಹಿರಿಯಣ್ಣಯ್ಯನ ತಂಗಿ ನಾಗಮ್ಮನೆಂಬ ಮನೆ ತಪ್ಪಿದ ಹೆಂಗಸು, ಇಷ್ಟು ಜನವಿದ್ದರು.

ಪುಟ್ಟು ಮಾಧು ಇಬ್ಬರೂ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಹೋಗಿದ್ದರು. ಪುಟ್ಟು ಮೊದಲನೆಯ ತರಗತಿಯಲ್ಲಿ ತೇರ್ಗಡೆ ಹೊಂದಿದನು; ಮಾಧುಗೆ ಪರೀಕ್ಷೆ ಹೋಯಿತು. ಇದರಿಂದ ಪುಟ್ಟುವಿನ ಮೇಲೆ ತಂದೆಗೆ ಹೇಳಲಾರದಷ್ಟು ವಿಶ್ವಾಸ; ಮಾಧುವನ್ನು ಕಂಡರೆ ಅಷ್ಟೂ ಅಷ್ಟು

ಬೇಸರ; ಪರೀಕ್ಷೆ ಹೋದವನ ಹೆಂಡತಿಯೆಂದು ಮಾಧುವಿನ ಹೆಂಡತಿ ಸಾತುವಿಗೂ ಕಿರುಕುಳ; ಮಾಧುವು ಊರಲ್ಲೆಲ್ಲಾ ಹತ್ತು ಜನಕ್ಕೆ ಉಪಕಾರಿ ಎನ್ನಿಸಿಕೊಂಡು ವಿಶ್ವಾಸಪಾತ್ರನಾಗಿ ಮನೆಯಲ್ಲಿ ಹಾಸಿಗೆ ಹಿಡಿದು ಮಲಗಿದ್ದ ತಾಯಿಗೂ ಹಾಲು ಹಸುಳೆಗೂ ಔಷಧಿ ಪಥ್ಯಗಳನ್ನು ತಂದು ಕೊಡುತ್ತಾ ತನ್ನ ಸುಖವನ್ನು ಒತ್ತಟ್ಟಿಗಿಟ್ಟು ಉಪಚಾರ ಮಾಡುತ್ತ ಇದ್ದನು. ಪುಟ್ಟುವಿಗೆ ಈ ಯೋಗ್ಯತೆಯಿಲ್ಲ; ಹೇಡಿ. ತಾಯಿ ಪಡುತ್ತಿರುವ ಕಷ್ಟವನ್ನು ನೋಡಿ ತನಗೆ ತೊಂದರೆಯೆಂದು ಬೇಸರಪಟ್ಟುಕೊಳ್ಳುವನು; ಅವನು ಕಂಡಿರುವುದು ಬರಿಯ ಪುಸ್ತಕದ ಓದು. ಹೀಗಿರಲು ಒಂದು ದಿನ ರಾತ್ರಿ ಮನೆಗೆ ಬೆಂಕಿ ಬೀಳಲು ಪುಟ್ಟುವು ಹೆದರಿಕೊಂಡು ಬೀದಿಗೆ ಓಡಿ ಹೋಗುವನು. ಮಾಧುವು ಎದ್ದು ತಾಯಿ ತಂದೆ ಮುಂತಾದವರನ್ನು ಎಬ್ಬಿಸಿ ಸುರಕ್ಷಿತವಾಗಿ ಹೊರಕ್ಕೆ ಕರೆದುತಂದು ಬಿಟ್ಟು ಅಣ್ಣನನ್ನು ಎಲ್ಲಿಯೂ ಕಾಣದ್ದರಿಂದ ಅವನನ್ನು ಹುಡುಕುವುದಕ್ಕೆಂದು ಬೆಂಕಿಬಿದ್ದಿದ್ದ ಕಡೆಗೆ ನುಗ್ಗುವನು. ಬಹಳ ಹೊತ್ತು ಅವನ ಸುಳುವನ್ನು ಕಾಣದೆ ಅಲ್ಲಿಯೇ ಕೂಗುತ್ತಾ ಸುತ್ತಾಡುತ್ತಾ ಮೂರ್ಛೆ ಹೋಗಲು, ಅಷ್ಟು ಹೊತ್ತಿಗೆ ನೆರೆಹೊರೆಯವರು ಬಂದು ಅವನನ್ನು ಎತ್ತಿಕೊಂಡು ಬರುವರು. ಪುಟ್ಟುವೇ ಟೊಳ್ಳು, ಮಾಧುವೇ ಗಟ್ಟಿ.

ಇದರಿಂದ ಬರಿಯ ಪ್ಯಾಸುಗಳಿಗೆ ಅತಿಯಾಗಿ ಬೆಲೆ ಕೊಡುತ್ತಿರುವ ನಮ್ಮ ಅವಿವೇಕವೂ, ಅಸಹಾಯರೂ ನಿಷ್ಪ್ರಯೋಜಕರೂ ಆಗುವ ಟೊಳ್ಳುಗಳನ್ನು ತಯಾರುಮಾಡುತ್ತಿರುವ ವಿದ್ಯಾಭ್ಯಾಸಕ್ರಮದ ಸ್ವರೂಪವೂ ಕಂಡುಬರುತ್ತದೆ.

ಪ್ರತಿಯೊಂದು ಪದಾರ್ಥಕ್ಕೂ ಅದರದರ ಪ್ರಯೋಜನವನ್ನು ನೋಡಿ ಬೆಲೆ ಕಟ್ಟುವುದು ಸ್ವಭಾವ. ಹಾಗೆ ಪ್ಯಾಸಿನಿಂದ ಮೊನ್ನೆ ಮೊನ್ನೆಯವರೆಗೂ ಹೊಟ್ಟೆ ಹೊರೆದುಕೊಳ್ಳುವ ಸಾಧನವು ಸುಲಭವಾಗಿ ದೊರೆಯುತ್ತಿದ್ದದ್ದರಿಂದಲೂ ಪ್ಯಾಸು ಎಷ್ಟೆಷ್ಟು ದೊಡ್ಡದಾದರೆ ಧನಸಂಪಾದನೆಯು ಅಷ್ಟಷ್ಟು ಅತಿಶಯವಾಗಿದ್ದದ್ದರಿಂದಲೂ ಪ್ಯಾಸು ಪರೀಕ್ಷೆಗಳಿಗೆ ಪ್ರಾಮುಖ್ಯತೆಯು ಬಂದದ್ದರಲ್ಲಿ ಆಶ್ಚರ್ಯವೇನು? ಪರೀಕ್ಷೆಗಳಿಂದ

ಇಷ್ಟೊಂದು ಪ್ರಾಶಸ್ತ್ಯವನ್ನು ಕೊಡುವುದು ಅವಿವೇಕವೆಂದು ಯಾರಾದರೂ ಈಗ ಹದಿನೈದು ಇಪ್ಪತ್ತು ವರ್ಷಗಳ ಕೆಳಗೆ ಹೇಳಿದ್ದರೆ ಅವರನ್ನು ಎಲ್ಲರೂ ಹುಚ್ಚರೆನ್ನುತ್ತಿದ್ದರು. ಆದರೆ ಈಗ ಅದು ಯಾವ ನಾಟಕ ಪ್ರಹಸನ ಉಪನ್ಯಾಸಗಳೂ ಇಲ್ಲದೇ ಕಾಲ ಪರಿಸ್ಥಿತಿಯಿಂದಲೇ ಸ್ಪಷ್ಟವಾಗಿ ಗೊತ್ತಾಗುತ್ತಿದೆ.

"ಇದರಲ್ಲಿ ಬರೋ ಜನಗಳು, ಅವರ ಸುಖದುಃಖಗಳು, ಅವರಾಡೋ ಮಾತುಗಳು, ಇವೆಲ್ಲಾ ಎಳ್ಳಷ್ಟೂ ಹೆಚ್ಚುಕಡ್ಮೆ ಮಾಡ್ದೆ ತದ್ರೂಪಾಗಿ ಪ್ರದರ್ಶಿಸಿದೇನು. ಈ ನಾಟಕ್ದಲ್ಲಿ ಎಗ್ಝಾಜಿರೇಷ್ (Exaggeration) ಅಂತಂತಾರಲ್ಲ ಆದರ ವಾಸನೆಯೇ ಸುತರಾಂ ಇಲ್ಲ" ಎಂದು ಗ್ರಂಥಕರ್ತರು ಹೇಳುತ್ತಾರೆ. ಆದರೆ ನಮಗೆ ಒಂದು ಸಂದೇಹವು ತೋರುತ್ತದೆ:—ಈಗಿನ ವಿದ್ಯಾಭ್ಯಾಸದಿಂದ ಎಲ್ಲರೂ ಪುಟ್ಟುಗಳಂತಾಗುತ್ತಾರೆಯೇ? ಎಂಥ ಪಶುವಾಗಲಿ, ಮನೆಗೆ ಬೆಂಕಿ ಬಿದ್ದಾಗ ನಿಶ್ಚಿಂತೆಯಾಗಿ ಬೀದಿಯ ಜಗುಲಿಯ ಮೇಲೆ ಗುಂಡುಕಲ್ಲಿನಂತೆ ಬಂದು ಕೂತುಬಿಡುತ್ತಾನೆಯೇ? ಇಲ್ಲಿಯಾದರೂ ಸ್ವಲ್ಪವುಟ್ಟಿಗೆ "Exaggeration ಅಂತಂತಾರಲ್ಲ" ಅದು (ಅತಿಶಯೋಕ್ತಿಯು) ಇರುವಂತೆ ನಮಗೆ ತೋರುತ್ತದೆ. ಇದನ್ನು ಬಿಟ್ಟರೆ ಮಿಕ್ಕ ಪಾತ್ರಗಳೂ ಅವರ ನಡೆನುಡಿಗಳೂ ಸನ್ನಿವೇಶಗಳೂ ತದ್ವತ್ತಾಗಿವೆ. ಹುಳುಕುಗಳನ್ನು ಸ್ವಲ್ಪ ವಿಸ್ತಾರಪಡಿಸದೆ, ಸೂಕ್ಷ್ಮದರ್ಶಕ ಯಂತ್ರದಲ್ಲಿಟ್ಟು ತೋರಿಸದಿದ್ದರೆ ಅವುಗಳ ನಿಜಸ್ವರೂಪವು ಗೊತ್ತಾಗುವುದೂ ಇಲ್ಲ. ಏನೇ ಆಗಲಿ, ನಾವು "ಚೀನಾದೇಶದ ಚರಿತ್ರೆ! ಜಾರ್ಜಿಯಾದ ಜನಸಂಖ್ಯೆ! ಸೈಬೀರಿಯಾದ ಸಸ್ಯಾದಿಗಳು! ಅಬ್ಸೀನಿಯಾದ ಆಭರಣಗಳು! . . . ಇವೇ ಮುಂತಾದ, ನಮ್ಮ ಜನಗಳಿಗೆ ಖುದ್ದು ಉಪಯೋಗವಾಗುವ ವಿಷಯಗಳ್ನ ವರ್ಷದ ಹನ್ನೆರಡ್ತಿಂಗಳಲ್ಲಿ ಹನ್ನೊಂದು ತಿಂಗ್ಳು" ಓದುತ್ತ ಓದುತ್ತ ಒಂದು ಬಗೆಯ ಟೊಳ್ಳುಗಳಾಗುತ್ತಿದ್ದೇವೆಂಬುದು ನಿಜ. ನಮಲ್ಲಿ ನೂರಾರು ರೂಪಾಯಿನ ಸಂಬಳಗಾರರೂ ಅಧಿಕಾರಿಗಳೂ ಮೈಸೂರಿನ ಚರಿತ್ರೆಯನ್ನು ಚೆನ್ನಾಗಿ ಅರಿಯದವರಾಗಿದ್ದಾರೆಂದು ಅನೇಕಸಾರಿ ಹೇಳಿದ್ದೇವೆ. ಬಾಲ್ಯ ಯೌವನಗಳನ್ನೆಲ್ಲಾ ಇಂಥ ಓದಿನಲ್ಲಿ

ಕಳೆದು ನಮಗೆ ಒಂದು ವಿಧವಾದ ಶೋಚನೀಯವಾದ ಅಸಹಾಯತೆಯು ಪ್ರಾಪ್ತವಾಗಿದೆ; ಇದನ್ನು ತಿಳಿದುಕೊಳ್ಳಬೇಕಾದರೆ ಹಳ್ಳಿಯ ವಾಸಿಗಳಾದ ಕೆಲವು ಹಿಂದಿನ ಕಾಲದ ಜನರೊಡನೆ ನಮ್ಮನ್ನು ಹೋಲಿಸಿಕೊಂಡು ನೋಡಬೇಕು.

ಗ್ರಂಥಕರ್ತರಲ್ಲಿ—ಅದರಲ್ಲಿಯೂ ತಿರುಳು ಇರತಕ್ಕ ಗ್ರಂಥಕರ್ತರಲ್ಲಿ—ಒಂದು ವಿಧವಾದ ಗಭೀರ ಆತ್ಮವಿಶ್ವಾಸವಿರುತ್ತದೆ. ಇದು ಅವರ ಬಲವೂ ಹೌದು ದೌರ್ಬಲ್ಯವೂ ಹೌದು—ಜನರ ಹೊಗಳಿಕೆ ತೆಗಳಿಕೆಗಳಿಗೆ ಬದಲಾಯಿಸದೆ ಪಟ್ಟುಹಿಡಿದು ಅವರು ಅನುಸರಿಸಿಕೊಂಡು ಹೋಗುವ ಭಾಗವು ಗುಣಭಾಗವಾದರೆ ಅದರಿಂದ ಲಾಭವುಂಟು. ಹಾಗಲ್ಲದೆ ಅದು ಅವಗುಣವಾದರೆ ಅಷ್ಟೂ ಅಷ್ಟು ನಷ್ಟ. ಪ್ರಕೃತದಲ್ಲಿ ಮ|| ಕೈಲಾಸಂ ಅವರನ್ನೂ ಅವರ ಗ್ರಂಥಗಳನ್ನೂ ಇದಕ್ಕೆ ಉದಾಹರಣೆಯಾಗಿ ಹೇಳಬಹುದು. ಅವರ ಗ್ರಂಥಗಳಲ್ಲಿ ಜೀವಕಳೆಯಿದೆ; ಒಂದು ವಿಧವಾದ ನವತ್ವವಿದೆ; ಸದುದ್ದೇಶವಿದೆ; ಇವುಗಳನ್ನು ನಿರ್ಲಕ್ಷ್ಯವಾಗಿ ಅನುಸರಿಸಿಕೊಂಡು ಹೋಗುವುದು ಬಲ ಸೂಚಕವೂ ಗುಣವೂ ಲಾಭಕರವೂ ಆಗಿದೆ. ಆದರೆ ಇವುಗಳನ್ನು ಅಭಿನಯಿಸುವ ಕ್ರಮವೂ ಬರೆದಿರುವ ಭಾಷೆಯೂ ದೋಷರಹಿತವಾದವುಗಳಲ್ಲ. ಇವರು ಅಭಿನಯಿಸುವ ಇಂಥ ನಾಲ್ಕಾರು ದೃಶ್ಯಗಳನ್ನು ನಾವು ಕಣ್ಣಾರ ನೋಡಿದ್ದೇವೆ; ಆಗ ಅವರ ನಾಟ್ಯಾಭಿನಯ ಕೌಶಲದಲ್ಲಿ ನಮಗೆ ಎಷ್ಟು ಗೌರವ ಹುಟ್ಟಿತೋ ಅದರ ಪ್ರದರ್ಶನಕ್ರಮದಲ್ಲಿ ಅಷ್ಟು ದೋಷವೂ ಅನುಭವಕ್ಕೆ ಬಂತು. ಇವರು ಮಾತನಾಡುವುದು ಬಹು ಜಾಗ್ರತೆ ಮತ್ತುಅಸ್ಪಷ್ಟ. ನಾಟಕಶಾಲೆಯಲ್ಲಿ ಮುಂದಿನ ಒಂದೆರಡು ಸಾಲುಗಳನ್ನು ಬಿಟ್ಟು ಹಿಂದಿರತಕ್ಕ ಪ್ರೇಕ್ಷಕರಿಗೆ ಇವರು ಆಡುವ ನೂರು ಮಾತುಗಳಲ್ಲಿ ತೊಂಬತ್ತೇ ಕೇಳಬರುವುದಿಲ್ಲ. ಇದು ನಮ್ಮೊಬ್ಬರ ಅನುಭವವಲ್ಲ. ನಮ್ಮಂತೆಯೇ ಅನುಭವಿಸಿದ ನಮ್ಮ ಮಿತ್ರರು ಒಬ್ಬಿಬ್ಬರು ಈ ಕುಂದನ್ನು ಅವರ ಗಮನಕ್ಕೆ ತಂದಂತೆಯೂ ಅದಕ್ಕೆ ಅವರು ನೈಸರ್ಗಿಕವಾಗಿ ತೋರಬೇಕಾದರೆ ಹಾಗೇ ಮಾತನಾಡಬೇಕೆಂದು ಉತ್ತರಕೊಟ್ಟಂತೆಯೂ ಕೇಳುತ್ತೇವೆ. ಮ|| ಕೈಲಾಸಂ ಅವರು ಮಾತನಾಡುವುದು ಎಲ್ಲರಂತಲ್ಲ;

ಆದರಲ್ಲಿ ಕೆಲವು ವೈಲಕ್ಷಣ್ಯಗಳಿವೆ. ಈ ವೈಲಕ್ಷಣ್ಯಗಳನ್ನು ಇತರರಲ್ಲಿಯೂ ಆರೋಪಿಸಿ ನಿಸರ್ಗತೆಯ ಚಿಹ್ನೆಯೆಂದು ಹಟಹಿಡಿದು ವಾದಿಸುತ್ತಾ ಅವುಗಳನ್ನೇ ನಾಟಕಾಭಿನಯದಲ್ಲಿಯೂ ಉಪಯೋಗಿಸುವುದು ನಿಜವಾಗಿದ್ದರೆ ಇದರಿಂದ ನಷ್ಟವೇ ಹೊರತು ಲಾಭವಲ್ಲ. ಗ್ರಂಥವನ್ನು ವಿಮರ್ಶೆಮಾಡುವುದಕ್ಕೆ ಹೊರಟು ಜನರ ಹುಳುಕುಗಳನ್ನು ಎತ್ತಿ ಮಾಡುವುದು ನ್ಯಾಯವಲ್ಲವೆಂದು ನಮ್ಮಮೇಲೆ ಆಕ್ಷೇಪಣೆ ಬರಬಹುದು. ಇದನ್ನು ನಾವು ಬಲ್ಲೆವು. ಆದರೆ ಇಲ್ಲಿ ನಾವು ಖಂಡಿಸುತ್ತಿರುವುದು ಮ|| ಕೈಲಾಸಂ ಅವರನ್ನಲ್ಲ; ಟೊಳ್ಳುಗಟ್ಟಿಯನ್ನು ಪ್ರದರ್ಶಿಸುತ್ತಿರುವ ಅಭಿನೇತೃಗಳನ್ನ; ಟೊಳ್ಳುಗಟ್ಟಿಯನ್ನು ಬರೆದಿರುವ ಕವಿಗಳನ್ನ.

ರಂಗದಲ್ಲಿ ಈ ನಾಟಕವನ್ನು ಪ್ರದರ್ಶಿಸುವುದಕ್ಕೆ ಬಂದಾಗ ಅಭಿನಯ ಕ್ರಮದಲ್ಲಿ ಹೇಗೆ ದೋಷವಿರುತ್ತದೆಯೋ ಹಾಗೆಯೇ ಈ ಗ್ರಂಥವನ್ನು ಬರೆದಿರುವ ಭಾಷೆಯಲ್ಲಿಯೂ ಒಂದು ವಿಧವಾದ ಕೊರತೆಯಿದೆ; ಇಲ್ಲಿಯೂ ನೈಸರ್ಗಿಕವಾಗಿರಬೇಕೆಂಬ ಉದ್ದೇಶದಿಂದ ಹೊಸೆದ ಹಗ್ಗದಂತಿರುವ ಅದೊಂದು ಬಗೆಯ ಶೈಲಿಯನ್ನು ಉಪಯೋಗಿಸಿರುತ್ತಾರೆ. ಯಾವ ದೇಶದ ಯಾವ ಕಾಲದ ಸಾಹಿತ್ಯವನ್ನು ನೋಡಿದರೂ ಆಡುವ ಭಾಷೆಗೂ ಬರೆಯುವ ಭಾಷೆಗೂ—ಅದನ್ನು ಎಷ್ಟು ಸುಲಭವಾಗಿ ನೈಸರ್ಗಿಕವಾಗಿ ಬರೆಯಬೇಕೆಂದು ಪ್ರಯತ್ನಪಟ್ಟರಲಿ—ವ್ಯತ್ಯಾಸವಿದ್ದೇ ಇರುವುದೆಂದು ಗೊತ್ತಾಗುವುದು. ಅಲ್ಲದೆ ಆಡುವಂತೆಯೇ ಸ್ವಲ್ಪವೂ ಭೇದವಿಲ್ಲದೆ ಬರೆಯುವುದು ಸಾಧ್ಯವೇ? ಈಗ ಕೆಲವು ಗ್ರಂಥಗಳಲ್ಲಿ ಪ್ರಾಚೀನಮಾರ್ಗ ಪಕ್ಷಪಾತಿಗಳು ಬರೆಯುವ, ಎರಕ ಹುಯ್ದ ಉಕ್ಕಿನ ಗಟ್ಟಿಗಳಂತೆ ಮೂಲೆಮೂಲೆಯಾಗಿ ಪೆಡಸಾಗಿರುವ ಭಾಷೆಯು ಎಷ್ಟು ಕೃತಕವೋ ಇದೂ ಅಷ್ಟೇ ಕೃತಕವಾಗುತ್ತದೆ. Simplified spellingನ್ನು (ಸುಲಭಾಕ್ಷರ ಸಂಯೋಜನಕ್ರಮವನ್ನು) ಅನುಸರಿಸಿ ಬರೆದ ಭಾಷೆಯನ್ನು ಓದುವುದು ಅಭ್ಯಾಸವಿಲ್ಲದೆ ಹೇಗೆ ಅಸಾಧ್ಯವೋ ಇದೂ ಹಾಗೆ ಅಭ್ಯಾಸವಿಲ್ಲದೇ ಹೋದರೆ ಅಸಾಧ್ಯವಾಗುವುದು. ಕೆಲವು ಉದಾಹರಣೆಗಳು :—

(೧) ನಾಟ್ಕದ ವಿಚಾರಾನೇ ಮರತ್ಬಿಟ್ಟು ಧ್ವಜಸ್ತಂಬ್ದಾಂಗೆ ನೆಟ್ಕೊಂಡು ನಕ್ಷತ್ರಗಳ ನ್ನೆಣಿಸ್ತಿದ್ದೀಯಾ?

(೨) ನಾಯಿಗ್ಹಾಕಿದ್ದಿನ್ನ್ನಮ್ಮದುಚ್ಚಿಷ್ಠಾನ್ನರೀಗ್ಹಾಕಾ!

(೩) ಈ ಸೊಸೆಗ್ಳೋ ಬರೀ ಬಣ್ಣದ ಬೀಸಣಿಗೆಗಳು; ಹಾರ್ಮೊಣಿ (Harmonium) ಬಾರ್ಸೋ ಕೈ ಹಾಲ್ಕಾಸೀತೇ?

(೪) ಸಾಬೂನ್ಹಾಕಿ ತಿಕ್ಕೊಂಡ್ರೇನ್ ಸುಣ್ಣ ಬಳದ್ಹಾಗೆ ಭೆಳ್ಳಗಾಗತ್ಮೈ ಅಂತ ತಿಳುಕೊಂಡಿದ್ದೀರಾ?

ಇದರಂತೆ ಈ ಗ್ರಂಥದ ಕೊನೆಯಲ್ಲಿ ಬರುವ "ಸಾಕೋದ್ನರಿತಾತ ಸಾವಿರಜನಕ್ತಾತ" ಎಂಬ ವಾಕ್ಯವನ್ನು ಅರ್ಥಮಾಡಿಕೊಳ್ಳುವುದಕ್ಕಂತೂ ತೈತ್ತಿರೀಯ ಉಪನಿಷತ್ತಿನಲ್ಲಿ ಬರುವ ಭೃಗುವಾರುಣಿಯಂತೆ ತಪಸ್ಸು ಮಾಡಬೇಕಾಯಿತು. ಒಂದಾದ ಮೇಲೆ ಒಂದರಂತೆ ಈ ಕೆಳಗೆ ಹೇಳಿರುವ ಪದಚ್ಛೇದ ಕ್ರಮಗಳು ಹೊಳೆದುವು:—

(೧) ಸಾಕುವುದು ನರಿ ತಾತ!

(೨) ಸಾಕುವುದು ನರಿತಾತ.

(೩) ಸಾಕುವುದನ್ನು ಅರಿ ತಾತ!

(೪) ಸಾಕುವುದನ್ನು ಅರಿತಾತ–ಸಾಕುವ ಕ್ರಮವನ್ನು ತಿಳಿದವನು.

ಈ ನಾಲ್ಕನೆಯ ಪದಚ್ಛೇದಕ್ರಮವೂ ಅರ್ಥವೂ (ತುರೀಯಾವಸ್ಥೆಯು) ಸರಿಯೆಂದು ತೋರುತ್ತದೆ. ಅಂತೂ ಇಲ್ಲಿ ಯಾವ ಕಷ್ಟವೂ ಬರುವುದಿಲ್ಲ. ಇಷ್ಟರಮೇಲೆ ಬೇರೆ ಯಾವುದಾದರೂ ಹೆಚ್ಚು ಸಮಂಜಸವಾದ ಅರ್ಥವಿದ್ದರೆ ಅದು ಸದ್ಯಸ್ಥಿತಿಯಲ್ಲಿ ನಮ್ಮ ಅವಗಾಹನೆಗೆ ಮೀರಿದುದೆಂದು ಒಪ್ಪಿಕೊಂಡುಬಿಡುತ್ತೇವೆ. ಮ|| ಶ್ರೀನಿವಾಸರ "ಸಣ್ಣಕತೆಗಳ" ಭಾಷೆಯು ಬಹುಮಟ್ಟಿಗೆ ಈ ದೃಷ್ಟಿಯಿಂದ ತೃಪ್ತಿಕರವಾಗಿದೆ ಎಂದು ಹೇಳಬಹುದು. ಲೋಕಾನುಕರಣಮಾಡಿ ಪ್ರೇಕ್ಷಕರಲ್ಲಿ ಸತ್ಯಭ್ರಮೆಯನ್ನುಂಟುಮಾಡಲೆಳಸುವ ನಟರು ಪಾಠಶಾಲೆಗಳಲ್ಲಿ ಹುಡುಗರು ಬಾಯಿಪಾಠ ಮಾಡಿಕೊಂಡು ಬಂದ ಪದ್ಯಗಳನ್ನು ಒಪ್ಪಿಸುವಂತೆ ಮಾತನಾಡಬಾರದು. ಇದು ಎಲ್ಲರಿಗೂ ತಿಳಿದ ವಿಷಯ; ಆದ್ದರಿಂದ ನಾಟಕ ಲೇಖಕನು ಎಂಥ ಪೆಡಸಾದ ಭಾಷೆಯಲ್ಲಿ ತನ್ನ ಕಾವ್ಯವನ್ನು

ಬರೆದಿದ್ದರೂ ಸಮರ್ಥನಾದ ನಟನು ಅದನ್ನು ತನಗೆ ವಿಧೇಯವಾಗಿ ಮೃದುವಾಗಿರುವಂತೆ ಮಾಡಿಯೇಮಾಡಿಕೊಳ್ಳುತ್ತಾನೆ. ಹಾಗಲ್ಲದೆ ಕಾವ್ಯದ ರಸಾನುಭವ ಮಾಡುವುದಕ್ಕೆ ಯೋಗ್ಯತೆಯಿಲ್ಲದ ನಟನು ಎಂಥ ನೈಸರ್ಗಿಕ ಭಾಷೆಯನ್ನಾದರೂ ತಕ್ಕ ಅಂಗ ಭಂಗಿ ಅಭಿನಯಗಳಿಲ್ಲದೆ ಗಂಭೀರವಾಗಿ ಪಾಠ ಒಪ್ಪಿಸುತ್ತ ಆಭಾಸಮಾಡಿಡಬಹುದು. ಏನೇ ಆಗಲಿ, "ಅತಿ ಸರ್ವತ್ರ ವರ್ಜಯೇತ್" ಎಂಬ ನಿಯಮವನ್ನು ಇಲ್ಲಿಯೂ ಅನುಸರಿಸುವುದು ಉತ್ತಮವೆಂದು ನಮಗೆ ತೋರುತ್ತದೆ.

ಈ ಭಾಷೆಯನ್ನು ನೋಡಿದಾಗ, 'ಹುಳು'ವನ್ನು 'ಹುಳ'ವೆಂದು ಬರೆದರೆ ಸಾಕು ರಣಹದ್ದಿನಂತೆ ಮೇಲೆ ಎರಗುವ ಶಬ್ದಶಾಸ್ತ್ರಾಭಿಮಾನಿಗಳು ಎಷ್ಟು ದೊಡ್ಡ ಅಸಾಧುರೂಪ ರಾಶಿಯನ್ನು ಮಾಡಿ ಮುಂದಿಡುವರೋ ಅಥವಾ ಒಟ್ಟಿಗೆ ಗ್ರಂಥಕ್ಕೆಲ್ಲಾ ಒಂದು ದೊಡ್ಡ ಬರೆ ಎಳೆದು ಬಿಡುವರೋ ನೋಡಬೇಕು! ಜೀವಂತವಾದ ಭಾಷೆಯಲ್ಲಿ ಜನರು ವ್ಯವಹರಿಸುತ್ತಿರುವ ಶಬ್ದರೂಪಗಳು ತಳತಳಿಸುವ ತಳಿರಂತೆ ಸಜೀವವಾಗಿ ಇರುವುವೆಂಬುದನ್ನೂ ಕೇವಲ ಪ್ರಾಚೀನ ವ್ಯಾಕರಣಸೂತ್ರನಿಷ್ಪನ್ನವಾದ ಶುದ್ಧ ಗ್ರಾಂಥಿಕರೂಪಗಳು ತರಗೆಲೆಗಳಂತೆ ಮೃತಪ್ರಾಯವಾಗಿ ಇರುವುವೆಂಬುದನ್ನೂ ಅವರು ಅರಿಯರು. ಇದಕ್ಕೆ ನಮ್ಮಲ್ಲಿ ವ್ಯಾಕರಣವನ್ನು ವ್ಯಾಸಂಗಮಾಡುವ ವಿಧಾನವು ಬಹಳ ಮಟ್ಟಿಗೆ ಉತ್ತರವಾದಿಯಾಗಿದೆ.

ಮ|| "ಗುಂಡೂ" ರಾಯರು "ಈ ಭೂಮಿಾಲಿ ಜೀವಿಸೋಕೆ ದೇವರಿಗೆ ಕೊಡೋ ಬಾಡಿಗೆ ಸುತ್ತುಮುತ್ತಲೂ ಇರೋ ಜನರಿಗೆ ಉಪಯೋಗವಾಗಿರೋದೇ" ಎಂದು ಹೇಳಿದ್ದಾರೆ. ಇದನ್ನು ನಾವೂ ಒಪ್ಪುತ್ತೇವೆ. ಅಷ್ಟೇಕೆ, ಎಲ್ಲಾ ಧರ್ಮಗಳ ಐಹಿಕೋದ್ದೇಶವೂ ಇದರಲ್ಲಿಯೇ ಪರಿಣಮಿಸುತ್ತದೆ. ಇದನ್ನು ಗ್ರಂಥಕೋಟಿಗಳಿಂದ ಹೇಳಿದರೂ ಒಂದೇ, ಶ್ಲೋಕಾರ್ಧದಲ್ಲಿ ಹೇಳಿದರೂ ಒಂದೇ. ಆದರೆ ಈ ಅಭಿಪ್ರಾಯವನ್ನು ಇಲ್ಲಿ ಹೇಳಿರುವ ಮತ್ತು ನಿದರ್ಶಿಸಿರುವ ಮಾರ್ಗವು ಬೇರೆ—ಪ್ರಭುಸಮ್ಮಿತಿಯಿಂದಲ್ಲ, ಸುಹೃತ್ಸಮ್ಮಿತಿಯಿಂದಲ್ಲ;—ಕಾಂತಾ ಸಮ್ಮಿತಿಯಿಂದ ಎಂದು ಬೇಕಾದರೆ ಹೇಳಬಹುದು; ಆದರೆ 'ವಿದೂಷಕ ಸಮ್ಮಿತಿ

ಯಿಂದ' ಎಂದು ಹೇಳಿದರೆ ಹೆಚ್ಚು ಸಂಗತವಾಗಿರುವಂತೆ ತೋರುತ್ತದೆ.

ಈ ವಿದೂಷಕ ಪದ್ಧತಿಯೂ ಗಮನವಿಡತಕ್ಕದ್ದಾಗಿದೆ. ಇದರಲ್ಲಿ ಬರತಕ್ಕ ಹಾಸ್ಯರಸವು ಕೆಲವುವೇಳೆ ಮುಳ್ಳುಚುಚ್ಚುವಂತೆ ಹೃದಯಕ್ಕೆ ಬಲಿದುಕೊಳ್ಳುತ್ತಲೂ ಮತ್ತೆ ಕೆಲವುವೇಳೆ ಹೊಟ್ಟೆ ಹುಣ್ಣಾಗುವಂತೆ ಕಿಬ್ಬರಿಗಳನ್ನು ಬಿರಿಸುತ್ತಲೂ ಇದ್ದರೂ, ಇದರಲ್ಲಿ ಗ್ರಾಮ್ಯತೆಯಿಲ್ಲ ಅಶ್ಲೀಲತೆಯಿಲ್ಲ ಕೃತಕತ್ವವಿಲ್ಲ; ಇಂಥ ಹಾಸ್ಯಪ್ಧತಿಯನ್ನು ನಾವು ಇಂಗ್ಲಿಷಿನವರಿಂದ ಕಲಿಯಬೇಕಾಗಿದೆ; ಅವರಲ್ಲಿ ನೈಸರ್ಗಿಕವಾದ ನಯವಾದ ಅಕೃತ್ರಿಮವಾದ ಹಾಸ್ಯವಿಲ್ಲದೆ ಮಾತನಾಡದವರೂ ಬರೆಯದವರೂ ಅಪರೂಪ; ಇಂಥ ಹಾಸ್ಯ ಕ್ರಮವನ್ನು "ಟೊಳ್ಳು ಗಟ್ಟಿ"ಯ ಕರ್ತರು ಚೆನ್ನಾಗಿ ಸ್ವಾಧೀನಮಾಡಿಕೊಂಡಿದ್ದಾರೆ. ಇವರು ಬಹು ಕಾಲ ಇಂಗ್ಲೆಂಡಿನಲ್ಲಿದ್ದು ಬಂದವರಾದರೂ, ಇಂಗ್ಲಿಷ್‌ನಲ್ಲಿ ಸುಶಿಕ್ಷಿತರಾದವರಾದರೂ ತಮಿಳನ್ನು ಆಡುವವರಾದರೂ ಇಷ್ಟು ಸ್ವರಸವಾದ ತಿಳಿಯಾದ ಮನೆಗನ್ನಡದಲ್ಲಿ ಗ್ರಂಥರಚನೆಮಾಡಿರುವುದು ಆಶ್ಚರ್ಯಾರ್ಹವಾಗಿದೆ.

ಈ ಅಂಶಗಳೆಲ್ಲವೂ ಉದಾಹರಣೆಯಿಂದಲೇ ಸ್ಪಷ್ಟವಾಗುವುದರಿಂದ ಈಗ್ರಂಥದ ಕೆಲವು ಭಾಗಗಳನ್ನು ಇಲ್ಲಿ ಎತ್ತಿ ಬರೆದಿರುವೆವು :—

(೧) ಈ ಕಾಲ್ದಲ್ಲಿ ಲೆಕ್ಚ್ರುಕೊಡ್ತೇನೆ ಅಂದ್ರೆಕೇಳೋಕೆ ಜನಗ್ಳು ಸಿಗೋದು....ದುರ್ಲಭ. ಜುಟ್ಟೆಡ್ದು ಯುಳ್ಕೊಂಡ್ಬಂದು ... ಕುರ್ಜೀಕ್ಕಟ್ಟೆ ....ಕೂಡ್ಸಿದ್ರೇನೆ........ಕೇಳೋಕ್ಸಿಗೋದು ನಾಲಕ್ಮಂದಿ....ಹಾಗೂನೂ ಪಹಿಲ್ವಾನ್ರು ಪಟಿಂಗರಿಗೆ....ಪೈಸಾಕೊಟ್ಟು....ಕೆಲ್ಸಾ ಜರಿಗಿಸ್ಕೊಳ್ಳೋಣಾಂತ ನೋಡ್ದೆ....ಆದೂನೂ ಸಾಧ್ಯವಾಗ್ಲಿಲ್ಲ. ಯಾಕೇಂತಂತೀಯೋ ....ವಿವರಿಸ್ತೇನೆ....ಲಾಲ್ಸು....ಸುಬ್ಬೂ........ಈಕಾಲ್ದಲ್ಲಿ ಸುಬ್ಬೂ........ ಸರ್ವ್ರೂವೇ....ಈ fashion........(ಫ್ಯಾಷನ್) ಅಂತಂತಾರಲ್ಲ, ಆ ಇಲಾಖೆಗೆ ಸೇರ್ಬಿಟ್ಟು ಈ crop (ಕ್ರಾಪ್)....ಅಂತಂತಾರಲ್ಲ ಅದ್ಮಾಡ್ಸಿಕೊಂಡ್ಬಿಟ್ಟಿದ್ದಾರೆ.........ಆದ್ರಿಂದ........ಹೀಗ್ಜುಟ್ಟೆಡ್ದು.....ಜನಗಳನ್ನ ಜಮಾಯ್ಸೋಕೂ ಆಗಲಿಲ್ಲ. ಮತ್ತಿನ್ನೊಂದು ಹಿಕ್ಮತ್ತು try (ಟ್ರೈ) ಮಾಡ್ದೆ....ಹಾಲ್ತಕೊಂಡೆ........ಬಾಡ್ಗೆ ಕೊಟ್ಟೆ....ದೀಪಗಳ್ನಂಟಿಸ್ದೆ....

ಕುರ್ಚಿಗಳ್ಮೇಲೆಲ್ಲಾ ಪುಟ್ಪುಟ್ಟ ದಿಂಬುಗಳ್ನ ಹಾಕ್ಸೆ....ಹಾಲ್ತಕೊಂಡೆ ... ಒಂದ್ಸಂಡೆ ಕಾಫಿಕಾಯ್ಸಿಟ್ಟು........ಥೊಡ್ಡೊಂದು ತಟ್ಟೇಲಿ....ಮಲ ಸೀಮೆ ಅಡಿಕೆ,........ಮೈಸೂರೆಲೆ,....ಚನ್ನಟ್ಟದ ಸುಣ್ಣ....ತಯಾರಾಗಿ ಟ್ಕೊಂಡೆ....ದಾನೀತುಂಬ ಪನ್ನೀರು....Otto Dilbahar (ಆಟೊ ದಿಲ್ಬಹಾರು) ತುಂಬ್ಕೊಂಡು....ಈ ಜನೋಪ್ಕಾರೀಗೇಟಿದೆಯಲ್ಲಾ ಇದ್ರ ಹೊರ್ಗೆ ನಿಂತ್ಕೊಂಡು........ಗೇಟ್ದಾಸಿ ಹೋಗೋರ್ಗೆಲ್ಲಾ....ಆ ಪನ್ನೀರು ಎರ್ಡುಚಿಮುಕು ಚಿಮುಕ್ಸಿ....ಎಲೆಅಡ್ಕೆ ಸುಣ್ಣ ಸವರಿಕೊಟ್ಟು........ ಕೈಮುಗ್ಕೊಂಡು.........ಕಣ್ಣೀರ್ಸುರುಸ್ತಾ.........ಅಪ್ಪಾ! ಒಂದ್ಲೆಕ್ಚರ್ರು ಕೊಡ್ತೇನು....ನಿಮ್ಗೇನೂ ತಪ್ಸಿ ಇಲ್ಲಾ....ಅರ್ಧ್ಗಂಟೇಮೇಲ್ಕಿಚೋರ್‌ಇ ದಿಲ್ಲ....ಕುರ್ಚಿಗಳ್ಗೆಲ್ಲಾ ದಿಂಬುಗ್ಳು ಹಾಕಿದೇನೂ....ಕಾಫೀ ತಯಾರಿದೆ ....ನಿಮ್ಮನೆಗಳೆಲ್ಲಾ ಎಷ್ಟುದ್ರವ್ರೋಕಾಣೆ........ಮೋಡಾ ಮುಚ್ಕೊಂಡು ಮಳೇ ಬರೋಹಾಗಿದೆ....ಹಾಲ್ಗೋರೋದಿಲ್ಲ....ದಯವಿಟ್ಟು ನನ್ಲೆಕ್ಚರ್ರು ಕಿವೀಲ್ಹಾಕ್ಕೊಂಡು, ನನ್ಜನ್ಮ ಸಾರ್ಥಕ ಮಾಡ್ರಪ್ಪಾ ಪುಣ್ಯಾತ್ಮರ್ರಾ! ಅಂತ ಕಾಲ್ಮೇಲ್ಬಿದ್ದು ಕೇಳ್ಕೊಂಡ್ರೂ ನೂವೆ,....ಆ ಪನ್ನೀರ್ನ ಚನ್ನಾಗಿ ಚಿಮುಕಿಸ್ಕೊಂಡು,....ಸುಬ್ಬಾ! ಆ ಯೆಲೆ ಅಡ್ಕೇನ ಚೆನ್ನಾಗಿ ಅಗ್ದು, ನನ್ಮುಖ್ದಮೇಲೆ ಉಗ್ದು, ಹೋಗೋ ಪಾಪಿಗ್ಳೇ ಹೊರ್ತು, ಈ ಲೆಕ್ಚರ್ರು ಮಾತು ಕಿವಿಗೆ ಹಾಕ್ಕೊಳ್ಳೋ ಕ್ರಿಮಿಗಳೇ ಇಲ್ಲಾ........ನಾನೇನ್ಮಾ ಡೋದು ಸುಬ್ಬಾ ?....

(೨) ಗ್ರಾಮೋಫೋನ್ಗೊತ್ತಿಲ್ವೇ ಸುಬ್ಬಾ?....ಹಯ್ಯೋ!....ಕರೀ ಮರ್ದಪೆಟ್ಗೆ....ಥೊಡ್ಡೊಂದ್ಗಡಿಯಾರ ತಕ್ಕೊಳ್ಳೋದು,....ಸಿಪ್ಸೆ ಸುಲ್ದಾಹಾ ಕೋದು,....ಘಡಿಯಾರ್ದ ಹೊಟ್ಟೇಲಿರೋದನ್ನೆಲ್ಲಾ........ಪೆಟ್ಗೇಲ್ತೂ ಡ್ಸೋದು,....ಮುಚ್ಚಿ........ಕಬ್ಬಿಣದ್ದು ಒಂದು ಚಕ್ರ ಸಿಕ್ಸೋದು........ ಮೇಲೊಂದು ಕರೀದೋಸೆ....Record (ರೆಕಾರ್ಡು), ಹೂಂ!.... ಹಾಸೋದು....ಸೂಜಿ ಚುಚ್ಚಿ....ಬೆಕೋಂತ ಬಾಯ್ಬಿಟ್ಕೊಂಡಿರೋ.... ಕೊಂಬೊಂದು........ತಗುಲ್ಸಿ ತಿರಿಗಿಸಿದ್ರೆ....ಸುಬ್ಬಾ! ಬೊಗುಳಿದ್ದೆಲ್ಲಾ ತಿರಿಗೀ ಬೊಗುಳತ್ತೆ!!........ತಪ್ಸೀರ್ಪೆಟ್ಗೆ ಗೊತ್ತಿಲ್ವೇ ಸುಬ್ಬಾ! Camera (ಕೆಮಿರಾ) ಅಂತ ಹೆಸ್ರು ಅದಕ್ಕೆ. ಅದೊಂದು ಜಂತು

ಸುಬ್ಬೂ! ಪ್ರಾಣಿ! ಪಂಚಪಾದ ಆದಕ್ಕೆ ...ಹಿಂದೆ ನಿಂತ್ಕೊಂಡು ಬುರ್ಕಿ ಹಾಕ್ಕೊಂಡು ಬೆದರಿಸ್ತಾನಲ್ಲಾ, ಅವನ್ವೆರ್ಡ್ತ್ರು ಕಾಲು.... ಪೆಟ್ಗೇದ್ಮೂರು ....ಐದು! ಏಕಾಕ್ಷಿ,.........ಕಣ್ಣೊಂದೇ........ಇದರೆದುರಿಗೆ ಜನಗಳು ನಿಂತ್ಕೊಂಡು....ಸ್ವರೂಪನಾಶ್ನ ಮಾಡ್ಕೊಳ್ಳೋದು!....

(೬) ಈಗಿನ್ಕಾಲ್ದಲ್ಲಿ ನಮ್ಮನೆಗ್ಳಲ್ಲಿ ಗಂಡ್ಮಗೂ ಹುಟ್ಟ್ಬಿತ್ಲೊ ನೂವೇ ಪಂಚಾಕ್ಷರೀ ಜಪ ಒಂದು ಪ್ರಾರಂಭಿಸಿಬಿಡ್ತೇವು....ಮುಂ....ದ ....ಕ್ಬ....ರ್ಬೇ......ಕು......ಮುಂದಕ್ಬರ್ಬೇಕೂ ಅಂತ........ಮುಂದಕ್ಬರ್ಬೇಕೂ ಅಂದ್ರೇನೋ ದೇವರ್ಗೇ ಬೆಳ್ಳಂಬೆಳಕು. ಆ ಮಗನ್ನೋಲ ವಯ ಸ್ಸಾಗೋವರಿಗೂನೂ ಈ ಜಪ್ದಲ್ಲಿ ಅದ್ದೀ ಅದ್ದೀ ನೆನಸಿ ಓದಿ ಪ್ಯಾಸ್ಮಾ ಡೋಕೆ ಸ್ಕೂಲಿಗೆ ಸಾಗಿಸಿಬಿಡ್ತೇವು.........ಸ್ಕೂಲ್ನಲ್ಲಿ........ನಮ್ಹುಡುಗರು ಓದೋದೇನು?....ಪ್ಯಾಸ್ಮಾಡೋದಂದ್ರೇನು?....ಇವುಗಳ್ನೆಲ್ಲಾ ತಪ್ಸೀ ಲಾಗಿ ವಿವರಿಸ್ತೇನು ಲಾಲಿಸ್ಬೇಕು........ಸ್ಕೂಲಿನಲ್ಲಿ ಮೇಸ್ಟ್ರುಗಳು— (ಆತ್ಮಗತಂ) ಸರ್ವಜ್ಞ್ನರು! ಲೇವಡೀಗೇ ಲಾಯುಕ್ಕು!—(ಪ್ರಕಾಶಂ) ಚೀನಾದೇಶದ ಚರಿತ್ರೆ! ಜಾರ್ಜಿಯಾದ ಜನಸಂಖ್ಯೆ! ಸೈಬೀರಿಯಾದ ಸಸ್ಯಾದಿಗಳು! ಅಬ್ಸೀನಿಯಾದ ಆಭರಣಗಳು!....ಇವೇ ಮುಂತಾದ, ನಮ್ಜನಗಳಿಗೆ ಖುದ್ದು ಉಪಯೋಗವಾಗುವ ವಿಷಯುಗಳ್ನ ವರ್ಷದ ಹನ್ನೆರಡ್ತಿಂಗಳಲ್ಲಿ ಹನ್ನೊಂದುತಿಂಗ್ಳು ಜಜ್ಜೀ, ಜಜ್ಜೀ, ತುರುಕಿ....ಈ ಅಮೋಘವಾದ ವಿಚಾರಗಳು ಮಕ್ಕಳ ಮನಸ್ಸಿಗೆ ನಾಟಿದೆಯೋ ಇಲ್ವೋ ಎಂಬ ಶಂಕೆಹುಟ್ಟಿ, ಅದು ಪರಿಹಾರ್ವಾಗೋದಕ್ಕೆ ಪರೀಕ್ಷೆ ಅಂತಿಡ್ತಾರೆ ಹನ್ನೆರಡ್ನೇತಿಂಗ್ಳಲ್ಲಿ!....ಡಿಸ್ಸೆಬ್ರುತಿಂಗ್ಳು....ಇಪ್ಪತ್ತಕ್ಕೊ ....ಇಪ್ಪತ್ತೊಂದಕ್ಕೊ ಬೀಳುತ್ತೆ ಪರೀಕ್ಷೆ!....ಪರೀಕ್ಷೆ ದಿನ ಮನೇಲಿ ಗಲಭೆಯೋ ಗಲಭೆ! ನೆರೆಹೊರೆಯೋರೆಲ್ಲಾ ಮನೇಲಿ ಉದ್ಯಾಪ್ನೆ ಅಂತ ತಿಳ್ಕೊಳ್ಳೋದು!....ಆವತ್ಪಾರಣೇಇರ್ಲಿ, ಇಲ್ದಿರಿಲಿ ...ಎಂಟೂವರೆಘಂಟೆ ಗಾಗ್ಲೇ ಊಟ....ಹುಡ್ಗನಿಗೆ!....ಪುಷ್ಕಳ್ವಾಗ್ತಿಂದ್ಬಿಟ್ಟು,....ನಮ್ಹುಡ್ಗ.... ದೇವರಿಗೆ ನಮಸ್ಕಾರ ಮಾಡ್ಬಿಟ್ಟು....ಅಮ್ಮನ ಬಾಯಿಂದ ಹರ್ಸಿಕೊಂಡು ....ಅಜ್ಜೀಕೈಯಿಂದ ಹಣೆಗೆ ವಿಭೂತಿ ಇಡ್ಸಿಕೊಂಡು, ಹೊರ್ಡ್ತಾನೆ ನೋಡಿ....ಹುಡ್ಗ....ದಿಗ್ವಿಜಯಕ್ಕೆ!........ಜೋಂತ್ಮಳೇ ಬೇರೆ!........

ನೆನ್ಕೊಂಡ್ಬಂದ್ನೇರ್ತಾನ್ಹಾಲ್ಗೆ....ಅಲ್ಲಿ ಅವನಿಗೆ ಸ್ವಾಗತ ಕೊಟ್ಟು,....ಖೈದಿಗಳಿಕ್ಕೊಡೋ ಹಾಗೆ ಒಂದ್ನಂಬರ್ಕೊಟ್ಟು....ಮೇಜಿನ್ಮುಂದೆ ಕೂಡಿಸಿ....ಅರ್ಕಂಚಟ್ಟು....ತಾಂಬಾಳ....ಇವುಗಳಿಗೆ ಬದಲಾಗಿ ಬರೀ ಕಾಗದಗ್ಳು ಮೇಜಿನ್ಮೇಲೆ ಹರಡಿಟ್ಟು,......ಪ್ರಶ್ನೆಕಾಗ್ದಾಂತ......ಕೊಡ್ತಾರಿವನ್ಕೈಲಿ! ....ಅದನ್ನ....ನಮ್ಹುಡ್ಗ—ಭಕ್ತ ಶಿರೋಮಣಿ!—ಎದ್ನಿಂತ್ಕೊಂಡು,....ಕಣ್ಗೊತ್ಕೊಂಡು,....ಶ್ರೀಮನ್ನಾರಾಯಣನ್ಮೇಲೆ ಭಾರಹಾಕ್ಬಿಟ್ಟು,........ಆ ಪೇನಾನ....ಆ ಮಸೀಲಿ ಅದ್ಕೊಂಡು ಆ ಪರೀಕ್ಷಕನ್ಕಣ್ಣಿಗ್ಕಾಣದ್ಹಾಗೆ....ಸೂಜೀಚುಚ್ಕೋಜಾಗ್ದಲ್ಲಿ ಶ್ರೀ ಅಂತ ಬರದ್ಬಿಟ್ಟು ಪ್ರಾರಂಭಿಸ್ತಾನ್ನೋಡಿ ಆ ಬರೀ ಕಾಗದಗಳ್ಮೇಲೆ....ವಾಂತಿಮಾಡೋದಕ್ಕೆ!....ಆ ಹಿಂದಿನ್ಹಂನೊಂದುತಿಂಗಳೂ....ಜಜ್ಜೀ ಜಜ್ಜೀ ಕುತ್ಗೇವರೆಗೂ ತುರಕ್ಕೊಂಡ ಸಮಾಚಾರಗಳ್ನೆಲ್ಲಾ.......ಆ ಮೂರು ಘಂಟೆಗಳೊಳಗೆ ಈ ಬರೀ ಕಾಗದಗಳ್ಮೇಲೆ ಬಕಬಕ ಬಕಾಂತ ಬಕಾಸುರನ್ಹಾಗ್ವಾಂತಿ ಮಾಡ್ಬಿಡ್ತಾನೆ! ಎಷ್ಟಕ್ಕೆಷ್ಟು ವಾಂತೀಮಾಡ್ತಾನೋ ಅಷ್ಟಕ್ಕಷ್ಟು ಗಟ್ಟಿಗಾಂತ್ಹೆಸ್ರು! ಇದೇ ಫಸ್ಟ್‌ಕ್ಲಾಸ್ ಅನ್ನೋದು!....ಈ ಬಕಾಸುರನ ಪ್ಯಾಸೊಂದ್ಸೇಳಿ ಮಾಡ್ಬಿಟ್ನೋ—ಇವನ್ತಲೇತಿರ್ಗಿ ಬ್ರಹ್ಮನಿಗಪ್ನಾನೇ ....ಸರಸ್ವತೀ ನನ್ಹೆಸೇಂತ ತಿಳ್ಕೊಂಡ್ಬಿಡ್ತಾನೆ! ಈ ತಲ್ತಿರುಗೋ ರೋಗ......ಈ ಪ್ಲೇಗ್......ಇನ್ಫ್ಲು ಯಂಜ(Influenza) ಅಂತಂತಾರಲ್ಲ ...ಹಾಗೆ ಅಂಟು ರೋಗ...ಇವನು ಮನೆಗ್ಬರುತ್ಲೂ ನೂವೆ ಇವರಪ್ಪನಿಗೂ ಅಮ್ಮನಿಗೂ ಅಂಟ್ಕೊಂಡು,...........ಅವರ ತಲೇನೂ ತಿರಿಗಿಸ್ಬಿಡುತ್ತೆ...... ಇವರನುಸರಿಸೋ ಇಂಗ್ಲೀಷು ವಿದ್ಯಾಭ್ಯಾಸಕ್ರಮಾ ಅಂಬೋ ಪಾತಾಳ ಗರಡೀಗೆ ಕೊಂಡಿಗ್ಳೇ ಇಲ್ಲ"

"ಟೊಳ್ಳುಗಟ್ಟಿ"ಯು ಅನೇಕ ವಿಧದಲ್ಲಿ ಹೊಸಬಗೆಯ ನಾಟಕವಾಗಿದೆ. ಆಧುನಿಕ ಕರ್ಣಾಟ ಸಾಹಿತ್ಯದಲ್ಲಿ ಇಂಥ ಕಾವ್ಯಗಳಿಗೆ ಯಾವ ಸ್ಥಾನವೂ ಎಷ್ಟು ಪ್ರಾಶಸ್ತ್ಯವೂ ಬರುವುವೆಂಬುದನ್ನು ಕಾಲಕ್ರಮದಲ್ಲಿ ತಿಳಿಯಬೇಕಾಗಿದೆ.

೧೪.

• • •

....ಮನುಷ್ಯನು ದೇವರ ಛಾಯೆಯೆಂದು ಕೆಲವರು ಹೇಳುತ್ತಾರೆ. ಆದ್ದರಿಂದಲೇ ಅವನೂ ದೇವರಂತೆ ಸ್ತೋತ್ರಪ್ರಿಯನಾಗಿರಬಹುದೆಂದು ತೋರುತ್ತದೆ. ತಮಗೆ ಸಂಬಂಧಪಟ್ಟ ಯಾವುದಾದರೂ ಒಂದು ವಿಚಾರದಲ್ಲಿ "ನಿಷ್ಪಕ್ಷಪಾತವಾದ" ಅಭಿಪ್ರಾಯವನ್ನು ಕೇಳುವಾಗಲೂ ಜನರು ಅಪೇಕ್ಷಿಸುವುದು, ಸಾಮಾನ್ಯವಾಗಿ, ಗುಣದೋಷ ವಿಮರ್ಶೆಯಲ್ಲ—ಕೇವಲ ಶ್ಲಾಘನೆ. ಆದ್ದರಿಂದಲೇ ಯಾವುದಾದರೊಂದು ಗ್ರಂಥದ ವಿಚಾರವಾಗಿ ಅಭಿಪ್ರಾಯವನ್ನು ಕೊಟ್ಟರೆ ಆ ಗ್ರಂಥದ ಕರ್ತೃಗಳಿಗೂ ಅವರ ಇಷ್ಟಮಿತ್ರರಿಗೂ ಅಸಮಾಧಾನವೂ ಕೋಪವೂ ಬರುವುವು. ತತ್ವಾನುಸಂಧಾನಕ್ಕೂ ಉತ್ತಮ ಸಾಹಿತ್ಯಾಭಿವೃದ್ಧಿಗೂ ಲಕ್ಷ್ಯಕೊಡದೆ ತಮ್ಮ ಕೀರ್ತಿ ಅಪಕೀರ್ತಿಗಳಮೇಲೆಯೇ ದೃಷ್ಟಿಯಿಡುವ ಗ್ರಂಥಕರ್ತರ ಅಥವಾ ಅವರ ವರ್ಗದವರ ಸಹವಾಸ ಬಿದ್ದರೆ ನಿಷ್ಪ್ರಯೋಜನವಾದ ಕಲಹದಲ್ಲಿ ಗಂಟಲು ಗಾರಾಗಿ ಉಭಯ ಪಕ್ಷದವರಿಗೂ ಮನಸ್ಸು ಕಲುಷಿತವಾಗುವುದು.....

ನಾಟಕವೂ–ಅದರ ಉದ್ದೇಶವು ಏನೇ ಆಗಿರಲಿ–ಒಂದು ವಿಧವಾದ ಕಾವ್ಯ; ಅಚ್ಚಾಗಿ ಪುಸ್ತಕರೂಪಕ್ಕೆ ಬರದಿದ್ದರೂ ಅದು ಕಾವ್ಯವೇ. ಗ್ರಂಥವೆಂಬುದು ಶಬ್ದರಾಶಿಯೇ ಹೊರತು ಕಾಗದದಮೇಲೆ ಬಿದ್ದ ಅಚ್ಚು ಮೊಳೆಗಳ ಗುರುತುಗಳಲ್ಲ; ಗ್ರಾಂಥಿಕಸ್ಥಿತಿಗೆ ಬರದೆ ಕೇವಲ ವ್ಯಾವಹಾರಿಕ ರೂಪದಲ್ಲಿಯೇ ಇರುವ ಭಾಷೆಯು ಭಾಷೆಯಲ್ಲವೇ? ಸಾಹಿತ್ಯದಲ್ಲಿಯೂ ಹಾಗೆಯೇ. ಆದ್ದರಿಂದ ಉತ್ತಮವಾದ ನಾಟಕವು ರಸವತ್ಕಾವ್ಯವೇ ಆಗುತ್ತದೆ. ಅದು ಬೇಡ ಬೇಡವೆಂದರೂ, ಎಂಥ ಅಪಾಯಗಳು ಒದಗಿದರೂ, "ಸಾಹಿತ್ಯ ಚರಿತ್ರೆಯ ಪುಟಗಳಲ್ಲಿ ಬಂಗಾರದಕ್ಷರಗಳಿಂದ ಬರೆಯಲ್ಪಟ್ಟು ಯುಗಾಂತರದವರೆಗೆ" ನಿಂತೇ ನಿಲ್ಲುತ್ತದೆ. ರಸವತ್ತಾಗಿ ಮಾತ್ರ ಇದ್ದರೆ ಅದು "ಟೊಳ್ಳುಗಟ್ಟಿ"ಯಾಗಲಿ "ಬಂಡವಾಳವಿಲ್ಲದ ಬಡಾಯಿ"ಯಾಗಲಿ ಆದರಲ್ಲಿ ಉತ್ತರ ರಾಮಚರಿತ್ರೆಗಿಂತ ಹೆಚ್ಚು ಆಸಕ್ತಿ ಆದರಗಳನ್ನು ತೋರಿಸಿ ಪಂಡಿತರೂ ಪಾಮರರೂ ಮನೆಯಲ್ಲಿ ಕುಳಿತು ಅದನ್ನು ಓದುತ್ತಾರೆ.

ವಿಮರ್ಶಕನಲ್ಲಿ ಇರಬೇಕಾದದ್ದು ರಸಿಕತೆ; ಆದರ ಬಲದಿಂದ

ಕಾವ್ಯದ ಗುಣಾವಗುಣಗಳನ್ನು ಗ್ರಹಿಸಿ ಅವುಗಳನ್ನು ವ್ಯಕ್ತಪಡಿಸುವು ದಕ್ಕೆ ಬೇಕಾದ ಶಕ್ತಿ: ಅಷ್ಟೇಹೊರತು ಅವನೂ ಕವಿಯಾಗಿ ನಾಟಕಗ ಳನ್ನು ಬರೆಯಬಲ್ಲವನಾಗಿರಬೇಕೆಂಬ ನಿಯಮವಾಗಲಿ ನಟನಾಗಿ ಅಭಿನಯ ವಿದ್ಯೆಯನ್ನು ಬಲ್ಲವನಾಗಿರಬೇಕೆಂಬ ನಿಯಮವಾಗಲಿ ಇರು ವುದಿಲ್ಲ. ಇದೊಂದು ವಿಧವಾದ ಕುತರ್ಕವು ಸಾಹಿತ್ಯಕ್ಷೇತ್ರದಲ್ಲಿ ಮಾತ್ರವೇ ಅಲ್ಲದೆ ಇತರ ಕಡೆಗಳಲ್ಲಿಯೂ ಕಂಡುಬರುತ್ತದೆ. ಅಡ್ಡ ಕಸಬಿನ ಸಂಗೀತಗಾರನು ಸ್ಪಷ್ಟವಾಗಿ ಅಪಸ್ವರವನ್ನು ಹೇಳುತ್ತಿದ್ದರೆ ಕಿವಿಯಿದ್ದವರು ಯಾರುಬೇಕಾದರೂ ಅದನ್ನು ಕಂಡುಹಿಡಿಯಬಹುದು. ಸಂಗೀತಜ್ಞಾನವಿಲ್ಲದ ಅಜ್ಜಮ್ಮಂದಿರೂ ಇಲ್ಲಿ "ಮೂಲೆ"ಯಾಯಿತೆನ್ನು ವರು. ಅದರಂತೆ ಒಬ್ಬ ಚಿತ್ರಗಾರನು ಮನುಷ್ಯನೊಬ್ಬನ ಚಿತ್ರವನ್ನು ಬರೆದು ಅದಕ್ಕೆ ಒಂದು ದಪ್ಪನಾದ ಮೂಗನ್ನಿಟ್ಟನೆಂದು ಭಾವಿಸೋಣ- ಎಳೆಯ ಮಕ್ಕಳೂ ಅದನ್ನು ನೋಡಿ "ಇದೇನು ಇಷ್ಟು ದಪ್ಪ ಇವನ ಮೂಗು!" ಎನ್ನುವುವು. ಇಂಥ ಸಂದರ್ಭಗಳಲ್ಲಿ "ತಮಗೆ ಇಷ್ಟರ ಮಟ್ಟಿಗೂ ಹಾಡುವುದಕ್ಕೆ ಬರುವುದಿಲ್ಲ, ಚಿತ್ರಿಸುವುದಕ್ಕೆ ಬರುವುದಿಲ್ಲ ಇವರಿಗೆಷ್ಟು ಹರಟೆ!"ಎನ್ನಬಹುದೇ? ಗಿಣಿಯು ಚೆನ್ನಾಗಿದೆ ಕಾಗೆಯು ಚೆನ್ನಾಗಿಲ್ಲ ಎಂದು ಹೇಳುವುದಕ್ಕೆ ಕಾಗೆಯನ್ನಾದರೂ ಸೃಷ್ಟಿಸಬಲ್ಲ ಯೋಗ್ಯತೆಯನ್ನು ಪಡೆದಿರಬೇಕೇ?

"ಫೋಟೋ"ವಿನಲ್ಲಿರುವಂತೆ ಟೊಳ್ಳುಗಟ್ಟಿಯಲ್ಲಿಯೂ ಜೀವನ ಚಿತ್ರವು ಪೂರ್ತಿಯಾಗಿ ನೈಸರ್ಗಿಕವಾಗಿದೆ ಎಂಬ ಗ್ರಂಥಕರ್ತರ ಆಶಯ ವನ್ನು ನೋಡಿ "ಎಲ್ಲರೂ ಪುಟ್ಟುಗಳಂತಾಗುತ್ತಾರೆಯೇ?" ಇಲ್ಲದಿದ್ದರೆ ಇದರಲ್ಲಿ ನೈಸರ್ಗಿಕತೆಯು ಸ್ವಲ್ಪ ಕಡಿಮೆಯಾಗಿಲ್ಲವೇ? ಎಂದು ಕೇಳಿ ದೆವು. ನಮ್ಮಲ್ಲಿ ಪುಟ್ಟುಗಳು ಇಲ್ಲವೆಂದಲ್ಲ; ಈಗಿನ ವಿದ್ಯಾಭ್ಯಾಸದಿಂದ ಎಲ್ಲರೂ ಹಾಗಾಗುತ್ತಾರೆಯೇ ಎಂಬುದು ವಿಚಾರ; ಒಂದೇ ವಿದ್ಯಾಭ್ಯಾಸ ವನ್ನು ಪಡೆದ "ಸ್ಥಳೀಯ" ತರುಣರು ಪುಟ್ಟುಗಳಂತಾಗಿ "ಇತರ ಭಾಗದ ಕನ್ನಡ ತರುಣರು" ಮಾಧುಗಳಂತಾಗಿದ್ದರೆ, ಇದಕ್ಕೆ ಬರಿಯ ಆಧುನಿಕ ವಿದ್ಯಾಭ್ಯಾಸಕ್ರಮವೇ ಅಲ್ಲದೆ ಬೇರೆ ಕಾರಣಗಳಿರಬೇಕಲ್ಲವೇ? ಅಲ್ಲದೆ, ಈ ವಿದ್ಯಾಭ್ಯಾಸಕ್ರಮದಲ್ಲಿ ದೋಷಗಳು ಏನೇ ಇರಲಿ, ನಾವು ಮುಚ್ಚಿದ್ದ ಕಣ್ಣುಗಳನ್ನು ತೆರೆದಿರುವುದು ಇದರಿಂದಲೇ ಅಲ್ಲವೇ?

ಆದರ್ಶತ್ವ ಮತ್ತು ನೈಸರ್ಗಿಕತೆಗಳ ವಿಚಾರವನ್ನು ನಾಲ್ಕು ಮಾತಿನಲ್ಲಿ ಹೇಳಿ ಮುಗಿಸುವುದು ಸಾಧ್ಯವಲ್ಲ. ಆದರೂ ಅವುಗಳಿಗೆ ಸಂಬಂಧಪಟ್ಟು ಇಲ್ಲಿಗೆ ಪ್ರಕೃತವಾದಷ್ಟನ್ನು ಮಾತ್ರ ಇಲ್ಲಿ ಸೂಚಿಸಬಹುದು. ಆದರ್ಶ ವಿಷಯವು ಬಂಗಾರದ ಹೂವಿನ ಹಾಗೆ; ನೈಸರ್ಗಿಕ ವಿಷಯವು ಬ್ರಹ್ಮಸೃಷ್ಟವಾಗಿ ಪ್ರಕೃತಿ ಜನ್ಯವಾದ ಹೂವಿನ ಹಾಗೆ. ಆದರೆ ಬ್ರಹ್ಮಸೃಷ್ಟವಾದ ಮಾತ್ರದಿಂದಲೇ ಎಲ್ಲಾ ಹೂವೂ ಸುಖದಾಯಕವಲ್ಲ. ಉದಾ—ತೆಂಗಿನ ಹೂವು; ಪಾಪಾಸುಗಳ್ಳಿಯ ಹೂವು ಇತ್ಯಾದಿ. ನಮಗೆ ಸುಖ ಬೇಕಾದರೆ ಈ ಪುಷ್ಪರಾಶಿಯಲ್ಲಿ ಮನೋಹರವಾದವುಗಳನ್ನು ಆರಿಸಿಕೊಳ್ಳಬೇಕು. ಹೀಗೆ ಆರಿಸಿಕೊಂಡ ಸಂಪಗೆ ಮಲ್ಲಿಗೆ ಯಂಥ ಹೂವುಗಳ ಸೌಂದರ್ಯವೂ ಸೌಕುಮಾರ್ಯವೂ ಸೌರಭ್ಯವೂ ನವರತ್ನಖಚಿತವಾದ ಪುಷ್ಪದಲ್ಲಿಯೂ ಬರಲಾರದು. ಆದ್ದರಿಂದ ನೈಸರ್ಗಿಕತೆಯೊಂದೇ ಕಾವ್ಯರಸ ನಿರ್ಣಾಯಕವಾಗುವುದೆಂದು ಹೇಳುವುದಕ್ಕಾಗುವುದಿಲ್ಲ.

"ಬೇರೆ ಬೇರೆ ನಟರ ವಾಚಕದ ಗಾಳಿ ತಗಲಿದ ಮೇಲೆ" "ಮುದ್ರಣದ ರೀತಿಯು" ನಾನಾ ರೂಪವಾಗಿ ಅನವಸ್ಥೆಗೇ ಇಟ್ಟುಕೊಳ್ಳಲಿ, ಅಥವಾ "ಒಂದು ಸ್ಥಾಯಿಗೆ" ಬರಲಿ, ಆ ಸ್ವಾಚ್ಛಂದ್ಯ ಸ್ಥಿತಿಯು ಇರಬಹುದೇ? "ಕನ್ನಡಕ್ಕೆ ಒಂದು ಕಟ್ಟು" ಬೇಡವೆ?—ಎಂಬುದು ಒಂದು ದೊಡ್ಡ ಪ್ರಶ್ನೆ. ಈ ವಿಷಯವನ್ನು ಯುಕ್ತಿಯುಕ್ತವಾಗಿ ವಿಚಾರ ಮಾಡಿರುವ ಮ॥ ಬಿ. ಎಂ. ಶ್ರೀಕಂಠಯ್ಯನವರ "ಕನ್ನಡಕ್ಕೆ ಒಂದು ಕಟ್ಟು" ಎಂಬ ಗ್ರಂಥವನ್ನು ಪಾಠಕರು ನೋಡಬೇಕೆಂದು ಅಪೇಕ್ಷಿಸುತ್ತೇವೆ.

ಆತ್ಮವಿಶ್ವಾಸವಿಲ್ಲದೆ ಯಾವ ಕೆಲಸವೂ ಸರಿಯಾಗಿ ನಡೆಯುವುದಿಲ್ಲ. ಉತ್ತಮವಿಮರ್ಶಕರು ಈ ಆತ್ಮವಿಶ್ವಾಸದಿಂದ ಹೇಳಿದ ಯಾವುದಾದರೂ ಒಂದು ಮಾತು ಅಸಮಂಜಸವೆಂದು ತಮಗೆ ನಿರ್ಧಾರವಾದರೆ ಆಗ ಅದನ್ನು ಒಪ್ಪಿಕೊಳ್ಳುವರು. ಇದು ಅವರಲ್ಲಿ ಗುಣವೇ ಹೊರತು ಅವಗುಣವಲ್ಲ; ಇದರಿಂದ ಭಾಷಾಗತಿಗೆ ಸಹಾಯವೇ ಹೊರತು ಕುಂದಲ್ಲ.

ಮ|| ಕೈಲಾಸಂ ಅವರು ಮಾತನಾಡುವುದು ಬಹು ಅಸ್ಪಷ್ಟವೆಂದೂ ಜಾಗ್ರತೆ ಎಂದೂ ಆದ್ದರಿಂದ ಅವರ ಮಾತು ಅರ್ಥವಾಗುವುದಿಲ್ಲವೆಂದೂ ಹೇಳಿದ್ದೆವಷ್ಟೆ. "ಜಾಗ್ರತೆಯೆಂದರೆ ಪದಗಳ ಅರ್ಥವಾಗದಷ್ಟು ಜಾಗ್ರತೆಯಲ್ಲ; ಕಿವಿಗೆ ಕೇಳದಷ್ಟು ಜಾಗ್ರತೆಯಲ್ಲ; ಅವನ ಹಾಸ್ಯದ ಹುರುಳು ತಿರುಳು ಹೊಳೆಯದಷ್ಟು ಜಾಗ್ರತೆ" "ಇದು ಬಡ ಮಿದುಳಿನ ದೋಷವನ್ನೇ ಸಾರುತ್ತಿದೆ." ಎಂದು "ಟೊಳ್ಳುಗಟ್ಟಿಯ ಗುಟ್ಟನ್ನರಿತವರು" ಹೇಳುತ್ತಾರೆ. ಆದರೆ ಶಬ್ದಕ್ಕೆ ಅರ್ಥವಾಗಬೇಕಾದರೆ ಅದು ಮೊದಲು ಸ್ಪಷ್ಟವಾಗಿ ಕೇಳಬೇಕೆಂಬುದನ್ನು ಅವರು ಮರೆತಿರುವಂತೆ ತೋರುತ್ತಿದೆ. ವರದಾಚಾರ್ಯರ ಹಾಡು ಸ್ಪಷ್ಟವಾಗಬೇಕಾಗಿಲ್ಲ; ಜನರು ಅದನ್ನು ಕೇಳುವುದು ಆ ಹಾಡಿನ ಅರ್ಥವನ್ನು ತಿಳಿದುಕೊಳ್ಳುವುದಕ್ಕಲ್ಲ; ಅದರ ಸಂಗೀತ ಸುಖವನ್ನು ಅನುಭವಿಸುವುದಕ್ಕೆ. ವರದಾಚಾರ್ಯರ ಪ್ರಶಂಸೆಯು ಇಲ್ಲಿ ಅಪ್ರಕೃತವಾದದ್ದು; ಆದರೂ ನಮ್ಮ ಅನುಭವದಲ್ಲಿ ಇವರಷ್ಟು ಸ್ಪಷ್ಟವಾಗಿ ಹಾಡುವ ನಟರು ಅಪರೂಪವೆಂದು ಸೂಚಿಸುತ್ತೇವೆ.

ಕೈಲಾಸಂ ಅವರ ಗ್ರಂಥವನ್ನು ವಿಮರ್ಶಿಸುವುದಕ್ಕೆ ಬದಲು ಕೈಲಾಸಂ ಅವರ ಮಾತಿನ ವೈಲಕ್ಷಣ್ಯವನ್ನು ಎತ್ತಿಯಾಡಿರುವುದು ತಪ್ಪೆಂದು ಅನೇಕರ ಆಕ್ಷೇಪಣೆ. ಇದು ತಪ್ಪಲ್ಲದಿದ್ದರೆ ಅಪ್ರಕೃತವಾದರೂ ಆಗಬಹುದೆಂದೇ ಆ ಆಕ್ಷೇಪಣೆಗೆ ಪೂರ್ವಭಾವಿಯಾಗಿ ಸೂಕ್ಷ್ಮವಾದ ಸಮಾಧಾನವನ್ನು ಹೇಳಿರುವೆವು. ಅದನ್ನು ಇಲ್ಲಿ ಸ್ವಲ್ಪ ವಿಸ್ತಾರಪಡಿಸಬೇಕೆಂದು ತೋರುತ್ತದೆ. ನಮಗೆ ಕೈಲಾಸಂ ಅವರ ಅಭಿನಯ ಕೌಶಲ್ಯ ಸಾಮರ್ಥ್ಯಗಳಲ್ಲಿ ಬಹಳ ಗೌರವವಿದೆ. ಅವರ ನಾಟಕಗಳಲ್ಲಿ ಮುಖ್ಯ ಪಾತ್ರಗಳನ್ನು ಅವರು ಅಭಿನಯಿಸುವಷ್ಟು ಚೆನ್ನಾಗಿ ಮತ್ತಾರೂ ಅಭಿನಯಿಸಲಾರರು. ಇಂಥ ನಟ ಶ್ರೇಷ್ಠರಾದವರು ಸ್ವಭಾವಸಿದ್ಧವಾದ ಗುಣದಿಂದಲೋ, "ಜನರ ಮನಸ್ಸನ್ನೊಲಿಸಿಕೊಳ್ಳುವುದಕ್ಕೆ" ಕೈಕೊಂಡ "ಸಾಧನೆ" ಎಂಬ ಭಾವದಿಂದಲೋ, ಕೆಲವು ವೈಲಕ್ಷಣ್ಯಗಳನ್ನು ತೋರಿಸಿದರೆ ಅವುಗಳಿಂದ ಎರಡು ವಿಧವಾದ ನಷ್ಟ; ಮೊದಲನೆಯದು ತಾತ್ಕಾಲಿಕವಾಗಿ ನಾಟಕದ ಪ್ರಸಿದ್ಧಿಯೂ ಉಪಯೋಗವೂ ಪೂರ್ಣ

ವಾಗಿ ಬರುವುದಕ್ಕೆ ಅಡಚಣೆಯಾಗುವುದು. ಎರಡನೆಯದು, ಇವರನ್ನು ಅನುಕರಣ ಮಾಡುವ ನಟರು ಅವರ ವೈಲಕ್ಷಣ್ಯವನ್ನೂ ವಿಕಾರವಾಗುವಂತೆ ಅನುಕರಣ ಮಾಡುತ್ತಾರೆ; ಇದು ಇತರ ಅನೇಕ ಕಡೆಗಳಲ್ಲಿ ಎಲ್ಲರಿಗೂ ಅನುಭವಕ್ಕೆ ಬಂದ ಪ್ರಸಿದ್ಧವಾದ ವಿಷಯ.

ಈಗಿನ ಕಾಲಪರಿಸ್ಥಿತಿಯಿಂದಲೇ ಈ ವಿಧವಾದ ವಿದ್ಯಾಭ್ಯಾಸದ ಬರಡುತನವು ಗೊತ್ತಾಗುತ್ತಿರುವುದರಿಂದ ಇಂಥ ನಾಟಕಗಳು ಅನಾವಶ್ಯಕವೆಂದು ನಾನು ಅಭಿಪ್ರಾಯಪಟ್ಟಿರುವಂತೆ "ಕಿಟ್ಟು" ಗಳು ಹೇಳುತ್ತಾರೆ. ನನ್ನ ಅಭಿಪ್ರಾಯವು ಇದಲ್ಲ. ಟೊಳ್ಳುಗಟ್ಟಿಯಲ್ಲಿ ಪ್ರತಿಪಾದಿತವಾಗಿರುವ ತತ್ವಕ್ಕೆ ಪ್ರಕೃತ ಸ್ಥಿತಿಯು ಸ್ಪಷ್ಟವಾದ ನಿದರ್ಶನವಾಗಿದೆಯೆಂಬುದೇ ನನ್ನ ಭಾವ.

"ಟೊಳ್ಳುಗಟ್ಟಿ"ಯು ಆಧುನಿಕ ಕರ್ಣಾಟಕ ಸಾಹಿತ್ಯದಲ್ಲಿ ಸಕಲ ರೀತಿಯಲ್ಲಿಯೂ ನೂತನವಾಗಿದೆ. ಇದನ್ನು ಓದುವುದಕ್ಕೆಂದು ಕೈಯಲ್ಲಿ ತೆಗೆದುಕೊಂಡರೆ ನಾನಾ ವಿಧವಾದ ಸಾಹಿತ್ಯ ತತ್ವಗಳು ವಿಚಾರಕ್ಕೆ ಬರುತ್ತವೆ. ಇವುಗಳಿಗೆ ಕೊಡುವ ಗಮನವೂ ಇವುಗಳ ಮೇಲೆ ವೆಚ್ಚಮಾಡುವ ಬುದ್ಧಿಶಕ್ತಿಯೂ ಸಾಹಿತ್ಯದಲ್ಲಿ ಆಸಕ್ತಿ ಇರುವವರಿಗೆ ಫಲದಾಯಕಗಳಾಗುವುದರಲ್ಲಿ ಸಂದೇಹವಿಲ್ಲ.

೧೬.

* * *

....ಎರಡನೆಯ ಉಪನ್ಯಾಸವು ಮ|| ಟಿ. ಪಿ. ಕೈಲಾಸಂ ಅವರದು; ಅದು "ಉಪನ್ಯಾಸವಲ್ಲ", "ಸಂಭಾಷಣ": "ಸಂಭಾಷಣ" ವೆಂದು ಕರೆಯಬೇಕೆಂಬುದು ಅವರ ಇಷ್ಟ; ಫಲವೇನೋ ಒಂದೇಯೆ—ಇನ್ನೂ ಹೆಚ್ಚೆಂದೇ ಹೇಳಬಹುದು; ಏಕೆಂದರೆ ಅದರಲ್ಲಿ ಹೇಳುವವರಿಗೆ ಕೇಳುವವರಿಗೆ ಇಬ್ಬರಿಗೂ ಸ್ವಾತಂತ್ರ್ಯವುಂಟು, ನಿರ್ಬಂಧವಿಲ್ಲ; ಆದರೆ ನೀವು ಬೇಕಾದ್ದನ್ನು ಕೇಳಿ, ನಾನು ಉತ್ತರ ಕೊಡುತ್ತೇನೆ, ಎಂಬ ಧೀರನಾಗಬೇಕು, ಅಷ್ಟೇ! ಮ|| ಕೈಲಾಸಂ ಅಂಥವರು ಎಂಬುದರಲ್ಲಿ ಅನುಮಾನವಿಲ್ಲ; ಅದರಲ್ಲಿಯೂ ಹಿಂದಿನ ಮತ್ತು ಈಗಿನ ರಂಗಭೂಮಿ ಮತ್ತು ರೂಪಕಗಳ ವಿಚಾರವಾಗಿ ಅವರಷ್ಟು ನೋಡಿ ನಟಿಸಿ, ಓದಿ ಬರೆದು,

ಯೋಚಿಸಿ ಅನುಭವಿಸಿ ಇರುವವರು ಕನ್ನಡ ದೇಶದಲ್ಲಿ ಪ್ರಾಯಶಃ ಮತ್ತಾರೂ ಇರಲಾರರು; ಅವರ ನಾಟಕಗಳಲ್ಲಿರುವ ಜೀವ, ಕವಿತೆ, ಉಜ್ವಲತೆ, ವ್ಯಕ್ತಿತ್ವ, ಉಪಜ್ಞತೆಗಳು ಮತ್ತಾವ ಆಧುನಿಕ ನಾಟಕ ಗಳಲ್ಲಿಯೂ ಇರುವುದಿಲ್ಲ. ಅವರ ನಾಟಕಗಳಲ್ಲಿರುವ ಈ ಗುಣಗಳೇ ಅಂದಿನ ಅವರ ಸಂಭಾಷಣ-ಉಪನ್ಯಾಸದಲ್ಲಿಯೂ ಕಂಗೊಳಿಸುತ್ತಿದ್ದವು. ಸಭಾಭವನವು ಜನಗಳಿಂದ ತುಂಬಿ ಹಿಗ್ಗುತ್ತಿತ್ತು. ರಂಗಭೂಮಿಯ ವಿಚಾರವನ್ನು ತೆಗೆದುಕೊಂಡು (೧) ನಮ್ಮ ನಾಟಕಗಳಿಗೂ ಪಾಶ್ಚಾತ್ಯರ ನಾಟಕಗಳಿಗೂ ಇರುವ ವ್ಯತ್ಯಾಸಗಳೇನು ? (೨) ಕನ್ನಡ ನಾಟಕ ಗಳು ಮುಂದೆ ಯಾವ ಸ್ವರೂಪವನ್ನು ತಾಳಬಹುದು ? (೩) ಸಂಗೀತ ವನ್ನು ನಾಟಕದಿಂದ ಕಿತ್ತುಹಾಕಬೇಕೇ ? (೪) ಮಾತನಾಡುವ ಸಿನಿಮ ಗಳಿಂದ ನಾಟಕಕ್ಕೆ ಹಾನಿಯಾದೀತೇ ? (೫) ನಾಟಕದಲ್ಲಿ ಸರಳಪದ್ಯ (Blank verse) ವನ್ನು ಉಪಯೋಗಿಸುವುದರ ಗುಣಾವಗುಣ ಗಳೇನು ? (೬) " ಜನಾಂತಿಕ " ಗಳೂ " ಸ್ವಗತ " ಗಳೂ ಅಸ್ವಾಭಾವಿಕ ವಲ್ಲವೇ ? (೭) ನಾಟಕದಿಂದ ಸಮಾಜವು ಹೇಗೆ ಉನ್ನತಿಯನ್ನು ಪಡೆಯಬಹುದು ? (೮) " ಭಾಷಾ ಶುದ್ಧಿ " ಯು ನಾಟಕಕ್ಕೆ ಆವಶ್ಯಕ ವಲ್ಲವೇ ? (೯) ಕಲೆಗೂ ವಿಜ್ಞಾನಶಾಸ್ತ್ರಕ್ಕೂ ವಿರೋಧವೇ ? (೧೦) ಪರದೆಗಳೂ ರಂಗರಚನೆಯೂ ಹೇಗಿರಬೇಕು ?-ಎಂದು ಮುಂತಾದ ಎಷ್ಟೋ ಪ್ರಶ್ನೆಗಳು ಬಂದುವು. ಅವೆಲ್ಲಕ್ಕೂ ಉಪನ್ಯಾಸಕರು ಸುರಸ ವಾದ ಅನುಭವಸಿದ್ಧವಾದ ಉತ್ತರಗಳನ್ನು ತಟತಟನೆ ಹೇಳುತ್ತಿದ್ದರು. ಆವೊತ್ತು ಸುಮಾರು ಒಂದು ಗಂಟೆಯ ಸಮಯದಲ್ಲಿ ನಡೆದದ್ದು, ಒಂದು ಉಪನ್ಯಾಸವಲ್ಲ, ಹತ್ತು ಉಪನ್ಯಾಸಗಳ ಸಂಗ್ರಹ. ಆಗ ಉಕ್ತವಾದ ವಿಚಾರಗಳನ್ನೆಲ್ಲಾ ಬಂದ ಬಂದ ಹಾಗೆ ಹಿಡಿದು ತುಂಬಿಟ್ಟು ಕೊಂಡು, ನಿದಾನವಾಗಿ ಮೆಲುಕುಮಾಡುವುದಾದರೆ, ಹಲವು ದಿನಗಳ ತಿಂಡಿಯಾದೀತು ! ಆದರೆ ಅದು ಯಾರಿಂದ ಸಾಧ್ಯ ?

೪೦.

---

# ಪ್ರಣಯಾವರ್ತ ಅಥವಾ ಚಂಚಲಕುಮಾರಿ

ಸಾಧುಸಿಂಹನೆಂಬೊಬ್ಬನು ಬಹುಕಾಲ ಸೈನ್ಯದಲ್ಲಿ ಕೆಲಸಮಾಡಿ ಬೇಸರ ಹುಟ್ಟಿ ತನ್ನ ನಲವತ್ತಾರನೆಯ ವಯಸ್ಸಿನಲ್ಲಿ ಹದಿನೆಂಟು ವರ್ಷದ ಚಂಚಲೆಯೆಂಬ ಹುಡುಗಿಯೊಬ್ಬಳನ್ನು ಮದುವೆಯಾಗಿ ಆಗ್ರಾ ಪಟ್ಟಣದಲ್ಲಿ ನೆಲಸಿ ಸಂಸಾರ ಮಾಡುತ್ತಿದ್ದನು. ಆದರೆ "ಒಬ್ಬರಿಗೊಬ್ಬರಿಗೆ ಹೊಂದಿಕೆಯಾಗಲಿಲ್ಲ." ಒಂದು ದಿನ ಚಂಚಲೆಯು ನಿರಂಜನನೆಂಬೊಬ್ಬ ಸುಂದರನಾದ ಯುವಕನನ್ನು ಕಂಡು, ಇಬ್ಬರ ಮನಸ್ಸೂ ಕಲಕಿ ಹೋಯಿತು; ಈ ಚಾಂಚಲ್ಯವು ಹೆಚ್ಚಿ ಕೊನೆಗೆ ಒಂದು ದಿನ ನಿರಂಜನನು ಧೈರ್ಯಮಾಡಿ ಚಂಚಲೆಯ ಮನೆಯ ಗೋಡೆಯನ್ನು ಹತ್ತಿ ಅವಳ ಕೊಠಡಿಯನ್ನು ಸೇರಿದನು. ಅವರು ಅನುರಾಗ ಪೂರ್ಣವಾದ ಮಾತುಗಳನ್ನಾಡುತ್ತಿರುವಾಗ ಸಂಶಯಗ್ರಸ್ತನಾದ ಸಾಧುಸಿಂಹನು ಆ ಕೊಠಡಿಗೆ ಬರಲು ನಿರಂಜನನು ಅವಿತುಕೊಂಡನು. ಆ ಮೇಲೆ ಗಂಡಹೆಂಡರಿಗೆ ನಡೆದ ಮಾತಿನಲ್ಲಿ ಚಂಚಲೆಯು ತನ್ನನ್ನು ನಿಂದಿಸಿಕೊಂಡು ಅಲ್ಲಿಂದ ಮುಂದೆ ಸನ್ಮಾರ್ಗವನ್ನು ಹಿಡಿಯಬೇಕೆಂದು ನಿಶ್ಚಯಿಸಿದಳು. ಸಾಧುಸಿಂಹನು ದೆಹಲಿಗೆ ಹೊರಟುಹೋಗುವುದಾಗಿ ಹೇಳಿ ಹೊರಟುಹೋಗಲು ನಿರಂಜನನು ಹೊರಕ್ಕೆ ಬಂದು ಚಂಚಲೆಯ ನಡತೆಯು ಪೂರ್ತಿಯಾಗಿ ಬದಲಾಗಿ ಹೋದದ್ದನ್ನು ನೋಡಿ ಕೊರಗುತ್ತಿದ್ದನು. ಅಷ್ಟು ಹೊತ್ತಿಗೆ ಬಾಗಿಲಲ್ಲಿ ಪುನಃ ಸದ್ದಾಗಲು ಗಂಡನು ಬಂದನೆಂದು ಹೆದರಿ ಚಂಚಲೆಯು ಬೇರೆದಾರಿ ತೋರದೆ ನಿರಂಜನನು ತನ್ನ ಸಖಿಯೆಂದು ಕಾಣುವ ಹಾಗೆ ಅವನಿಗೆ ಹೆಣ್ಣುವೇಷವನ್ನು ಹಾಕಿ ನಿಲ್ಲಿಸಿದಳು. ಬಾಗಿಲನ್ನು ಸದ್ದುಮಾಡಿಕೊಂಡು ಬಂದವನು ಸಾಧುಸಿಂಹನಲ್ಲ, ಆಗ್ರಾದ ನಿರಂಕುಶ ಪ್ರವರ್ತನೆಯ ಷಹಜಾದ; ಅವನು ಅತ್ಯಾಚಾರಕ್ಕೆ ಮನಸ್ಸುಮಾಡಿ ಸುಂದರಿಯಂತೆ ಕಾಣುತ್ತಿದ್ದ ಹೆಣ್ಣುವೇಷದ ನಿರಂಜನನನ್ನು ಮೋಹಿಸಲು, ನಿರಂಜನನು ಸಮಯ ನೋಡಿಕೊಂಡಿದ್ದು ಪಾನಮತ್ತನಾದ ಷಹಜಾದನನ್ನು ಕಠಾರಿಯಿಂದ ತಿವಿದು ಕೊಂದನು.

ಸಾಧುಸಿಂಹನು ದೆಹಲಿಗೆ ಹೋಗುತ್ತೇನೆಂದು ಹೇಳಿದ್ದು ಸುಳ್ಳು. ಅದು ಹೆಂಡತಿಯನ್ನು ಪರೀಕ್ಷಿಸುವುದಕ್ಕೆ ಮಾಡಿದ ಸಂಚು; ಆದ್ದರಿಂದ ಈಗ ಅವನು ಹಿಂತಿರುಗಿ ಬರಲು ಇದರ ಸುಳಿವನ್ನು ತಿಳಿದ ನಿರಂಜನನು ಗಂಡಸಿನ ಉಡುಪನ್ನು ಹಾಕಿಕೊಂಡು ಚಂಚಲೆಯನ್ನು ಶತ್ರುಗಳಿಂದ ರಕ್ಷಿಸುತ್ತಿರುವಂತೆ ಷಹಜಾದನ ಹೆಣದ ಹತ್ತಿರ ನಿಂತಿದ್ದನು. ಸಾಧುಸಿಂಹನಿಗೆ ಹೆಂಡತಿಯಲ್ಲಿ ಸಂಶಯಕ್ಕೆ ಬದಲಾಗಿ ಅನುರಾಗವೇ ಸ್ಥಿರವಾಯಿತು. ಚಂಚಲೆಯೂ ತನ್ನ ಚಾಂಚಲ್ಯವನ್ನು ಬಿಟ್ಟಳು. ನಿರಂಜನನೂ ತಾನು ಪುನಃ ಅಲ್ಲಿಗೆ ಬರುವುದಿಲ್ಲವೆಂದು ಮಾತು ಕೊಟ್ಟು ಹೊರಟುಹೋದನು. ಇದೇ ಈ ಪುಸ್ತಕದಲ್ಲಿರುವ ಕಥೆಯ ಸಾರಾಂಶ.

ನಮಗಿಂತ ಮೇಲಿನವರನ್ನು ಮೆಚ್ಚಿ ಬುದ್ಧಿಪೂರ್ವಕವಾಗಿಯಾಗಲಿ, ಅಲ್ಲದೆಯಾಗಲಿ, ಅವರನ್ನು ಅನುಕರಣ ಮಾಡುವುದಕ್ಕೆ ಹೊರಟಾಗ ಅವರ ಗುಣಗಳ ಜೊತೆಗೆ ದೋಷಗಳನ್ನೂ ಅನುಕರಿಸುವುದು ಸ್ವಭಾವ. ನಮ್ಮಲ್ಲಿ ವೆಂಕಟಾಚಾರ್ಯರು ಭಾಷಾಂತರ ಮಾಡಿದ ಬಂಕಿಂಚಂದ್ರರ ಗ್ರಂಥಗಳ ಓದು ಇದಕ್ಕೆ ಒಂದು ಉದಾಹರಣೆ; ಕಥೆ ಬರೆಯುವುದಕ್ಕೆಂದು ಹೊರಟವರಲ್ಲಿ ಅವರ ಶೈಲಿಯನ್ನು ಅನುಕರಣ ಮಾಡದವರಿಲ್ಲ; ಅವರಂತೆ ಕಥಾಪ್ರದೇಶವನ್ನು ಉತ್ತರ ಹಿಂದೂಸ್ಥಾನದಲ್ಲಿ ತಂದು ಹಾಕದವರಿಲ್ಲ. ಬಂಕಿಂಚಂದ್ರರ ಗ್ರಂಥಗಳಲ್ಲಿ ಬರುವ ಪಾತ್ರಗಳು—ಕೊನೆಗೆ ಹುಲಿ ಕರಡಿಗಳು—ಬಂಗಾಳಿಗಳಾದರೆ, ಅವರ ಕಥೆಗಳು ಬಂಗಾಳದಲ್ಲಿ ನಡೆದರೆ ಅದು ಅವರಿಗೆ ಭೂಷಣ, ಅವರ ದೇಶವಾತ್ಸಲ್ಯ ಸೂಚಕ. ಆದರೆ ಕನ್ನಡಿಗರಾದ ನಾವೂ ನಿತ್ಯಗಟ್ಟಲೆಯ ಸಾಮಾನ್ಯ ವಸ್ತುಗಳಿಗೆ ಉತ್ತರ ದೇಶಕ್ಕೇಕೆ ಹೋಗಬೇಕು ?

ಇದು, "ಪ್ರಣಯಾವರ್ತವು" ಆಗ್ರಾ ಪಟ್ಟಣದಲ್ಲಿ ನಡೆಯಿತೆಂಬ ಆಗ್ರಹದಿಂದ ಹೇಳಿದ ಮಾತಲ್ಲ; "ಪ್ರಣಯಾವರ್ತ"ವು ಈ ಅಭಿಪ್ರಾಯದ ಅಭಿವ್ಯಕ್ತಿಗೆ ನಿಮಿತ್ತಮಾತ್ರ. ಪ್ರಣಯಾವರ್ತಗಳು ಮೈಸೂರು ದೇಶದಲ್ಲಿ ನಡೆಯಬೇಕೆಂದು ಯಾರೂ ಅಪೇಕ್ಷಿಸುವುದಿಲ್ಲ; ಇಂಥ ಘಟನೆಗಳು ನಮ್ಮ ದೇಶಕ್ಕೆ ಕೀರ್ತಿಗೌರವಗಳನ್ನೇನೂ ತರುವುದಿಲ್ಲ. ಗ್ರಂಥಕರ್ತರು ಪ್ರಾಯಶಃ ಇದನ್ನು ತಿಳಿದುಕೊಂಡೇ ವಿಷವೃಕ್ಷ

ವನ್ನು ಪರದೇಶದಲ್ಲಿ ನೆಟ್ಟು ಬೆಳೆಸಿ ಅದರ ದರ್ಶನ ಮಾಡಿಸಿದ್ದಾರೆ.

ಅವರ ಉದ್ದೇಶವೂ, ಈ ಗ್ರಂಥದಿಂದ ಆಗಬೇಕೆಂದೆಂದುಕೊಂಡಿರುವ ಫಲವೂ ಉತ್ತಮವಾದವಿರಬಹುದು. ಆದರೆ ಇಂಥ ಚಾಪಲ್ಯ ವಸ್ತುಗಳಲ್ಲಿ ಕುಶಲ ಕರ್ಮವನ್ನು ತೋರುವುದು ಕಷ್ಟಸಾಧ್ಯವಾದ ಕೆಲಸ. ಅಲ್ಲದೆ ಚಿತ್ತ ಚಾಪಲ್ಯಗೊಳಿಸುವ ಭಾಗಗಳಲ್ಲಿಯೇ ಪಾಠಕರ ಮತ್ತು ಗ್ರಂಥಕರ್ತರ ಮನಸ್ಸು 'ಆವರ್ತ'ಕ್ಕೆ ಸಿಕ್ಕಿ ವಿಕಾರ ಹೊಂದಬಹುದು. ಇದರಿಂದ ಇಬ್ಬರಿಗೂ ನಷ್ಟ.

ಇದರ ಶೈಲಿಯು ಸುಲಭವಾಗಿಯೂ ಭಾಷೆಯು ಶುದ್ಧವಾಗಿಯೂ ಇದೆ. ಅನಾವಶ್ಯಕವಾದ ವರ್ಣನೆಗಳಿಲ್ಲ. ಪಾತ್ರಗಳ ಮನೋಭಾವಗಳನ್ನು ವಿಶದಗೊಳಿಸಲು ಗ್ರಂಥಕರ್ತರು ಪ್ರಯತ್ನಪಟ್ಟಿದ್ದಾರೆ. ಆದರೂ ಚಂಚಲೆಯ ಪಾಪಕಲುಷಿತವಾದ ಹೃದಯ ಸ್ವಭಾವಗಳು ಪರಿಶುದ್ಧವಾಗಿ "ಪತಿತಪರಾವರ್ತನ"ವಾದ ರೀತಿಯು ಸ್ಪಷ್ಟವಾಗುವುದಿಲ್ಲ. ಪ್ರತಿ ಅಧ್ಯಾಯದ ಮೊದಲಲ್ಲಿಯೂ ಕೊಟ್ಟಿರುವ ಸಂಸ್ಕೃತ ಶ್ಲೋಕಗಳೂ ವಾಕ್ಯಗಳೂ ಸಂಗತವಾಗಿವೆ.

ಗಙ.

* * * *

## ವಿಮರ್ಶಪದ್ಧತಿಯೂ, ಪ್ರಣಯಾವರ್ತವೂ

ಪ್ರಬುದ್ಧಕರ್ಣಾಟಕದ ವಿನಾಯಕನ ಸಂಚಿಕೆಯಲ್ಲಿ "ಪ್ರಣಯಾವರ್ತ ಅಥವಾ ಚಂಚಲಕುಮಾರಿ" ಎಂಬ ಗ್ರಂಥದ ಮೇಲೆ ಒಂದು ವಿಮರ್ಶೆಯನ್ನು ಬರೆದಿದ್ದೆವಷ್ಟೆ. ಅದರಲ್ಲಿ ನಾವು ಕೊಟ್ಟ ಅಭಿಪ್ರಾಯಗಳನ್ನು ಮ|| ಸಿ. ಎಸ್. ವೆಂಕಟಾಚಾರ್ಯರೆಂಬವರು ಖಂಡಿಸಿ ಜಯಕರ್ನಾಟಕದಲ್ಲಿ "ವಿಮರ್ಶಾ ಪದ್ಧತಿಯೂ ಪ್ರಣಯಾವರ್ತವೂ" ಎಂಬ ಲೇಖನವನ್ನು ಬರೆದಿದ್ದಾರೆ ಆ ಲೇಖನದಲ್ಲಿನ ರೋಷಮೂಲವಾದ ಕೆಲವು ಸಣ್ಣ ವೈಯಕ್ತಿಕ ವಿಚಾರಗಳನ್ನೂ ಅಸುಖ ಸೂಚಕವಾದ ಒಂದು ಬಗೆಯ ಸರಣಿಯನ್ನೂ ಬಿಟ್ಟು ಸಾಹಿತ್ಯಕ್ಕೆ ಸಂಬಂಧಪಡುವ ಎರಡು ಅಂಶಗಳನ್ನು ಮಾತ್ರ ಇಲ್ಲಿ ವಿಚಾರ ಮಾಡುವೆವು.

"ಕಲಾನೈಪುಣ್ಯವನ್ನು ಪರಿಶೀಲಿಸುವಾಗ ದೇಶವಾತ್ಸಲ್ಯದ

ಮಾತು ಯಾವ ಮುಖ್ಯರೀತಿಯಲ್ಲಿ ಸಮಂಜಸವಾದುದು?" ಎಂಬುದು ಇವರ ಮೊದಲನೆಯ ಪ್ರಶ್ನೆ. ಬಂಕಿಂಚಂದ್ರರ ಕಾದಂಬರಿಗಳನ್ನು ಓದಿದ ಮೇಲೆ ಕಥೆಗಾರನಾಗಬೇಕೆಂಬ ಪ್ರತಿಯೊಬ್ಬ ಭಾರತೀಯನೂ ಮೋಹಿತನಾಗಿ 'ಕಥೆ ಬರೆದರೆ ಹೀಗೆತಾನೇ ಬರೆಯಬೇಕು!' ಎಂದು ಆ ಮೇಲ್ಪಂಕ್ತಿಯನ್ನು ಪ್ರತಿಯೊಂದು ಅಂಶದಲ್ಲಿಯೂ ಅನುಸರಿಸಿ ಕೊಂಡು ಬರುತ್ತಿದ್ದಾನೆ. ನಮ್ಮವರು ಈಚೀಚೆಗೆ ಸ್ವತಂತ್ರವಾಗಿ ಬರೆಯುತ್ತಿರುವ ಕಥೆ ಕಾದಂಬರಿಗಳಲ್ಲಿ ಬಂಗಾಳಿ ಹೆಸರುಗಳೂ ಸನ್ನಿವೇಶಗಳೂ ಮಾತಿನ ಸರಣಿಗಳೂ ಕಂಡುಬರುತ್ತಿರುವುದಕ್ಕೆ ಇದೇ ಕಾರಣವೆಂದು ನಮ್ಮ ಅಭಿಪ್ರಾಯ. ಇದು ಕನ್ನಡ ದೇಶಕ್ಕೆ ಮಾತ್ರ ಅನ್ವಯಿಸುತ್ತಿಲ್ಲ; ಬಂಗಾಳದಲ್ಲಿ ಬಂಕಿಂಚಂದ್ರರಿಂದೀಚೆಗೆ ಕಾದಂಬರಿಗಳನ್ನು ಬರೆಯುತ್ತಿರುವ ಪ್ರತಿಯೊಬ್ಬರೂ ಇದಕ್ಕೆ ಉದಾಹರಣೆ. ಅಷ್ಟೇಕೆ, ಇಡೀ ಭರತಖಂಡದಲ್ಲಿಯೇ ಈಗ ಅವರ ಕಾದಂಬರಿಗಳಿಂದ ಜ್ಞಾತ ಅಥವಾ ಅಜ್ಞಾತವಾದ ರೀತಿಯಲ್ಲಿ ಸಂಸ್ಕಾರಹೊಂದದ ಕಥೆಗಾರರಿಲ್ಲವೆಂದು ಹೇಳಬಹುದು. ಸಮರ್ಥನಾದವನೊಬ್ಬನು ಯಾವುದಾದರೊಂದು ಕಾರ್ಯವನ್ನು ಹೊಸದಾಗಿಯಾಗಲಿ ಹೊಸರೀತಿಯಲ್ಲಿಯಾಗಲಿ ಕೈಕೊಂಡು ಜಯವನ್ನು ಪಡೆದರೆ ಅವನನ್ನು ಮಿಕ್ಕವರೂ ಅನುಕರಣ ಮಾಡುವುದು ಸ್ವಭಾವ. ಸಾಹಿತ್ಯ ಕ್ಷೇತ್ರದಲ್ಲಿಯೂ ಹೀಗೆಯೇ; ಕಾಳಿದಾಸನು ಮೇಘಸಂದೇಶವನ್ನು ಬರೆಯುವುದಕ್ಕೆ ಮುಂಚೆ ಸಂಸ್ಕೃತ ಸಾಹಿತ್ಯದಲ್ಲಿ ಅಂಥ ಮತ್ತೊಂದು ಗ್ರಂಥವಿರಲಿಲ್ಲ. ಆ ಮಾರ್ಗವನ್ನೂ ಮಾದರಿಯನ್ನೂ ಕಾಳಿದಾಸನ ಅಪೂರ್ವ ಪ್ರತಿಭೆಯು ಸೃಷ್ಟಿಮಾಡಿದ ಮೇಲೆ ಎಷ್ಟು ಜನ ಅವನನ್ನು ಅನುಕರಿಸಿದರು! ಎಷ್ಟು ವಿಧವಾದ ಸಂದೇಶಗಳು ಹುಟ್ಟಿಹೋದುವು! ಇದರಂತೆ ಇಂಗ್ಲಿಷಿನವರನ್ನು ನಾವು ನಮ್ಮ ಜೀವನದಲ್ಲಿ ಎಷ್ಟು ವಿಧವಾಗಿ ಅನುಕರಣಮಾಡುತ್ತ ಬಂದಿದ್ದೇವೆ! ನಾವು ಹೀಗೆ ಆಜೀವನವೂ ಅಂಧಾನುಕರಣದಲ್ಲಿಯೇ ಗಾಣದ ಎತ್ತುಗಳಂತೆ ತಿರುಗುತ್ತಿರೋಣವೇ? ಇಲ್ಲದಿದ್ದರೆ ಸ್ವಲ್ಪ ವಿವೇಚನೆ ಮಾಡಿ ಸ್ವಶಕ್ತಿಯೆಂಬುದಿದ್ದರೆ ಅದನ್ನು ಬಲಪಡಿಸಿ ವ್ಯಕ್ತಪಡಿಸಿ ಇಷ್ಟವನ್ನು ಸಾಧಿಸೋಣವೇ? ಹಾಗಿದ್ದರೆ, ಬಂಕಿಂಚಂದ್ರರ

ಅನುಕರಣವು ಎಷ್ಟುಮಟ್ಟಿಗೆ ಆವಶ್ಯಕ ಮತ್ತು ಸಫಲ ಎಂದು ಯೋಚಿಸುವುದಕ್ಕೆ ಇದು ಸಕಾಲವಾಗಿಲ್ಲವೆ? ಆದ್ದರಿಂದ ಕಥೆ ಬರೆಯುವವರು ತಮ್ಮ ಕಥೆಗಳನ್ನು ಎಲ್ಲಾ ಉತ್ತರದೇಶದಲ್ಲಿಯೇ ನಡೆಸಬೇಕೇ ಎಂದು ವಿಚಾರಮಾಡಬೇಕಾಗಿ ಸೂಚಿಸಿದೆವು. ಉತ್ತರದೇಶದಲ್ಲಿ ನಡೆದ ಒಂದು ಐತಿಹಾಸಿಕ ವೃತ್ತಾಂತವನ್ನು ಬರೆಯಬೇಕಾದರೆ ಆ ದೇಶದ ಸನ್ನಿವೇಶಗಳೇ ಬೇಕು; ಹಾಗಲ್ಲದೆ ಕಲ್ಪಿತವಾದ ಒಂದು ಸಾಮಾಜಿಕ ವೃತ್ತಾಂತಕ್ಕೆ ನಮ್ಮ ದೇಶವು ಆಸರೆ ಕೊಡಲಾರದೇ? "ಯಾವ ದೇಶವಾದರೇನು? ವಿಗ್ರಹದ ಕಲ್ಲು 'ಚಾಮುಂಡಿಬೆಟ್ಟದಲ್ಲಿದ್ದುದೇ ಅಥವಾ ಕಬ್ಬಾಳ ದುರ್ಗದ್ದೇ? ಎರಡೂ ಅಲ್ಲದಿದ್ದರೆ ಚಿಂತಾಮಣಿಯ ಮಗ್ಗುಲಲ್ಲಿರುವ ಸಿಡಲಘಟ್ಟದ್ದೆ?' ಎಂಬ ಪ್ರಶ್ನೆ ಅಪ್ರಕೃತ" ಎಂಬುದು ಖಂಡನಕಾರರ ಮತ. ಉತ್ತರದೇಶದ ಶಿಲ್ಪಿಯೊಬ್ಬನು ತನ್ನ ದೇಶದಲ್ಲಿ ತನ್ನ ಮನೆಯ ಹತ್ತಿರ ಇರುವ ಕಲ್ಲಿನಲ್ಲಿ ವಿಗ್ರಹ ಮಾಡಿಟ್ಟ ಮಾತ್ರದಿಂದ, ನಮ್ಮ ದೇಶದ ವಿಗ್ರಹಕಾರನೂ ಉತ್ತರದೇಶಕ್ಕೆ ಪೂರ್ವಶಿಲ್ಪಿಯ ಮನೆಯ ಬಾಗಿಲಿಗೇ ಹೋಗಿ ಅವನು ಒಡೆದಿಟ್ಟು ಮಿಕ್ಕಿರುವ ಕಲ್ಲನ್ನೇ ಏಕೆ ತರಬೇಕು? ಕಲ್ಲು ಯಾವುದಾಗಿದ್ದರೂ ಶಿಲ್ಪಸಾಮರ್ಥ್ಯವೇ ಮುಖ್ಯವಾದ್ದರಿಂದ ಚಾಮುಂಡಿಬೆಟ್ಟದ ಕಲ್ಲನ್ನೇ ಏಕೆ ಉಪಯೋಗಿಸಬಾರದು? ಅದೂ ಉತ್ತರದೇಶದ ಕಲ್ಲಿನಷ್ಟೇ ಶ್ಲಾಘ್ಯವಾಗಿದ್ದರೆ ಅಥವಾ ಅದಕ್ಕಿಂತ ಉತ್ತಮವಾಗಿದ್ದರೆ, ಅದನ್ನೇ ಉಪಯೋಗಿಸಿಕೊಂಡು ವ್ಯರ್ಥಶ್ರಮವನ್ನು ತಪ್ಪಿಸಿಕೊಳ್ಳುವುದು ವಿವೇಕವಲ್ಲವೇ? ಇದರಿಂದ ನಮ್ಮ ದೇಶದ ಮಿಕ್ಕ ಶಿಲ್ಪಿಗಳಿಗೂ ವಿಗ್ರಹ ನಿರ್ಮಾಣಸಾಮಗ್ರಿಗೆ ಹತ್ತಿರವೇ ಒಂದು ಖನಿಯನ್ನು ತೋರಿಸಿಕೊಟ್ಟು ಉಪಕಾರಮಾಡಿದಂತಾಗುವುದಿಲ್ಲವೇ? ಅಲ್ಲದೆ ಸಾಹಿತ್ಯವೆಂಬುದು, ಹುಣ್ಣಿಮೆಯ ಚಂದ್ರನನ್ನು ನೋಡಿ ಕೂಗಿಕೊಳ್ಳುವ ನಾಯಿಯ ಉದ್ದೇಶವಿಹೀನವಾದ ಕೂಗಲ್ಲ; ಜನರು ತನ್ನ ಗ್ರಂಥವನ್ನು ಓದಿ ಆನಂದಪಡಬೇಕೆಂಬುದೂ ಆದರಿಂದ ಅವರ ಮೇಲೆ ಸತ್ಪರಿಣಾಮವಾಗಬೇಕೆಂಬುದೂ ಕವಿಯ ಉದ್ದೇಶವಾಗಿರುತ್ತದೆ. ಹಾಗಿರಲು, ತನ್ನ ಗ್ರಂಥದಲ್ಲಿರಬಹುದಾದ ರಸದ ಜೊತೆಗೆ ಪಾಠಕರಿಗೆ ಪರಿಚಯವಾಗಿರಬಹುದಾದ ಸನ್ನಿವೇಶ

ಗಳನ್ನೂ ತಂದುಹಾಕಿದರೆ ಅದು ಅವರಿಗೆ ಹೆಚ್ಚು ರಂಜಕವೂ ಗ್ರಾಹಕವೂ ಆಗುವುದಿಲ್ಲವೇ ? ಹಿಂದೂಗಳಿಗೆ ರಾಮಾಯಣವು ಪ್ರಿಯವಾಗಿರುವಂತೆ, ಘನವಾಗಿದ್ದರೂ ರಸ ಪೂರ್ಣವಾಗಿದ್ದರೂ, ಇಲಿಯಡ್ ಬಾಲ್ಡರ್‌ಡೆಡ್ ಮುಂತಾದ ಪಾಶ್ಚಾತ್ಯ ಗ್ರಂಥಗಳ ಭಾಷಾಂತರಗಳು ರುಚಿಸುತ್ತವೆಯೇ ? ಸಾವಿತ್ರಿಯ ಕಥೆಯು ರುಚಿಸುವಂತೆ ಮಿಲ್ಟನ್‌ನ "ಕೋಮಸ್" ರುಚಿಸುತ್ತದೆಯೇ ? ಅದರಂತೆ "ಈ ಪರಿಯ ಸೊಬಗಾವ ದೇವರೊಳು ಕಾಣೆ" ಎಂಬ ಪುರಂದರದಾಸರ ಕೀರ್ತನೆಯು ಹಿಂದೂಗಳಿಗೆ, ಕನ್ನಡಿಗರಿಗೆ, ರುಚಿಕರವಾಗಿರುವಂತೆ ಅದರ ಭಾಷಾಂತರವು ಇಂಗ್ಲಿಷ್ ಜನಗಳಿಗೆ ರುಚಿಕರವಾಗಿರುವುದೇ ? ತಪ್ಪು ಕಂಡು ಹಿಡಿದನೆಂಬ ವೈಷಮ್ಯಭಾವವನ್ನಾಗಲಿ, ಹೇಳಿದುದಕ್ಕೆ ಪ್ರತಿಹೇಳಬೇಕು ಹಿಡಿದಿದ್ದನ್ನು ಸಾಧಿಸಲೇಬೇಕು ಎಂಬ ಮೌಖ್ರ್ಯವನ್ನಾಗಲಿ ಇಟ್ಟುಕೊಳ್ಳದೇ ಹೇಳಿದರೆ—ಇವು ನಮ್ಮ ದೇಶದವು, ಕನ್ನಡಿಗರ ನಾಡಿಗೆ ಸಂಬಂಧಪಟ್ಟವು ಕನ್ನಡನಾಡಿನಲ್ಲಿ ನಡೆದವು ಎಂದು ನಾವು ಅಭಿಮಾನದಿಂದಲೂ ಹೆಮ್ಮೆಯಿಂದಲೂ ಹೇಳಿಕೊಳ್ಳಬಹುದಾದ ಗ್ರಂಥಗಳು ಆಧುನಿಕ ಕನ್ನಡಸಾಹಿತ್ಯದಲ್ಲಿ ಎಷ್ಟಿವೆ ? ಬಂಕಿಂಚಂದ್ರರ ಐತಿಹಾಸಿಕ ಕಾದಂಬರಿಗಳನ್ನು ಓದಿ ನಮ್ಮ ಮನಸ್ಸಿನಲ್ಲಿ ಈ ಭಾವವು ಉಂಟಾಗಿ ಮಹಾ ಸಂಕಟವಾಯಿತು ; ಆಗ ಮೈಸೂರು ಚರಿತ್ರೆಯ ಮೇಲೂ ಕಾದಂಬರಿಗಳನ್ನು ಬರೆಯಬೇಕೆಂದು ಸೂಚಿಸಿ ಈ ಹಿಂದೆ ಇದೇ ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದೆವು. ಅದರಲ್ಲಿ ಈ ವಿಷಯವು ಇನ್ನೂ ವಿಸ್ತಾರವಾಗಿ ವಿಚಾರಕ್ಕೆ ಬಂದಿದೆ.

ಕಥೆಯು ಮನಸ್ಸಿಗೆ ಸಂತೋಷಜನಕವಾಗಿರಬೇಕಾದರೆ ಅದರ ಕಾರ್ಯಸ್ಥಾನವು ದೇಶಾಂತರದಲ್ಲಿಯೋ ಗ್ರಹಾಂತರದಲ್ಲಿಯೋ ಇರಬೇಕೆಂಬುದೊಂದು ಭಾವನೆಯ ಇಂಗ್ಲಿಷ್ ಸಾಹಿತ್ಯದಲ್ಲಿಯೂ ಬಹುಕಾಲ ಇತ್ತು. ಆದರೆ ಹತ್ತೊಂಬತ್ತನೆಯ ಶತಮಾನದ ಆದಿಭಾಗದಿಂದ ಬರ್ನ್ಸ್ ವರ್ಡ್ಸ್‌ವರ್ತ್ ಮುಂತಾದ ಮಹಾಕವಿಗಳು ತಮ್ಮ ಮುಂದಿರುವ ಯಃಕಶ್ಚಿತ್ ಪದಾರ್ಥಗಳನ್ನೂ ತೆಗೆದುಕೊಂಡು ಅಮೋಘವಾದ ಕವಿತೆಗಳನ್ನು ಬರೆದು ಹಿಂದಿನಿಂದ ಬಂದಿದ್ದ ಭಾವನೆಯು ಸರಿಯಲ್ಲವೆಂಬುದನ್ನು ತೋರಿಸಿದರು.

ನಮ್ಮ ದೇಶದ ನಮ್ಮ ಜನಜೀವನದ ಸನ್ನಿವೇಶದಲ್ಲಿ ನಡೆದಂತೆ ಬರೆದ ಕಥೆಗಳಷ್ಟು ಬೇಗ ಪರದೇಶದಲ್ಲಿ ವಿಜಾತೀಯವಾದ ಸನ್ನಿವೇಶಗಳಲ್ಲಿ ನಡೆದಂತೆ ಬರೆದ ಕಥೆಗಳು ಮನಸ್ಸಿಗೆ ಅಂಟುವುದಿಲ್ಲ. ಆದ್ದರಿಂದ ಪರಿಣಾಮವೂ ಪೂರ್ಣಪ್ರಮಾಣದಲ್ಲಿ ದೊರೆಯುವುದಿಲ್ಲ. ಅಲ್ಲದೆ, ನಮ್ಮ ದೇಶದ ಪೂರ್ವ ಚರಿತ್ರೆಯಲ್ಲಿಯೂ ಇಂದಿನ ನಡವಳಿಕೆಯಲ್ಲಿಯೂ ಯಾವ ರಸಕ್ಕೆ ಬೇಕಾದರೆ ಆ ರಸಕ್ಕೆ ಪಾತ್ರವಾಗುವ ವಸ್ತುಗಳು ದೊರೆಯುತ್ತಿರುವಾಗ, ಮನೆಯಲ್ಲಿರುವ ಸೀನೀರಿನ ಭಾವಿಯನ್ನು ಬಿಟ್ಟು ವೈಲಕ್ಷಣ್ಯಕ್ಕೆ ಬೆರಗಾಗಿ ಸಮುದ್ರಕ್ಕೆ ಹೋಗಿ ಉಪ್ಪು ನೀರನ್ನು ಹೊತ್ತುತಂದು ಪತಂಗಿಸಿ ಏಕೆ ಸೀನೀರನ್ನು ಒದಗಿಸಿಕೊಳ್ಳಬೇಕು?—ಎಂಬುದಿಷ್ಟೇ ನನ್ನ 'ದೇಶವಾತ್ಸಲ್ಯ' ವಾದದ ಸಾರಾಂಶ. ಸತ್ಸಾಹಿತ್ಯದ ಮೂಲಕ ಭಾವಶುದ್ಧಿಯನ್ನುಂಟುಮಾಡಿ ಜನರನ್ನು ಉಚ್ಚಾದರ್ಶದ ಕಡೆಗೆ ಆಕರ್ಷಿಸಿ ಜನಾಂಗದ ಗುಣಸ್ವಭಾವಗಳನ್ನು ಉತ್ತಮಗೊಳಿಸುವುದು ಸಾಧ್ಯ. ಕ್ಷುಬ್ಧವಾದ ಸಾಗರವನ್ನು ನಯಭಯಗಳಿಂದ ಒಡಂಬಡಿಸಿ ಒಲಿಸಿಕೊಂಡು ಇಂದ್ರಜಾಲ ಮಹೇಂದ್ರಜಾಲಗಳನ್ನು ಮಾಡಿಬಿಟ್ಟ ಮಹಾಪುರುಷರ ವಿಚಾರವನ್ನು ಓದಿ ಕೇಳಿ ಬಲ್ಲೆವು. ಹಾಗಲ್ಲದೆ ಜನರ ಮನಸ್ಸನ್ನು ಒಲಿಸಿಕೊಳ್ಳುವುದು ಯಾವ ಕವಿಗಳಿಗೆ ಸಾಧ್ಯವಲ್ಲವೋ ಅವರು ದುರದೃಷ್ಟಶಾಲಿಗಳು; ಬರಡು ಕವಿಗಳು. ಇದು ದೇಶವಾತ್ಸಲ್ಯದಿಂದ ಆಗಬಹುದಾದ ಒಂದು ಬಗೆಯ ದೇಶೋದ್ಧಾರವಾದರೂ ಆ ವಿಚಾರವು ಪ್ರಕೃತವಲ್ಲ.

ಷೇಕ್ಸ್‌ಪಿಯರ್ ಕವಿಯ ನಾಟಕಗಳಲ್ಲಿ 'ಸ್ಪಷ್ಟ ಅಥವಾ ಸೂಚಿತವಾಗಿರುವ ದೇಶ ವಾತ್ಸಲ್ಯದ ಅಂಶ' ವಿರುವುದೆಂದೂ ಅವುಗಳಿಗೆ "ಮತ್ತಾವ ಅರ್ಥದಲ್ಲಿ ಬೆಲೆಯಾಗದಿದ್ದರೂ ಈ ದೇಶವತ್ಸಲತೆಯ ಸಂಬಂಧದಲ್ಲಿ ಸಂಪೂರ್ಣವಾದ ಬೆಲೆಯು ಇದ್ದೇ ಇರುವುದು" ಎಂದೂ ಮ|| ಆಚಾರ್ಯರು ಅಭಿಪ್ರಾಯಪಡುತ್ತಾರೆ. ಇದರ ವಿಚಾರವನ್ನು ಕೈಗೊಳ್ಳುವುದು ಅಪ್ರಕೃತ. ಆದರೂ, ಷೇಕ್ಸ್‌ಪಿಯರನ ನಾಟಕದಲ್ಲಿ ದೇಶವಾತ್ಸಲ್ಯಕ್ಕೇ ಹೆಚ್ಚು ಪ್ರಾಶಸ್ತ್ಯಕೊಟ್ಟು ಅದರಿಂದ ಅವುಗಳನ್ನು ಮೆಚ್ಚುವವರು ಆ

ನಾಟಕಗಳ ಓದಿಗೆ ಸರಿಯಾದ ಮತ್ತು ಪೂರ್ಣವಾದ ಫಲವನ್ನು ಪಡೆದಿಲ್ಲವೆಂದಾದರೂ ಹೇಳಬೇಕಾಗಿದೆ.

ಸಾಹಿತ್ಯದಲ್ಲಿ ಶೃಂಗಾರರಸಕ್ಕೆ ಕೊಡಬೇಕಾದ ಸ್ಥಾನ ಮತ್ತು ಅದನ್ನು ನಿರೂಪಿಸುವ ಕ್ರಮವು ಎರಡನೆಯ ವಿಚಾರ. ಈ ಸಂಬಂಧವಾಗಿ ಅವರು "ಕಥೆಯಲ್ಲಿ ಶೃಂಗಾರರಸವಿಲ್ಲದಿದ್ದರೆ ಕಥೆಗೆ ರಸಿಕತೆಯಿರದು. ಈ ಅಭಿಪ್ರಾಯಕ್ಕೆ ಅಲಂಕಾರಶಾಸ್ತ್ರಕಾರರ ವಾಕ್ಯವೇ ಪ್ರಮಾಣ; ಮಹಾಕಾವ್ಯದಲ್ಲಿರಬೇಕಾದ ಹತ್ತು ಲಕ್ಷಣಗಳಲ್ಲಿ ಶೃಂಗಾರರಸ ವರ್ಣನೆಯೂ ಇರಬೇಕೆಂದು ಭರತಮುನಿಯು ಹೇಳಿದನು. ಅದು ಹೇಗೆಂಬುದನ್ನು ಪರೀಕ್ಷಿಸಿರಿ. ಆ ರಸ ವಿಶೇಷವಿಲ್ಲದಿದ್ದರೆ ಕೊರತೆಯಿಲ್ಲವೆಂದು ಕುರಿತುಕೊಂಡು ಮಾಘ ಕಾವ್ಯದಲ್ಲಿ ಶೃಂಗಾರಭರಿತವಾಗಿರುವ ಕೆಲವು ಸರ್ಗಗಳನ್ನು ತೆಗೆದುಬಿಟ್ಟು ಬಳಿಕ ಓದಿರಿ, ಅಥವಾ ಭರ್ತೃಹರಿಯ ಶೃಂಗಾರ ಶತಕವನ್ನು ತೆಗೆದುಬಿಟ್ಟು ನೀತಿ ವೈರಾಗ್ಯ ಶತಕಗಳೆರಡನ್ನೇ ಓದೋಣ. ಕೊನೆಯಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾಗಿ ಸಂನ್ಯಾಸಕ್ಕೆ ಅದೇ ಉಪದೇಶವೆಂಬಂತೆ ತೋರುವುದಿಲ್ಲವೇ?..........ಎರಡು ಶತಕಗಳಲ್ಲಿ ಒಂದೊಂದು ಶ್ಲೋಕವೂ ಒಂದೊಂದು ಗುಟುಕು ಔಷಧಿಯಂತೆ ಅನುಭವವಾಗುವುದಿಲ್ಲವೇ" ? ಎಂದು ಬರೆದಿದ್ದಾರೆ.

ಮ|| ಆಚಾರ್ಯರ ಈ ವಾಕ್ಯಗಳಲ್ಲಿ ಒಂದೂ ಸಪ್ರಮಾಣವಾಗಿಯಾಗಲಿ ಸಮಂಜಸವಾಗಿಯಾಗಲಿ ಇರುವಂತೆ ನಮಗೆ ತೋರುವುದಿಲ್ಲ. ಇಂಗ್ಲಿಷ್ ಸಾಹಿತ್ಯವನ್ನು ಓದಿಯೂ ಅದರಲ್ಲಿಯೂ ಷೇಕ್ಸ್‌ಪಿಯರನ ಕರುಣರಸ ಪೂರಿತವಾದ ನಾಟಕಗಳನ್ನು ಓದಿಯೂ 'ಶೃಂಗಾರ ರಸವಿಲ್ಲದಿದ್ದರೆ ಕಥೆಗೆ ರಸಿಕತೆಯಿರದು (ಕಥೆಯು ರಸವತ್ತಾಗಲಾರದು?) ಎಂದು ಅಭಿಪ್ರಾಯಪಡುವುದು ಆಶ್ಚರ್ಯಕರವಾಗಿದೆ. ಶೃಂಗಾರರಸವನ್ನು ಬಿಟ್ಟರೆ ಬೇರೆ ರಸವೇ ಇಲ್ಲವೇ? ಅಲಂಕಾರಶಾಸ್ತ್ರಕಾರರು ಎಂಟು ಅಥವಾ ಒಂಬತ್ತು ರಸಗಳನ್ನು ಹೇಳುತ್ತಾರೆಯೇ ವಿನಾ ಶೃಂಗಾರ ರಸವನ್ನು ಬಿಟ್ಟರೆ ಬೇರೆ ರಸವೇ ಇಲ್ಲವೆಂದು ಯಾರೂ ಹೇಳಿಲ್ಲ. "ಅಗ್ನಿಪುರಾಣ" ಕಾರರೂ "ಸರಸ್ವತೀ ಕಂಠಾಭರಣ" ಕಾರರೂ ಶೃಂಗಾರರಸಕ್ಕೆ ಸ್ವಲ್ಪ ಪಕ್ಷಪಾತ ತೋರಿಸಿದಂತಿದೆ.

(ಆದರೂ ಈ ಸಂಬಂಧದಲ್ಲಿ ಬರುವ ಅವರ ವಾಕ್ಯಗಳನ್ನು ಸಂದರ್ಭ ವಿಟ್ಟುಕೊಂಡು ವಿಚಾರಮಾಡಿದರೆ ಹೀಗೆ ಅರ್ಥ ಮಾಡುವುದು ಸರಿಯೇ ಎಂಬ ಸಂದೇಹ ಬರುತ್ತದೆ.) ಇಷ್ಟು ಮಾತ್ರಕ್ಕೇ ಸ್ವಾಭಿಪ್ರಾಯಕ್ಕೆ "ಅಲಂಕಾರ ಶಾಸ್ತ್ರಕಾರರ ವಾಕ್ಯ" ವನ್ನು ಪ್ರಮಾಣವಾಗಿ ಎಳೆಯುವುದು ನ್ಯಾಯವೇ? ಮಹಾಕಾವ್ಯದಲ್ಲಿರಬೇಕೆಂದು ಹೇಳುವುದು ಹದಿನೆಂಟು ಲಕ್ಷಣಗಳೆಂದು (ಹತ್ತು ಅಲ್ಲ) ಪ್ರಸಿದ್ಧವಾಗಿದೆ. ನಮಗೆ ತಿಳಿದ ಮಟ್ಟಿಗೆ ಭರತಮುನಿಯು ಇದನ್ನು ಎಲ್ಲಿಯೂ ಹೇಳಿದ ಹಾಗಿಲ್ಲ. ದಂಡಿ ಮುಂತಾದ ಲಕ್ಷಣಗ್ರಂಥಕಾರರೇನೋ ಸೇರಿಸಿದ್ದಾರೆ. ಆದರೆ ಶೃಂಗಾರದ ವರ್ಣನೆಯಂತೆ ಯುದ್ಧದ ವರ್ಣನೆಯೂ ಬರಬೇಕೆಂದು ವಿಧಿಸಿದ್ದಾರಲ್ಲ, ಇದರಿಂದ ವೀರರಸವೂ ಇರಬೇಕೆಂದು ಅರ್ಥವಾಗುವುದಿಲ್ಲವೆ? ಕಾವ್ಯಗಳಲ್ಲಿ ಶ್ರೇಷ್ಠವಾದದ್ದೆನ್ನಿಸಿಕೊಂಡಿರುವ ನಾಟಕದಲ್ಲಿಯೂ ಕೂಡ ಶೃಂಗಾರ ಅಥವಾ ವೀರ ಈ ಎರಡು ರಸಗಳಲ್ಲಿ ಯಾವುದಾದರೂ ಒಂದು ಇರಬೇಕೆಂದು ಎಲ್ಲರೂ ಒಪ್ಪಿ ಶೃಂಗಾರದಷ್ಟೇ ಪ್ರಾಶಸ್ತ್ಯವನ್ನು ವೀರಕ್ಕೆ ಕೊಟ್ಟಿಲ್ಲವೇ? ಕರುಣರಸ ಪರಿಪೂರ್ಣವಾದದ್ದರಿಂದಲೇ ಭವಭೂತಿಯ ಉತ್ತರರಾಮಚರಿತ್ರೆಗೆ ಪ್ರಾಶಸ್ತ್ಯವು ಬಂದಿರುವುದು. ಮಾಘ ಕಾವ್ಯದಲ್ಲಿ ಶೃಂಗಾರವಿರುವುದು ನಿಜ. ಶೃಂಗಾರಿಗಳಿಗೆ ಆ ಭಾಗವನ್ನು ಬಿಟ್ಟರೆ ಮತ್ತಾವ ಭಾಗವೂ ಅಷ್ಟು ರುಚಿಸದಿರುವುದೂ ಸ್ವಾಭಾವಿಕ. ಆದ್ದರಿಂದಲೇ "ಮಾಘ ಓದಿ ಮಗ ಕೆಟ್ಟ" ಎಂಬ ಅನುಭವ ಸಿದ್ಧವಾಗಿರಬಹುದಾದ ಹೇಳಿಕೆಯು ರೂಢಿಯಲ್ಲಿದೆ. ಇದು ಮಾಘದ ಲಕ್ಷಣವಷ್ಟೇ ಅಲ್ಲ. ಕೆಲವು ಕವಿಗಳಿದ್ದಾರೆ, ಅವರ ಗ್ರಂಥವು ಸಂನ್ಯಾಸಿಯ ವೇಷವನ್ನು ಹಾಕಿಕೊಂಡಿದ್ದರೂ ಒಳಗೆ ಶೃಂಗಾರಸಾರವೇ ಹೊರತು ಮಿಕ್ಕ ಭಾಗ ಹೆಚ್ಚಾಗಿ ಇರುವುದಿಲ್ಲ. ಆದ್ದರಿಂದ ಅದನ್ನು ತೆಗೆದುಬಿಟ್ಟರೆ ರಸ ಹಿಂಡಿಬಿಟ್ಟ ಹಣ್ಣಿನ ಸಿಪ್ಪೆಯಂತೆ ಗ್ರಂಥವು ನಿಸ್ಸಾರವಾಗುವುದು; ಇದು ಆಚಾರ್ಯರ ವಾದಕ್ಕೆ ಅನುಕೂಲವೇ ಆಯಿತು; ಆದರೆ ಅದರ ಔಚಿತ್ಯವೆಷ್ಟರ ಮಟ್ಟಿನದು? ಕನ್ನಡ ಕಾವ್ಯಗಳಲ್ಲಿ ಶಿವನ ಭಿಕ್ಷಾಟನೆಯನ್ನು ವರ್ಣನೆ ಮಾಡುವುದಕ್ಕೆ ಹೊರಟ "ಭಿಕ್ಷಾಟನ ಚರಿತ್ರೆ"ಯು ಇಂಥ

ಗ್ರಂಥಕ್ಕೆ ಒಂದು ಉದಾಹರಣೆಯಾಗಿದೆ. ಇದರಲ್ಲಿ ಸೂಳೆಗೇರಿಯ ವರ್ಣನೆಯನ್ನೂ ಸ್ತ್ರೀಯರ ಹಾವ ಭಾವವಿಲಾಸ ವೈಚಿತ್ರ್ಯಗಳ ವರ್ಣನೆ ಯನ್ನೂ ಉಳಿದರೆ ಮಿಕ್ಕದ್ದೇನು? ಇಂಥ ಗ್ರಂಥಗಳಿಗೆ ಇಷ್ಟು ಗಂಭೀರ ವಾದ ಹೆಸರೇಕೆ? ಘನೋದ್ದೇಶಪ್ರದರ್ಶನವೇಕೆ? ಇಂಥ ಗ್ರಂಥಗಳು ಸಾಮಾನ್ಯವಾಗಿದ್ದರೆ, ಜನರಂಜಕವಾಗಿದ್ದರೆ, ಅದು ಆ ಕಾಲದ ದೌರ್ಬಲ್ಯ ದುಃಸ್ಥಿತಿಗಳನ್ನು ನಿದರ್ಶಿಸುತ್ತದೆಯೇ ಹೊರತು ಆದರ್ಶ ಸಾಹಿತ್ಯದ ಲಕ್ಷಣವನ್ನು ಹೇಳಿದಂತಾಗಲಿಲ್ಲ.

ಲಕ್ಷಣ ಗ್ರಂಥಕಾರರಂಥ "ಅವಿವೇಕಿಗಳು ಇನ್ನೊಬ್ಬರಿಲ್ಲವೆಂದೇ ಮ|| ಎ. ಆರ್. ಕೃಯವರು ಭಾವಿಸುತ್ತಾರೆಂಬುದರಲ್ಲಿ ಸಂಶಯವಿಲ್ಲ" ಎಂದು ಮ|| ಆಚಾರ್ಯರು ಹೇಳುತ್ತಾರೆ. ಇದು ನಮ್ಮ ಅಭಿಪ್ರಾಯ ವೆಂದು ಇಷ್ಟು ನಿರ್ಧರವಾಗಿ ಹೇಳುವುದಕ್ಕೆ ಅವರಿಗೆ ಆಧಾರಗಳು ಏನು ದೊರೆತಿವೆಯೋ ತಿಳಿಯದು. ಕವಿಯಾದವನು ಅಸಮರ್ಥನಾದರೆ ಲಾಕ್ಷಣಿಕರ ಮಾರ್ಗದರ್ಶನವು ನಿಷ್ಫಲವಾಗಿ ಕಾವ್ಯನಾಮಕ ಗ್ರಂಥದ ಉತ್ಪತ್ತಿಗೆ ಕಾರಣವಾಗುತ್ತದೆ. ಸಮರ್ಥನಾದ ಕವಿಯು ಅವರ ನಿರ್ಬಂಧಕ್ಕೆ ಸಿಕ್ಕುವುದೂ ಇಲ್ಲ. ಅವ್ಯುತ್ಪನ್ನರಾದರೂ ಒಳ್ಳೆಯ ಕವಿ ಗಳಾಗಿದ್ದವರು ಎಲ್ಲಾ ಸಾಹಿತ್ಯಗಳಲ್ಲಿಯೂ ಎಷ್ಟೋ ಜನರು ಕಂಡು ಬರುತ್ತಾರೆ. ಆದಿರಲಿ; ಶೃಂಗಾರರಸವು ರಸವಲ್ಲವೆಂದೂ ಅದು ದುಷ್ಟ ವೆಂದೂ ಯಾರೂ ಹೇಳುವುದಿಲ್ಲ. ಅದು ನನ್ನ ಅಭಿಪ್ರಾಯವೂ ಅಲ್ಲ. ಅದು ಭೋಜ್ಯವಸ್ತುಗಳಲ್ಲಿರುವ ಮಾಧುರ್ಯ ರಸವಿದ್ದಹಾಗೆ. ಆದರೆ ರಸಕ್ಕೂ ರಸಾಭಾಸಕ್ಕೂ ಬಹಳ ದೂರವಿಲ್ಲ; ಅಸಮರ್ಥನ ಅಥವಾ ಚಪಲನ ಕೈಗೆ ಸಿಕ್ಕಿದರೆ ಶೃಂಗಾರವು ವಿಟಚರ್ಯೆಯಾಗಿ ಪರಿಣಮಿ ಸುವುದು. ವಿಟಚರ್ಯೆಯಿಂದ ನಷ್ಟವಲ್ಲವೆ? ಶೃಂಗಾರರಸವು ಕುಲ ವಧುವಿನ ಧಾರ್ಮಿಕ ಪ್ರಣಯದಂತೆ; ವಿಟಚರ್ಯೆಯು ವೇಶ್ಯಾಸ್ತ್ರೀಯ ವಂಚಕ ವಿಲಾಸಗಳಂತೆ. ಇದಕ್ಕೆ ಉದಾಹರಣೆ, ಭಾಸನ ಸ್ವಪ್ನವಾಸವ ದತ್ತದಲ್ಲಿಯೂ ಶ್ರೀ ಹರ್ಷನ ರತ್ನಾವಳಿಯಲ್ಲಿಯೂ ಪ್ರತಿಪಾದಿತ ವಾಗಿರುವ ಶೃಂಗಾರ ರಸಸ್ವರೂಪಗಳನ್ನು ಪರಿಶೀಲಿಸಿ ನೋಡಿದರೆ ಗೊತ್ತಾಗುವುದು.

ಗ್ರಂಥವೆಂದರೇನು—ಕಾವ್ಯಕ್ಕೂ ಗ್ರಂಥಕ್ಕೂ ಏನು ಭೇದ—ಕಾವ್ಯದಲ್ಲಿ ಪ್ರಧಾನವಾದ ಅಂಶವಾವುದು—ಅದರಲ್ಲಿ ನೀತಿಯಿರಬೇಕಾದದ್ದು ಆವಶ್ಯಕವೇ ಎಂಬ ವಿಚಾರಗಳನ್ನು ತೆಗೆದುಕೊಂಡರೆ ಒಂದು ದೊಡ್ಡ ಉಪನ್ಯಾಸವನ್ನೇ ಬರೆಯಬೇಕಾಗುವುದು. ಕಾವ್ಯಗಳು ಮಾನವ ಭಾವ ಕರ್ಮಗಳನ್ನು ಪ್ರತಿಪಾದಿಸುತ್ತ ಪಾಠಕರ ಹೃದಯವನ್ನು ಹೊಕ್ಕು ಅವರ ಭಾವ ಕರ್ಮಗಳನ್ನು ಪರಿಣಾಮಗೊಳಿಸುವುದರಿಂದ ಕಾವ್ಯಕ್ಕೂ ನೀತಿಗೂ ಸಂಬಂಧ ಉಂಟೆಂಬುದು ಸ್ಪಷ್ಟವಾಗಿದೆ. ಆದರೆ ನೀತಿಯು ' ಯಾವ ಪಾತ್ರವನ್ನೂ ವಹಿಸದೆ ಇದ್ದ ಪಕ್ಷದಲ್ಲಿ ಗ್ರಂಥವು ಹೆಂಡಕುಡುಕರ ಅಂಗಡಿಯೇ ಹೊರತು ಅದಕ್ಕಿಂತ ಉತ್ತಮವಾದುದಲ್ಲ ' ಎಂದು ಹೇಳುವುದು ಅಸಂಗತ. ಏಕೆಂದರೆ ಆಗ ಯಾವ ನೀತಿಯೂ ತೋರದ ಸೂರ್ಯೋದಯಾಸ್ತಗಳು ಜಲಪಾತ ಪ್ರವಾಹಗಳು ಮನೋಹರವಾದ ಉದ್ಯಾನ ಮುಂತಾದವುಗಳ ವರ್ಣನೆಯನ್ನು ಕೊಡುವ " ವಸ್ತುಧ್ವನಿ " ಕಾವ್ಯಗಳ ಗತಿಯೇನು ? ಇವುಗಳನ್ನು ಹೆಂಡಕುಡುಕರ ವಶಕ್ಕೆ ಒಪ್ಪಿಸಿಬಿಡೋಣವೇ ?

ಇನ್ನೂ, " ಕವಿಗೆ ಕಟ್ಟುಮಾಡುವುದು ಅಸಾಧ್ಯ ; ಗಿಡವು ಹೂವು ಬಿಟ್ಟಂತೆ ಅವನು ನೈಸರ್ಗಿಕವಾಗಿ ಯಾವುದು ಯಾವ ಕಾಲದಲ್ಲಿ ಬರುತ್ತದೆಯೋ ಅದನ್ನು ಬರೆಯತಕ್ಕವನು ; ಮತ್ತೊಬ್ಬರ ಹೇಳಿಕೆಗೆ ಅನುಸಾರವಾಗಿ ನಿರ್ಬಂಧಕ್ಕೆ ಸಿಕ್ಕಿ ಬರೆಯತಕ್ಕವನಲ್ಲ ; ನಿರ್ಬಂಧಕ್ಕೆ ಬರೆದದ್ದು ಕಾವ್ಯವಾಗುವುದಿಲ್ಲ ; ಅವನು ಬರೆಯುವುದು ಶೃಂಗಾರವೇ ಆಗಲಿ ವೀರವೇ ಆಗಲಿ ರಸವೇ ಆಗಲಿ ರಸಾಭಾಸವೇ ಆಗಲಿ ಅದಕ್ಕೆ ಅವನು ಜವಾಬುದಾರನಲ್ಲ ; ಆದ್ದರಿಂದ ವಿಮರ್ಶಕನಿಗೆ ಕವಿಯನ್ನು ಖಂಡಿಸುವುದಕ್ಕೆ ಅವಕಾಶವೇ ಇಲ್ಲ ; ಅವನ ಖಂಡನೆಯು ನಿಷ್ಪ್ರಯೋಜಕ " ಎಂದು ಆಕ್ಷೇಪಿಸಿದ್ದರೆ ಸಮಂಜಸವಾಗುತ್ತಿತ್ತು. ಆದರೆ ಈ ಆಕ್ಷೇಪಣೆಯು ಪ್ರತಿಭಾಪರವಶರಾಗಿ ಅಸಹಾಯರಾಗಿ ಅಜ್ಞಾತಪ್ರಾಯವಾಗಿ ಬರೆಯುವ ಮಹಾಕವಿಗಳಿಗೆ ಅನ್ವಯಿಸತಕ್ಕದ್ದು. ಆಧುನಿಕ ಭಾರತೀಯ ಕವಿಶ್ರೇಷ್ಠರೆನ್ನಿಸಿಕೊಂಡಿರುವ ರವೀಂದ್ರನಾಥ ಠಾಕೂರರ ಬರವಣಿಗೆಗಳಲ್ಲಿಯೂ, ಈಚೀಚೆಗೆ ಆಗುತ್ತಿರುವ ಬದಲಾವಣೆಗಳನ್ನು

ನೋಡಿ! ಅವರೂ ಎಷ್ಟು ಮಟ್ಟಿಗೆ ಉದ್ದೇಶ ಪೂರ್ವಕವಾಗಿ, ಪ್ರಯತ್ನ ಪುರಸ್ಸರವಾಗಿ, ಬರೆಯುತ್ತಿದ್ದಾರೆ! ವಸ್ತುಸ್ಥಿತಿಯೇನೆಂದರೆ ಪ್ರಪಂಚಕ್ಕೂ ತನಗೂ ಇರುವ ಸಂಬಂಧದ ಸ್ಪಷ್ಟಜ್ಞಾನವೇ ಇಲ್ಲದಿರಬಹುದಾದ ಮಹಾವರಕವಿಗಳು ಇದ್ದರೆ ಅಂಥವರನ್ನು ಬಿಟ್ಟು ಮಿಕ್ಕಾದ ನರಕವಿಗಳು ವ್ಯಾವಹಾರಿಕ ಪ್ರಪಂಚದಲ್ಲಿ ಕುಟುಂಬಿಗಳಾಗಿಯೂ ಪ್ರಜೆಗಳಾಗಿಯೂ ಸಂಬಂಧವನ್ನಿಟ್ಟುಕೊಳ್ಳದೆ, ರಾಗದ್ವೇಷಗಳಿಂದ ಕೂಡದೆ, ಕಷ್ಟಸುಖಗಳನ್ನು ಅನುಭವಿಸದೆ ಇರಲಾಗುವುದಿಲ್ಲ. ಹೀಗಿರಲು, ಆಲೋಚನಾಪರನೂ ವಿವೇಕಿಯೂ ಆದ ಗ್ರಂಥಕರ್ತನು ತನಗೆ ತನ್ನ ಕುಟುಂಬಕ್ಕೆ ಮತ್ತು ತನ್ನ ದೇಶಕ್ಕೆ ಯಾವುದು ಹಿತಕರ—ಕೇವಲ ಪ್ರಿಯಮಾತ್ರವಲ್ಲ—ಎಂದು ಯೋಚಿಸಿ ಅನುಸರಿಸುವುದು ಸ್ವಭಾವ. ಇಂಥವರು "ಧರ್ಮಾಂಧ"ರೆಂಬ ಬಿರುದಿಗೆ ಪಾತ್ರರಾದರೆ ಅದು ಅವರಿಗೆ ಅಪಮಾನವಲ್ಲ. ಇಂಥ ಧರ್ಮಾಂಧರಿಂದ ಲೋಕಕ್ಕೆ ಹೆಚ್ಚು ಉಪಕಾರವಾಗದಿರಬಹುದಾದರೂ, ಧರ್ಮಭ್ರಷ್ಟರಿಂದ ಆಗಬಹುದಾದ ಬಾಧಕದ ಹೆದರಿಕೆ ಇಲ್ಲ. ಶೃಂಗಾರಲೋಲುಪತೆಯು ಯಾವ ವರ್ಣಾಶ್ರಮದ ಧರ್ಮವೂ ಅಲ್ಲ; ಭಾರತೀಯ ಆದರ್ಶ ಧರ್ಮವು ಮೊದಲೇ ಅಲ್ಲ." ಇದು ಸ್ವಾಭಾವಿಕ, ಮನುಷ್ಯನ ಪ್ರಕೃತಿಯು ಆ ಕಡೆ" —ಎಂದು ಹೇಳುವುದು ಕಾರ್ಯಕಾರಿಯಲ್ಲ, ಏಕೆಂದರೆ ಅದು ಮನುಷ್ಯನಲ್ಲಿರುವ ಪಶುಸ್ವಭಾವದಿಂದ ಪ್ರೇರಿತವಾದದ್ದು; ಪಶುವಿಗಿಂತಲೂ ಉತ್ತಮನಾಗಬೇಕೆನ್ನುವವನು ಅದನ್ನು ದಮನಮಾಡಬೇಕು. ಅಲ್ಲದೆ, ಭಾರತೀಯರ ಉಚ್ಚತರವಾದ ಧಾರ್ಮಿಕ ಆದರ್ಶವೆಲ್ಲಿ? ಈಗ ಜನಸಾಮಾನ್ಯರಲ್ಲಿ — ವಿದ್ಯಾವಂತರಲ್ಲಿಯೂ — ಕಂಡುಬರುವ ವಿಷಯಲೋಲುಪತೆಯೆಲ್ಲಿ? ಹೀಗಿರಲು, ಶಿಕ್ಷಿತರು ನಾಗರಿಕರು ಎನ್ನಿಸಿಕೊಂಡವರು ಈ ಕಡೆಗೆ ದೃಷ್ಟಿಗೊಟ್ಟು ಆದರ್ಶ ಜೀವನವನ್ನು ಜೀವಿಸಿ ಜನಜೀವನವನ್ನು ಉತ್ತಮಗೊಳಿಸಲು ಪ್ರಯತ್ನಪಡಬೇಕೇ, "ಅಸಾರೇ ಕಾವ್ಯಸಂಸಾರೇ ಸಾರಂ ಶ್ವಶುರಮಂದಿರಂ" ಎಂದು ಸಾರುತ್ತ ಹೋಗಬೇಕೇ? ವಿಚಾರಪರರಾಗಿರಬೇಕಾದ ವಿದ್ಯಾವಂತರೂ ಈ ಮತವನ್ನು ಅವಲಂಬಿಸಿದರೆ, ಮತ್ತು "ಪ್ರವರ್ತನೆಯು ಭಾವನೆಯ ಪ್ರತಿಕೃತಿ" ಯಾದರೆ ಅದು ತುಂಬ ಶೋಚನೀಯವೇ ಸರಿ.

ಪ್ರಕೃತಕ್ಕೆ ನಮ್ಮ ದೇಶದಲ್ಲಿ ಶೃಂಗಾರಪ್ರವಣತೆಯು ಬೇಕಾಗಿಲ್ಲ. ಪ್ರಜೆಗಳೆಲ್ಲರೂ ಋಷ್ಯಶೃಂಗರಾದರೆ ಆಗ ಅವರನ್ನು ಪ್ರಲೋಭನಗೊಳಿಸಿ, ಶೃಂಗಾರವನ್ನು ಕಲಿಸಿ ದೇಶದ ಕ್ಷೇಮವನ್ನು ಸಾಧಿಸೋಣ; ಈಗ, ಜಲಕ್ರೀಡೆಯಲ್ಲಿ ಗೋಪಿಕಾಸ್ತ್ರೀಯರನ್ನು ಕಿರುಕುಳಗುಟ್ಟಿಸಿದ ಭಾಗವತಕೃಷ್ಣನ ಉಪಾಸನೆಯನ್ನು ಬಿಟ್ಟು, ಅರ್ಜುನನಲ್ಲಿ ಪೌರುಷವನ್ನು ತುಂಬಿ ಯುದ್ಧಕ್ಕೆ ಹುರಿಗೊಳಿಸಿದ ಗೀತಾಕೃಷ್ಣನ ಉಪಾಸನೆಯನ್ನು ಕೈಗೊಳ್ಳೋಣ!

---

# ಸಾಹಿತ್ಯ

ಕವಿಗಳಲ್ಲಿ ಲಕ್ಷ್ಮೀ ಸರಸ್ವತಿಯರು ಒಟ್ಟಿಗೆ ಸೇರಿರುವುದು ಅಪರೂಪ; ಉತ್ತಮ ಕವಿಗಳೂ ಅಪರೂಪ. ಮ॥ "ಶ್ರೀನಿವಾಸ"ರು ಈ ಅಪರೂಪ ಕೋಟಿಗೆ ಸೇರಿದವರೆಂದು ಹೇಳಬಹುದು; ಅವರು ಕವಿಗಳಾದರೂ ಅವರಲ್ಲಿ ಲಕ್ಷ್ಮೀ ಸರಸ್ವತಿಯರಿಬ್ಬರೂ ಸೇರಿದ್ದಾರೆ; ಅವರಿಬ್ಬರೂ ಸವತಿ ಮಾತ್ಸರ್ಯದಿಂದ ಜಗಳವಾಡುವರೋ ಇಲ್ಲವೋ ನಾವು ಅರಿಯೆವು. ಅವರಿಬ್ಬರೂ ಜಗಳವಾಡಿದರೂ "ಮೂರನೆ"ಯವರಾದ ಕನ್ನಡಿಗರಿಗೆ "ಲಾಭ"ವಾಗಿ ಅವರ ಗ್ರಂಥಗಳು ಒಂದಾದ ಮೇಲೆ ಒಂದರಂತೆ ಅಚ್ಚಾಗಿ ಪ್ರಕಾಶಕ್ಕೆ ಬರುತ್ತಿವೆ.

"ಸಾಹಿತ್ಯ"ವು ಸೆಂಟ್ರಲ್‌ಕಾಲೇಜಿನ ಕರ್ಣಾಟಕ ಸಂಘದಲ್ಲಿ ಈಗ ಕೆಲವು ವರ್ಷಗಳ ಕೆಳಗೆ "ಶ್ರೀನಿವಾಸ"ರು ಓದಿದ ಒಂದು ಉಪನ್ಯಾಸ— ಅಥವಾ ಒಂದೇ ವಿಷಯದ ಮೇಲಣ ನಾಲ್ಕು ಉಪನ್ಯಾಸಗಳು. ಸೆಂಟ್ರಲ್ ಕಾಲೇಜು ತಮ್ಮ ಮಾತೃವಿದ್ಯಾಲಯವೆಂಬ ಅವರ ಒಂದು ಅಭಿಮಾನ, ಕರ್ಣಾಟಕ ಸಂಘದಲ್ಲಿ ಅವರಿಗೆ ಇರತಕ್ಕ ಒಂದು ಅವ್ಯಾಜ ಮೈತ್ರಿ, ಉತ್ತಮ ವಸ್ತುವನ್ನು ಮೊದಲೇ ರುಚಿ ನೋಡಿ ಬಿಡಬೇಕೆಂಬ ಕರ್ಣಾಟಕ ಸಂಘದ ಒಂದು ಕ್ಷಮ್ಯವಾದ ಕುತೂಹಲ, ಇವೆಲ್ಲವುಗಳ ಫಲವಾಗಿ ಈ ಉಪನ್ಯಾಸಗಳು ಅಲ್ಲಿ ಓದಲ್ಪಟ್ಟವೇ ಹೊರತು, ಇವು ಯಾರೇ ಆಗಲಿ ಗುಂಪಿನಲ್ಲಿ ಒಂದು ಸಾರಿ ಕೇಳಿ ಕೃತಾರ್ಥರಾದೆವೆಂದು ಹೊರಟು ಹೋಗುವಂತಿಲ್ಲ; ಅವುಗಳ ಒಂದೊಂದು ಅಂಶವೂ ಮಥನ ಮಾಡಿ ಮನನ ಮಾಡಿಕೊಳ್ಳಬೇಕಾದದ್ದು. ಈಗಿನ ಕನ್ನಡ ಸಾಹಿತ್ಯದಲ್ಲಿ ಬರುತ್ತಿರುವ ಅರಳು ಹಿಟ್ಟಿನ ರಾಶಿಯೊಳಗೆ "ಸಾಹಿತ್ಯ"ವು ಕಲ್ಲು ಸಕ್ಕರೆಯ ತುಂಡಿನಂತಿದೆ. ಇದು ಬಾಯಿಗೆ ಹಾಕಿಕೊಂಡರೆ ನಾಲಗೆಗೂ ಹಲ್ಲಿಗೂ ಸಿಕ್ಕುವುದು; ಇದನ್ನು ಅಗಿದರೆ ರುಚಿಯುಂಟು.

ಕವಿಯು ವಿಮರ್ಶಕನಾಗಿ ಮುಂದೆ ಬಂದು ಸಾಹಿತ್ಯ ವಿಚಾರ

ಗಳನ್ನು ವಿವರಿಸುವುದರಲ್ಲಿ ಗುಣವುಂಟು. ಮೂರು ಹೊತ್ತೂ ಚಿನ್ನದ ಗಣಿಯಲ್ಲಿ ಕೆಲಸ ಮಾಡುವವನೇ ಭಂಗಾರವನ್ನು ತೆಗೆಯುವ ಕ್ರಮ ವನ್ನು ವರ್ಣಿಸಿದರೆ ಅದಕ್ಕೆ ಸ್ವಾನುಭವದ ಬಲವೂ ಬೆಲೆಯೂ ಇರು ತ್ತದೆ. ಮ॥ ವೆಂಕಟೇಶಯ್ಯಂಗಾರ್ಯರು "ಶ್ರೀನಿವಾಸ"ನೆಂಬ ಅಂಕಿತ ನಾಮದಿಂದ ಆಧುನಿಕ ಕರ್ಣಾಟಕ ಸಾಹಿತ್ಯದಲ್ಲಿ ಸಣ್ಣಕಥೆಗಳು ನಾಟಕ ಗಳು ಗೀತಿಕೆಗಳು ಇವುಗಳನ್ನು ಬರೆದು ಸುಪ್ರಸಿದ್ಧರಾಗಿದ್ದಾರೆ. ಅವರು ಕವಿಗಳು, ಮೇಧಾವಿಗಳು, ಆಲೋಚನಾಪರರು, ವಿದ್ವಾಂಸರು, ಸ್ವದೇಶ ಭಾಷಾ ಸಾಹಿತ್ಯಗಳಲ್ಲಿ ಮಮತೆಯುಳ್ಳವರು. ಇಂಥವರು "ಸಾಹಿತ್ಯ"ದ ಕರ್ತೃಗಳಾಗಿರುವಾಗ ಅವರ ಗ್ರಂಥದಿಂದ ತಿಳಿದುಕೊಳ್ಳ ತಕ್ಕ ಅಂಶಗಳು ಬಹಳವಾಗಿರುವುವೆಂಬುದರಲ್ಲಿ ಸಂದೇಹವೇನಿದೆ?

ಈಗ್ರಂಥದಲ್ಲಿ, ಪೀಠಿಕೆ ಉಪಸಂಹಾರಗಳನ್ನು ಬಿಟ್ಟರೆ, ೧. ಜೀವನ ಸಾಹಿತ್ಯಗಳ ಪರಸ್ಪರ ಸಂಬಂಧ; ೨. ಸಾಹಿತ್ಯದ ಕಾರ್ಯ; ೩. ಸಾಹಿತ್ಯ ದಲ್ಲಿರಬೇಕಾದ ಉದ್ದೇಶವೂ ನೀತಿಯೂ; ೪. ಸಾಹಿತ್ಯದ ಸಾಮಗ್ರಿ ರೂಪಾದಿಗಳು—ಎಂಬ ನಾಲ್ಕು ಭಾಗಗಳಿವೆ. ಇವುಗಳ ಸ್ವರೂಪ ಉದ್ದೇಶಗಳನ್ನು ಅವರ ಮಾತಿನಿಂದಲೇ ತಿಳಿಸಬಹುದು:—

"ನಾವು ಆ (ಕಾಳಿದಾಸ ಮುಂತಾದ) ಜನಗಳ ನಾಗರಿಕತೆ ಯನ್ನು ನಮ್ಮದೆನ್ನುವವರಾದರೂ ಆ ಮಹಿಮೆಯ ಲೇಶಾಂಶವಾದರೂ ನಮ್ಮಲ್ಲಿ ಈಗ ಇಲ್ಲ. ಅದು ಇಲ್ಲದೆ ಹೋಯಿತು ಏಕೆ? ಅದು ಪುನಃ ಉಂಟಾಗುವಂತೆ ಮಾಡುವುದು ಹೇಗೆ? ಒಳ್ಳೆಯ ಗ್ರಂಥಗಳನ್ನು ಬರೆಯು ವುದು ಆವಶ್ಯಕವಾಗುವ, ಬರೆಯುವುದು ಸಾಧ್ಯವಾಗುವ, ಸಂದರ್ಭಗಳು ಎಂತವು? ಒಳ್ಳೆಯ ಗ್ರಂಥಗಳನ್ನು ಬರೆಯದಿದ್ದರೆ ನಾಗರಿಕತೆ ಇಲ್ಲ ವೆನ್ನಬೇಕೇ? ಎಂದು ಮೊದಲಾಗಿ ನಾವು ಈಗ ಕೇಳಬೇಕಾಗಿದೆ. ಇದೆಲ್ಲವನ್ನೂ ತಿಳಿಯಬೇಕಾದರೆ ಸಾಹಿತ್ಯದ ಸ್ವರೂಪವನ್ನೂ ಜೀವ ನಕ್ಕೂ ಸಾಹಿತ್ಯಕ್ಕೂ ಇರುವ ಸಂಬಂಧವನ್ನೂ ಸಾಹಿತ್ಯದ ಕಾರ್ಯ, ಉದ್ದೇಶ್ಯ, ರೂಪ, ಮಾರ್ಗ ಮೊದಲಾದ ವಿಷಯಗಳನ್ನೂ ತಿಳಿಯುವುದು ಆವಶ್ಯಕವು. ಆಮೇಲೆ ಸಾಹಿತ್ಯವು ಹಿಂದೆ ಅಷ್ಟು ಉನ್ನತ ಸ್ಥಿತಿಯನ್ನು ಐದಿದ್ದುದಕ್ಕೆ ಕಾರಣವನ್ನೂ ಅದು ಈಗ ದುರವಸ್ಥೆಯನ್ನು ಐದಿರುವು

ದಕ್ಕೆ ಕಾರಣವನ್ನೂ ಅದು ಪುನಃ ಉತ್ತಮ ಸ್ಥಿತಿಗೆ ಬರುವುದಕ್ಕೆ ಏನು ಮಾಡಬೇಕೆಂಬುದನ್ನೂ ವಿಚಾರಮಾಡುವುದು ಸುಲಭವಾಗುವುದು. ಸಾಹಿತ್ಯವನ್ನು ಕುರಿತ ಈ ವಿಷಯಗಳನ್ನು ವಿಚಾರಮಾಡಬೇಕೆಂದು ಈ ಉಪನ್ಯಾಸದಲ್ಲಿ ಪ್ರಯತ್ನಮಾಡಿದೆ.''

ಇವುಗಳಲ್ಲಿ ಮೊದಲನೆಯ ಉಪನ್ಯಾಸದ ವಿಷಯವನ್ನು ಹೀಗೆ ಸಂಗ್ರಹವಾಗಿ ತಿಳಿಸಬಹುದು :—

ಸಾಹಿತ್ಯವು ಕುಶಲಕಲೆಗಳಲ್ಲಿ ಒಂದು ; ಸಾಹಿತ್ಯವೆಂದರೆ ನಾನಾ ವಿಧವಾದ ಕಾವ್ಯಗಳ ಸಮುದಾಯ. ಇದರ ಉತ್ಪತ್ತಿಗೆ ಕಾರಣ ಕವಿಯ ಆವೇಶ ; ಕವಿಗೆ ಭಾವಗಳು ಅಧಿಕವಾದಾಗ ಆವೇಶ ಬಂದು ಕಾವ್ಯವು ಹುಟ್ಟುವುದು—ಆವಶ್ಯವಾಗಿ ಹುಟ್ಟಲೇ ಬೇಕಾಗುವುದು. ಈ ಆವೇಶವು ಬರುವಂತೆ ಕವಿಯೂ ಅವನ ಜನಾಂಗವೂ ನಿರಂತರ ಪ್ರಯತ್ನ ಮಾಡಬೇಕು. "ಕವಿಯಲ್ಲಿ ಕವನಕ್ಕೆ ಆವಶ್ಯಕವಾದ ಆವೇಶಕ್ಕೆ ಮೊದಲು ಜನಾಂಗದಲ್ಲಿ ಅದಕ್ಕೆ ಮೂಲಕಾರಣವಾಗಿ ಜಾಡ್ಯವನ್ನರಿಯದ ಬುದ್ಧಿಸ್ಫೂರ್ತಿಯೂ ಮುಂದುವರಿಯಬೇಕೆಂಬ ನಿರಂತರ ಪ್ರಯತ್ನವೂ ಇರಬೇಕು." ರಾಜಕೀಯ ಮುಂತಾದ ಬಾಹ್ಯ ಚರಿತ್ರೆಯು ಸಾಹಿತ್ಯಕ್ಕೆ ಸ್ವಲ್ಪ ಮಟ್ಟಿಗೆ ಸಾಮಗ್ರಿಗಳನ್ನು ಒದಗಿಸಿ ಕೊಡಬಹುದಾದರೂ ಅದಕ್ಕೆ ಮೂಲಕಾರಣವಾಗುವುದಿಲ್ಲ ; ಉದ್ಯಮ ಸಾಹಿತ್ಯಗಳೆರಡೂ ಜನಾಂಗದ ಭಾವೋನ್ನತಿಯ ಫಲ, ಜೀವದ ಚಿಹ್ನೆ. ನಮ್ಮ ಹಿಂದಿನ ಮತ್ತು ಈಗಿನ ಸ್ಥಿತಿಗಳೇ ಇದಕ್ಕೆ ಉದಾಹರಣೆ.

ಕಾವ್ಯವನ್ನು ಬರೆಯುವುದರಿಂದ ಕವಿಗೂ ಅದನ್ನು ಓದುವುದರಿಂದ ಅವನ ದೇಶೀಯರಿಗೂ ಭಾವಪರಿಶುದ್ಧಿ ಸಂಸ್ಕೃತಿಗಳು ಲಭಿಸುತ್ತವೆ. ಹೀಗೆ "ಕವಿಯು ಜನಾಂಗಕ್ಕೆ ರಾಗಸಂಸ್ಕಾರದಲ್ಲಿ ಗುರುವಾಗುವನು."

ಪ್ರತಿಯೊಂದು ಜನಾಂಗವೂ ತನ್ನ ಸಾಹಿತ್ಯವನ್ನು ಜೀವಂತ ಸ್ಥಿತಿಯಲ್ಲಿಟ್ಟುಕೊಂಡು ಬರಬೇಕು. "ಯಾವ ಜನಾಂಗವು ತನ್ನ ಸಾಹಿತ್ಯವನ್ನು ಒಳ್ಳೆಯ ಸ್ಥಿತಿಯಲ್ಲಿ ಇಟ್ಟುಕೊಂಡಿಲ್ಲವೋ ಆ ಜನಾಂಗವು ತನ್ನ ಕರ್ತವ್ಯದಲ್ಲಿ ಭಂಗವನ್ನು ಪಡೆದಿದೆ.''

ಹೀಗೆ ಮೊದಲ ಭಾಗದಲ್ಲಿ ಸಂಸ್ಕೃತ ಲಾಕ್ಷಣಿಕರು ಹೇಳು

ವಂತೆಯೇ ಕಾವ್ಯಲಕ್ಷಣ, ಕಾರಣ ಫಲ ಇವು ವಿವರಿಸಲ್ಪಟ್ಟಿವೆ ; ಆದರೆ ಅವರ ಪ್ರತಿಪಾದನ ಕ್ರಮವೇ ಬೇರೆ, ನಾನಾ ಸಾಹಿತ್ಯಗಳನ್ನು ಓದಿ ಬುದ್ಧಿವಿಕಾಸವನ್ನೂ ವಿಷಯ ಬಾಹುಳ್ಯವನ್ನೂ ಸಂಪಾದಿಸಿದ ಮ|| ಶ್ರೀನಿವಾಸರಂಥವರ ಪ್ರತಿಪಾದನ ಕ್ರಮವೇ ಬೇರೆ.

## ಕಾವ್ಯಲಕ್ಷಣ

ಅವರು "ವಾಕ್ಯಂ ರಸಾತ್ಮಕಂ ಕಾವ್ಯಂ" ಎಂದು ಸೂತ್ರರೂಪ ವಾಗಿ ಹೇಳಿದ್ದನ್ನೇ ಇವರು ವಿವರಣ ಮಾಡಿ "ನಮ್ಮವರು ಸಾಹಿತ್ಯ ಎಂದರೆ ಮಾನವ ಜೀವನದ ಚಿದ್ಭಾಗಕ್ಕೆ ಉದ್ದೇಶವಾಗದೆ ಆದರ ಆನಂದಾನುಭವಶಕ್ತಿ ಅಥವಾ ರಾಗಭಾಗಕ್ಕಾಗಿ ರಚಿಸಲ್ಪಟ್ಟ ಕಾವ್ಯಗಳ ಸಮುದಾಯ ಎಂದು ಭಾವಿಸುತ್ತಿದ್ದರು." ಎಂದು ಹೇಳಿದ್ದಾರೆ. ಆದರೆ ಈ ವಿವರಣಕ್ಕೆ ವ್ಯಾಖ್ಯಾನವು ಬೇಕಾಗುತ್ತದೆ. ಚಿದ್ಭಾಗಕ್ಕೆ ಉದ್ದೇಶ ವಾಗದಿರುವುದೆಂದರೇನು ? "ಚಿತ್" ಎಂಬುದು ಜ್ಞಾನಶಕ್ತಿಗೆಲ್ಲಾ ಮೂಲಕಾರಣವಾಗಿ ಜಡದೇಹವನ್ನು ಕತ್ತಲೆಯ ಮನೆಯಲ್ಲಿಟ್ಟ ದೀಪ ದಂತೆ ಜ್ಞಾನದಿಂದ ಬೆಳಗುವ ಚೈತನ್ಯಾಂಶ ; ಇದಕ್ಕೆ ಉದ್ದೇಶವಾಗ ದಿರುವುದೆಂದರೇನು ? ಮುಂದೆ 'ಆನಂದಾನುಭವಶಕ್ತಿ' ಎಂದು ಹೇಳಿ ರುವುದರಿಂದ ಅದಕ್ಕೆ ಪ್ರತಿಯಾಗಿ ಇಲ್ಲಿ "ಬುದ್ಧಿಶಕ್ತಿಗೆ ಉದ್ದೇಶವಾಗದೆ" ಎಂದು ಹೇಳಿದ್ದರೆ ಚೆನ್ನಾಗಿರುತ್ತಿತ್ತು. ಆನಂದಾನುಭವಶಕ್ತಿಗಾಗಿ ರಚಿಸಲ್ಪಟ್ಟದ್ದು ಕಾವ್ಯವೆಂದು ಹೇಳಿಬಿಡುವುದೂ ಅಷ್ಟು ತೃಪ್ತಿಕರ ವಾಗುವುದಿಲ್ಲ. ಸಮಸ್ತ ಜ್ಞಾನಕ್ಕೂ ಜೀವನಲ್ಲಿರುವ ಚಿದಂಶವು ಹೇಗೆ ಕಾರಣವೋ ಹಾಗೇ ಸಮಸ್ತ ಆನಂದಕ್ಕೂ ಜೀವನಲ್ಲಿರುವ ಆನಂದಾಂಶವು ಕಾರಣ. ಒಂದೇ ಆನಂದವೇ ಕಣ್ಣು ಮೂಗು ಮುಂತಾದ ಬಾಹ್ಯ ಕರಣಗಳು ಮನೋಬುದ್ಧ್ಯಹಂಕಾರ ರೂಪವಾದ ಅಂತಃಕರಣ ಅಥವಾ ಚಿತ್ತ ಈ ಉಪಾಧಿಗಳ ಮೂಲಕ ನಾನಾ ವಿಧ ವಾಗಿ ಅನುಭವಕ್ಕೆ ಬರುತ್ತದೆ—ಒಳಗೆ ಬೆಳ್ಳಗೆ ಉರಿಯುತ್ತಿರುವ ಒಂದು ದೀಪವು ಬೇರೆಬೇರೆ ಬಣ್ಣಗಳುಳ್ಳ ಗಾಜುಗಳ ಮೂಲಕ ಬೇರೆ ಬೇರೆ ಬಣ್ಣದ್ದಾಗಿ ತೋರುವ ಹಾಗೆ. ಇವುಗಳಲ್ಲಿ ಕಣ್ಣು ಮೂಗು

ಮುಂತಾದವುಗಳಿಂದ ಬರುವ ವೈಷಯಿಕ ಆನಂದದ ಮಾತಿರಲಿ; ಅದು ಪ್ರಕೃತವಲ್ಲ; ಏಕೆಂದರೆ ಸಾಹಿತ್ಯವು ಚಿತ್ರದಂತೆ ಕಣ್ಣಿನಿಂದ ನೋಡಿ ಸಂತೋಷಪಡತಕ್ಕದ್ದಲ್ಲ, ಸಂಗೀತದಂತೆ ಕಿವಿಯಿಂದ ಕೇಳಿದ ಮಾತ್ರಕ್ಕೆ ಸಂತೋಷಪಡಿಸತಕ್ಕದ್ದಲ್ಲ—ಇತ್ಯಾದಿ; ಆಂತರವಾದ ಆನಂದವೂ ಮನಸ್ಸು ಬುದ್ಧಿ ಅಹಂಕಾರಗಳ ಮೂಲಕ ತೋರಿಬಂದಾಗ ವ್ಯತ್ಯಾಸವಾಗುತ್ತದೆ. ಇಚ್ಛೆ, ಸಂಕಲ್ಪ ಸಂದೇಹ, ನಾಚಿಕೆ ಭಯ ಮುಂತಾದ ಭಾವಗಳೆಲ್ಲಾ ಮನೋವಿಕಾರಗಳು; ಇವುಗಳನ್ನೇ "ರಾಗಭಾಗ"ವೆಂದು ಶ್ರೀನಿವಾಸರು ಕರೆದಿರುವಂತೆ ತೋರುತ್ತದೆ. ಭಾವಗಳನ್ನು ಉದ್ಬೋಧಗೊಳಿಸಿ ರಸವನ್ನುಂಟುಮಾಡಿ ಆ ಮೂಲಕ ಆನಂದವನ್ನು ತರುವ ಶಬ್ದಸಮುದಾಯವು ಕಾವ್ಯವೆಂಬುದು ಯಾರಾದರೂ ಒಪ್ಪಬೇಕಾದ ಮಾತು. ಆದರೆ ಮೇಲಣ ಲಕ್ಷಣವಾಕ್ಯದಿಂದ ಆನಂದಾನುಭ ಶಕ್ತಿಗಾಗಿ ರಚಿಸಲ್ಪಟ್ಟದ್ದು ಕಾವ್ಯವೆಂದು ಅರ್ಥವಾಗುತ್ತದೆ. ಭಾವೋದ್ಬೋಧದಿಂದ ಉಂಟಾದ ರಸಾನಂದವೆಂದು ಹೇಳದೆ ಹೀಗೆ ಸಾಮಾನ್ಯವಾಗಿ ಹೇಳಿಬಿಟ್ಟರೆ ಬುದ್ಧಿಯ ಮೂಲಕವಾಗಿ ಪಡೆಯಬಹುದಾದ ಶಾಸ್ತ್ರಾನಂದವನ್ನೂ (ಉದಾಹರಣೆ: ಗಣಿತಶಾಸ್ತ್ರದಲ್ಲಿ ಒಳ್ಳೆಯ ಒಂದು ಲೆಕ್ಕ ಮಾಡಿದಾಗ), ಯಾರಾದರೂ ನಮ್ಮನ್ನು ಹೊಗಳಿದರೆ ನಾವು ಉಬ್ಬಿಹೋಗಿ ಪಡೆಯುವ ಅಹಂಕಾರಿಕ ಸಂತೋಷವನ್ನೂ ಇದರಲ್ಲಿ ಸೇರಿಸಿಕೊಳ್ಳಬೇಕಾಗುತ್ತದೆ. ಆ ಸಂತೋಷಗಳೇ ಬೇರೆ; ಕಾವ್ಯಕ್ಕೆ ಅಸಾಧಾರಣ ಲಕ್ಷಣವಾದ ಆನಂದವೇ ಬೇರೆ.

ಮುಂದೆ "ನಾವು ಹಿಂದಿನವರು ಸಾಹಿತ್ಯವೆಂದು ಗಣಿಸದೆ ಇದ್ದ ಸಣ್ಣ ಕೃತಿಗಳನ್ನೂ ಜನಜನಿತವಾದ ಸಾಂಗತ್ಯಗಳನ್ನೂ ಇತರ ಕೇವಲ ಪಾಮರಕೃತ ಪಾಮರಾರ್ಹವಾದ ಪದ್ಯಗಳನ್ನೂ ಕೂಡ ಸಾಹಿತ್ಯವೆಂಬ ಹೆಸರಿನಲ್ಲಿ ಸೇರಿಸಿಕೊಳ್ಳುತ್ತೇವೆ" ಎಂದು ಹೇಳುತ್ತಾರೆ. ಇಲ್ಲಿ ಒಂದು ಸಂದೇಹವು ಬರುತ್ತದೆ. ಹಿಂದಿನವರು ಸಣ್ಣಕೃತಿ ಸಾಂಗತ್ಯ ಮುಂತಾದವುಗಳನ್ನು ಏನೆಂದು ಭಾವಿಸುತ್ತಿದ್ದರು? ಅವುಗಳನ್ನು ಕಾವ್ಯಪ್ರಪಂಚದಿಂದ ಬಹಿಷ್ಕಾರಹಾಕಿ ಓಡಿಸಿಬಿಡುತ್ತಿದ್ದರೇನು? ಹಾಗೆ ತೋರುವುದಿಲ್ಲ. ಅವುಗಳನ್ನು ಉತ್ತಮಕಾವ್ಯಗಳೆಂದು ಗಣಿಸುತ್ತಿರಲಿಲ್ಲ. ಅವ

ವುಗಳ ಯೋಗ್ಯತೆಯ ಮೇಲೆ ಖಂಡಕಾವ್ಯವೆಂದೋ ಕ್ಷುದ್ರಕಾವ್ಯ ವೆಂದೋ ದುಷ್ಟಕಾವ್ಯವೆಂದೋ ಕರೆಯುತ್ತಿದ್ದರು. ಆರೋಗದೃಢ ಕಾಯನೂ ಸುಂದರನೂ ವಂಶೋದ್ಧಾರಕನೂ ಆದ ಮಗನೂ ಮಗನೇ, ರೋಗದಿಂದ ನರಳುತ್ತಿರುವ ಮಕ್ಕಳೂ ಮಕ್ಕಳೇ; ಆದರೆ ಅವರಿಗೆ ವ್ಯತ್ಯಾಸವುಂಟು.

ಪ್ರಾಯಶಃ ಶ್ರೀನಿವಾಸರು ಶಾಸ್ತ್ರಕಾರರಂತೆ ನಿರ್ದುಷ್ಟವಾದ ನಿಷ್ಕೃಷ್ಟವಾದ ಲಕ್ಷಣವನ್ನು ಬರೆಯಬೇಕೆಂದು ಹೊರಟಿರಲಾರರು. ಸಾಹಿತ್ಯವೆಂದರೇನು ಎಂಬುದು ಹೇಗಾದರೂ ನಮ್ಮ ಮನಸ್ಸಿಗೆ ಬರಲೆಂ ಬುದು ಅವರ ಉದ್ದೇಶವಿರಬಹುದು. ಅವರ ವಾಕ್ಯಗಳಿಂದ ಈ ಉದ್ದೇ ಶವೇನೋ ನೆರವೇರಿದೆ.

## ಕಾವ್ಯಕಾರಣ

ಕವಿಯ ಆವೇಶವು ಕಾವ್ಯಕ್ಕೆ ಸಾಕ್ಷಾತ್ಕಾರಣವೆಂದೂ, ಅವನ ದೇಶೀಯರಲ್ಲಿರುವ 'ಬುದ್ಧಿಸ್ಫೂರ್ತಿ' 'ರಾಗಸ್ಫೂರ್ತಿ' ಮುಂತಾದವುಗಳು ಪರಂಪರಾಕಾರಣವೆಂದೂ ಶ್ರೀನಿವಾಸರ ಅಭಿಪ್ರಾಯ. ಹಾಲು ಉಕ್ಕಿ ದರೆ ಅದು ಹೊರಗೆ ಸುರಿಯುವಂತೆ ಕವಿಗೆ ಆವೇಶವು ಬಂದರೆ ಕಾವ್ಯವು ಹೊರಸೂಸುವುದೆಂಬುದು ಸರಿಯೆ; ಆದರೆ ಉಕ್ಕುವುದಕ್ಕೆ ಅದು ಹಾಲಾಗಿರಬೇಡವೆ? ನೀರು ಕಾದರೆ ಉಕ್ಕುವುದಿಲ್ಲ. ತುಪ್ಪ ಕಾದರೆ ಉಕ್ಕುವುದಿಲ್ಲ. ಆದ್ದರಿಂದ ಪೂರ್ವಜನ್ಮ ಸಂಸ್ಕಾರ ಲಬ್ಧವಾಗಿ ಭಗವಂ ತನಿಂದ ದತ್ತವಾಗಿ ಬಂದ "ಪ್ರತಿಭೆ"ಯು ಕವಿತ್ವ ಬೀಜವೆಂದು ಪೂರ್ವಿಕರು ಹೇಳಿದರು; ಬೀಜವಿದ್ದರೆ ಅದು ಸರಿಯಾದ ಸನ್ನಿವೇಶದಲ್ಲಿ ಫಲಕಾರಿಯಾಗುವುದು. ಹಾಗಲ್ಲದೆ "ಜನಾಂಗದಲ್ಲೆಲ್ಲಾ ಬುದ್ಧಿರಾಗಗಳ ಚಟುವಟಿಕೆಯು ಹೆಚ್ಚಿದರೆ ಅದರ ಫಲವಾಗಿ ಅದರಲ್ಲಿ ಕವಿಯೊಬ್ಬನು ಗ್ರಂಥಗಳನ್ನು ಬರೆಯುವನು" ಎಂದು ಹೇಳಿದರೆ ಅದರ ಮೇಲೆ— ಪ್ರಸಿದ್ಧ ಪುರುಷರೆಲ್ಲರೂ ಒಬ್ಬೊಬ್ಬರು ಒಂದೊಂದು ಶಕ್ತಿಯನ್ನು ಪಡೆದು ಪ್ರಸಿದ್ಧರಾಗುವುದಕ್ಕೆ ಬದಲಾಗಿ ಎಲ್ಲರೂ ಮಹಾಕವಿಗಳೇಕಾಗಲಿಲ್ಲ? ಭಾಸ್ಕರಾಚಾರ್ಯನು ಕಾಳಿದಾಸನೇಕಾಗಲಿಲ್ಲ? ಬುದ್ಧಿಸ್ಫೂರ್ತಿಯು ಮಂ ಕಾಗದೆ ಬರುತ್ತಿರುವ ಇಂಗ್ಲಿಷ್ ಜನರಂಥ ಪ್ರಬಲ ಜನಾಂಗದಲ್ಲಿ,

ಬಂಗಾಳಿಗಳಂಥ ಜನರಲ್ಲಿ, ಷೇಕ್ಸ್‌ಪಿಯರ್ ಒಬ್ಬನೇ ಹುಟ್ಟಲು ಕಾರಣ ವೇನು? ಬಂಕಿಂಚಂದ್ರನು ಒಬ್ಬನೇ ಹುಟ್ಟಲು ಕಾರಣವೇನು? ಆ ಕಾಲದಲ್ಲಿದ್ದ ಜನಾಂಗ ಸ್ಫೂರ್ತಿ ಮುಂತಾದವುಗಳು ಮಂಕಾದವು, ಈಚೆಗೆ ಆ ಜನರೇ ತುಕ್ಕುಹಿಡಿದುಹೋದರು ಎನ್ನೋಣವೇ? ಎಂದು ಮುಂತಾದ ಪ್ರಶ್ನೆಗಳು ಹುಟ್ಟುತ್ತವೆ.

ವ್ಯುತ್ಪತ್ತಿ ವಿದ್ಯಾವ್ಯಾಸಂಗಾದಿಗಳು ಪ್ರತಿಭೆಯಿದ್ದರೇ ಕಾವ್ಯಕ್ಕೆ ಕಾರಣವಾಗುತ್ತವೆ—ಅಥವಾ ಉತ್ಪನ್ನವಾಗಬಹುದಾದ ಕಾವ್ಯವನ್ನು ಉತ್ತಮಗೊಳಿಸಿ ಅಭಿವೃದ್ಧಿಪಡಿಸುತ್ತವೆ. ವಿದ್ಯಾಸಂಸ್ಕಾರದಿಂದ ಆಗುವ "ಬುದ್ಧಿಸ್ಫೂರ್ತಿ" ಮುಂತಾದವುಗಳು ಮಳೆಯಹಾಗೆ; ಸುವೃಷ್ಟಿಯಾದರೆ ಸುಭಿಕ್ಷವಾಗುತ್ತದೆ; ನಿಜ; ಆದರೆ ಪೈರು ಆಗುವುದಕ್ಕಿಂತ ಮುಂಚೆ ಭೂಮಿಯಲ್ಲಿ ಬೀಜಹಾಕಿರಬೇಕು; ಯಾವ ಭೂಮಿಯಲ್ಲಿ ಎಂಥ ಬೀಜವಿದ್ದರೆ ಅಂಥ ಗಿಡವು ಅಲ್ಲಿ ಹುಟ್ಟುತ್ತದೆ. ಆದ್ದರಿಂದಲೇ ದೇಶದಲ್ಲಿ ಲವಲವಿಕೆ ಹುಟ್ಟಿದರೆ ಅದು ಬಹುಮುಖವಾಗಿ ತೋರಿ ನಾನಾ ವಿಧದಲ್ಲಿ ಕಂಗೊಳಿಸುತ್ತದೆ. ಈಗಿನ ಬಂಗಾಳಾದೇಶವನ್ನು ಇದಕ್ಕೆ ಉದಾಹರಣೆಯಾಗಿ ಹೇಳಬಹುದು—ಶ್ರೀರಾಮಕೃಷ್ಣ ವಿವೇಕಾನಂದರು ಹುಟ್ಟಿದ್ದು ಅಲ್ಲಿಯೇ, ಬೋಸ್ ಮತ್ತು ಠಾಕೂರರು ಹುಟ್ಟಿದ್ದೂ ಅಲ್ಲಿಯೇ, ಹಗಲುಹೊತ್ತೇ ಭಯಂಕರವಾದ ಡಕಾಯತಿಗಳು ನಡೆಯುವುದೂ ಅಲ್ಲಿಯೇ. ಬಾಹ್ಯ "ಚರಿತ್ರೆಯೂ ಸಾಹಿತ್ಯವೂ ಈ ಸಾಮಾನ್ಯಕಾರಣದ ಫಲ"ವೆಂದು ಒಪ್ಪಿಕೊಳ್ಳುವ ಶ್ರೀನಿವಾಸರಿಗೂ ಇದೇ ಅಭಿಪ್ರಾಯವೆಂದು ತೋರುತ್ತದೆ.

ಇದರಿಂದಲೇ ಒಂದು ದೇಶದಲ್ಲಿ ಸಾಹಿತ್ಯದ ಉತ್ಪತ್ತಿ ಸ್ಥಿತಿ ಅಭಿವೃದ್ಧಿ ಅದರ ಸ್ವರೂಪಗಳಿಗೆ ಆ ದೇಶದ ಜನರು ಎಷ್ಟುಮಟ್ಟಿಗೆ ಕಾರಣರಾಗಬಹುದು ಎಂಬುದು ಗೊತ್ತಾಗುವುದು. ಈ ಉಪನ್ಯಾಸದ ಉದ್ದಕ್ಕೂ, ಕಾವ್ಯವು ಪ್ರಯತ್ನಸಾಧ್ಯವೆಂದೂ ಆದ್ದರಿಂದ ಪ್ರಯತ್ನಪೂರ್ವಕವಾಗಿ ಸಾಹಿತ್ಯವನ್ನುಂಟುಮಾಡಿ ಬೆಳಸದೆ ಇದ್ದರೆ ಆ ಜನರು ಕರ್ತವ್ಯಹೀನರೆಂದು ಹೇಳಬೇಕಾಗುತ್ತದೆಂದೂ ಅಭಿಪ್ರಾಯವು ಬರುತ್ತದೆ. ಪ್ರಯತ್ನದಿಂದ ಆದರೆ ಪಂಡಿತರಾಗಬಹುದೇಹೊರತು ಕವಿಗಳಾಗ

ವುದು ಸಾಧ್ಯವಲ್ಲ; ಶಾಸ್ತ್ರಗಳಲ್ಲಿ ಘನವಿದ್ವಾಂಸರಾಗಿದ್ದರೂ ಒಂದು ಶ್ಲೋಕವನ್ನೂ ಬರೆಯಲಾರದೆ ಶುಷ್ಕರೆಂಬ ದೂಷಣೆಗೆ ಈಡಾದ ಎಷ್ಟೋ ಜನರಿದ್ದಾರೆ. ಅಲ್ಲದೆ ರಾಜಕೀಯ ಮುಂತಾದ ಬಾಹ್ಯಚರಿತ್ರೆಯು ಸಮಯಾನುಸಾರವಾಗಿ ಸಾಮಗ್ರಿಯನ್ನು ಮಾತ್ರ ಹೇಗೆ ಒದಗಿಸಿ ಕೊಡಬಲ್ಲುದೋ ಮತ್ತು ಕಾವ್ಯಕ್ಕೆ ಮೂಲಕಾರಣವಾಗಲಾರದೋ ಹಾಗೆ ಬಾಹ್ಯವಾದ ಜನಾಂಗದ ಪರಿಸ್ಥಿತಿಯೂ ಒಂದು ಗಿಡಕ್ಕೆ ಕಸಿ ಮಾಡಿದಂತೆ ಅಥವಾ ಗೊಬ್ಬರ ಹಾಕುವಂತೆ ಸಹಾಯವಾಗಬಹುದೇ ಹೊರತು ಮೂಲ ಕಾರಣವಾಗುವುದಿಲ್ಲವೆಂಬುದು ನಮ್ಮ ಅಭಿಪ್ರಾಯ. ಪ್ರಕೃತಸ್ಥಿತಿಯಲ್ಲಿ ನಾವು ಉದ್ಯಮಶೀಲರಾಗದೆ ಪ್ರಯತ್ನ ಮಾಡದೆ ಅನೇಕ ವಿಚಾರಗಳಲ್ಲಿ ಹಿಂದೆ ಬಿದ್ದಿರುವುದು ನಿಜ; ಪುರುಷ ಪ್ರಯತ್ನದ ಅವಶ್ಯಕತೆಯನ್ನೂ ಬೆಲೆಯನ್ನೂ ನಾವು ಅರಿಯದೆ ಇಲ್ಲ; ಆದರೆ ಸಾರಸ್ವತ ಪ್ರಪಂಚದಲ್ಲಿ ಹುಟ್ಟುಗುಣವಿಲ್ಲದೆ ಪ್ರಯತ್ನಮಾಡುವುದು ಬರಿಯ ಕ್ಲೇಶ. ಭಗವಂತನು ಎರಡು ಕೈಗಳಿಂದಲೂ ಕವಿತಾಶಕ್ತಿಯನ್ನು ದಯಪಾಲಿಸಿರುವ ಶ್ರೀನಿವಾಸರಂಥವರು ಆ ಮಾತನ್ನು ಹೇಳುವುದು ಸ್ವಾಭಾವಿಕ.

## ಕಾವ್ಯದ ಫಲ ಮತ್ತು ಉದ್ದೇಶ

"ಕವಿಯು ಜನಾಂಗಕ್ಕೆ ರಾಗಸಂಸ್ಕಾರದಲ್ಲಿ ಗುರುವಾಗುವನು" ಎಂಬುದು ಒಪ್ಪತಕ್ಕ ಮಾತೇ. ಮಾನವನ ಸಣ್ಣ ಹೃದಯದಲ್ಲಿ ಮಹಾ ತರಂಗಗಳನ್ನು ಎಬ್ಬಿಸಿ ಅಲ್ಲೋಲಕಲ್ಲೋಲ ಮಾಡಿಬಿಡುವ ಮಹಾ ಕವಿಗೆ ಅಸಾಧ್ಯವಾದದ್ದೂ ಒಂದು ಉಂಟೇ? ಅಡ್ಡದಾರಿಯನ್ನು ಹಿಡಿದಿದ್ದ ಎಷ್ಟೋ ಜನರು ರಾಮಾಯಣ ಭಾರತ ಪಠನದಿಂದ ಉತ್ತಮಗೊಳ್ಳುತ್ತಿರುವುದನ್ನು ನಾವು ನೋಡಿದ್ದೇವೆ. "ನಾನೃಷಿಃ ಕುರುತೇ ಕಾವ್ಯಂ" ಎಂಬುದು ಹಿಂದೂಗಳ ಮತ; ಆದ್ದರಿಂದ ಮಹಾಕವಿಗಳು "ರಾಗ ಸಂಸ್ಕಾರ" ವಷ್ಟರಲ್ಲಿಯೇ ಅಲ್ಲ, ಸಾಮಾನ್ಯವಿಷಯಗಳಲ್ಲಿಯೂ ಪೂಜ್ಯರು; ಅವರನ್ನು ನಾವು ಸರ್ವಜ್ಞರೆಂದೇ ಭಾವಿಸಿ ಗೌರವಿಸುತ್ತೇವೆ; ವ್ಯಾಸ ವಾಲ್ಮೀಕಿಗಳು ಇದಕ್ಕೆ ಉದಾಹರಣೆ. ದಿವ್ಯದೃಷ್ಟಿ

ಯಿರತಕ್ಕವರು ತಮ್ಮ ತತ್ತ್ವಜ್ಞಾನವನ್ನು ಯಾವ ಕಡೆಗೆ ತಿರುಗಿಸಿದರೆ ಅಲ್ಲಿ ಅವರು ಮಹಾಪುರುಷರೆನ್ನಿಸಿಕೊಳ್ಳುವರು.

ಹೀಗೆ 'ರಾಗಸಂಸ್ಕಾರ'ವು ಸತ್ಕಾವ್ಯಗಳ ಫಲವಾಗುವುದೆಂಬುದು ನಿರ್ವಿವಾದವೂ ಪ್ರಮಾಣಸಿದ್ಧವೂ ಅನುಭವಸಿದ್ಧವೂ ಆಗಿದೆ. ಆದರೆ ಕಾವ್ಯಗಳ ಉದ್ದೇಶವೇನು? ಎಂದರೆ, ಕವಿಯು ಕಾವ್ಯಗಳನ್ನು ಬರೆಯುವನೇಕೆ? ಭಾವಾತಿಶಯದಿಂದ ಬರುವ ಆವೇಶವೆಂಬುದು ಒಂದು –ಆಗ ಕವಿಯು ಕೈಮೀರಿ ಅದು ಉಕ್ಕಿಹೋಗುವುದು ಎಂದು ಭಾವ; ಇದರಿಂದ ಅವನಿಗೆ ಸುಖವಾಗಬಹುದು; ಇದು ಕವಿಯ ಮಾತಾಯಿತು; ಅವನು ತನ್ನ ಕಾವ್ಯವನ್ನು ಓದಿ ಜನರು ಆನಂದವನ್ನು ಅನುಭವಿಸಿ ಸುಖಪಡಲಿ ಎಂದು ಬರೆಯುವನೇ, 'ರಾಗಸಂಸ್ಕಾರಾದಿ'ಗಳ ಮೂಲಕ ಶ್ರೇಯಸ್ಸನ್ನು ಪಡೆಯಲಿ ಎಂದು ಬರೆಯುವನೇ? ಈ ವಿಚಾರವು ಮುಂದೆ ಒಂದು ಭಾಗದಲ್ಲಿ ವಿಸ್ತಾರವಾಗಿ ಬರುತ್ತದೆ. ಆದರೆ ಈ ಭಾಗದಲ್ಲಿನ "ಚಿತ್ರಕಲೆಯು ಚಿತ್ರದಿಂದಲೂ ಶಿಲ್ಪವು ವಿಗ್ರಹದಿಂದಲೂ ತರುವ ಸುಖವನ್ನೂ ಜ್ಞಾನವನ್ನೂ ಸಾಹಿತ್ಯವು ಮಾತಿನಿಂದ ತಿಳಿಸುತ್ತದೆ." ಎಂಬ ವಾಕ್ಯದಿಂದ ಕಾವ್ಯದ ಉದ್ದೇಶವು ಆನಂದವೆಂಬುದು ಸೂಚಿತವಾಗುವುದು.

ಈ ಉಪನ್ಯಾಸದಲ್ಲಿ ಪ್ರಾಸಂಗಿಕವಾಗಿ ಜೀವನದ ಸ್ವರೂಪ ಮತ್ತು ಉದ್ದೇಶ, ಕವಿಯು ಪರಮಾತ್ಮನನ್ನು ಅರಿಯಬಹುದಾದ ರೀತಿ, ಸಾಹಿತ್ಯದಲ್ಲಿ ಕವಿಸಮಯಕ್ಕೆ ಇರುವ ಸ್ಥಾನ, ಬರೆದ ವಿಷಯಗಳನ್ನೇ ಕುರಿತು ಬರೆಯುವುದರ ಔಚಿತ್ಯ, ಗ್ರಂಥದ ಉಪಯೋಗಶಂಕೆ, ಕಾವ್ಯಚೌರ್ಯ ಮುಂತಾದ ಸಂಗತಿಗಳೂ ಬಂದಿವೆ. ಇವುಗಳ ವಿಚಾರವಾಗಿ ಒಂದೊಂದು ಮಾತನ್ನು ಹೇಳಬಹುದು:—"ಪರಮಾತ್ಮವು ಸಚ್ಚಿದಾನಂದ ಸ್ವರೂಪ . . . ಪರಮಾತ್ಮಾಂಶವಾದ ಅಣುಮಾತ್ರಕ್ಕೆ ಆಕರನಾಗಿರುವ ಮನುಷ್ಯನಲ್ಲೂ ಈ ಮೂರು ಅಂಗಗಳು ಸೇರಿವೆ. ಇರವೂ ಅರಿವೂ ಆನಂದವೂ ಮನುಷ್ಯನ ಜೀವನದ ಮುಖ್ಯ ತತ್ವಗಳು. ಈ ಮೂರನ್ನೂ ಸಾಧಿಸುವುದಕ್ಕೆ ಮನುಷ್ಯನಿಗೆ ಬುದ್ಧಿಯನ್ನೂ ರಾಗಗಳನ್ನೂ ಸಲಕರಣೆಗಳನ್ನಾಗಿ ಕೊಟ್ಟಿದೆ." ಇವುಗಳಲ್ಲಿ "ಇರವೂ ಅರಿವೂ ಆನಂದ

ದಿಂದಲೇ ಸಫಲ." ಆದ್ದರಿಂದಲೇ ಮನುಷ್ಯನ ಸರ್ವಪ್ರವೃತ್ತಿಯೂ ಸುಖವನ್ನೇ ಉದ್ದೇಶ್ಯವಾಗಿಟ್ಟುಕೊಂಡಿದೆ.

ಇಲ್ಲಿ ಗ್ರಂಥಕರ್ತರು ಭಾರತೀಯ ಮತ್ತು ಪಾಶ್ಚಾತ್ಯ ದಾರ್ಶನಿಕ ಮತಗಳನ್ನೂ ಸ್ವಾನುಭವವನ್ನೂ ಸೇರಿಸಿ ಬಿಟ್ಟಿದ್ದಾರೆ. ಇದು ಭಕ್ತಿ ಮಾರ್ಗಾನುಯಾಯಿಗಳಿಗೆ ಸಮ್ಮತವಾಗುವ ಹಾಗೆ ಇತರರಿಗೆ ಆಗಲಾರ ದೆಂದು ತೋರುತ್ತದೆ. ಅಲ್ಲದೆ ಈ ಮೂರು ಅಂಶಗಳೂ ಮನುಷ್ಯನಲ್ಲಿ ಆಗಲೇ ಇರುವಾಗ ಅವುಗಳನ್ನು ಬುದ್ಧಿರಾಗಳ ಮೂಲಕ ಹೊಸದಾಗಿ ಸಾಧಿಸಬೇಕಾದದ್ದು ಏಕೆ? ರೂಪವನ್ನು ನೋಡಿ ಅನುಭವಿಸುವುದಕ್ಕೆ ಕಣ್ಣು ಹೇಗೋ ಸಂಗೀತವನ್ನು ಕೇಳಿ ಸುಖಪಡುವುದಕ್ಕೆ ಕಿವಿ ಹೇಗೋ ಹಾಗೇ ಇವು (ಬುದ್ಧಿರಾಗಗಳು) ಕರಣಗಳೆಂದು ಅಭಿಪ್ರಾಯಪಟ್ಟರೆ— ಮನುಷ್ಯನು ತನ್ನಲ್ಲಿ ಇರುವುದನ್ನು ಅನುಭವಿಸಿ ಸುಖಪಡಲಿ; "ತನ್ನ ಜೀವನವು ಅನಂತವಾಗಬೇಕು, ಅದು ಅನಂತವಾದ ಸುಖದಿಂದ ಕೂಡಬೇಕು" ಎಂಬ ಆಸೆಯೇಕೆ?—ಎಂದು ಮುಂತಾದ ಆಕ್ಷೇಪಣೆ ಗಳು ಈ ಮತದ ಮೇಲೆ ಹುಟ್ಟುವುವು. ಮತ್ತು "ಕವಿಯು ಹಾಗೆ ಪರಮಾತ್ಮನ ವ್ಯಕ್ತಸೌಂದರ್ಯದ ಸ್ವರೂಪವನ್ನು ವರ್ಣಿಸುವುದರ ಮೂಲಕ ಆಸೌಂದರ್ಯದ ತಿಳಿವನ್ನು ಹೆಚ್ಚಿಸಿಕೊಂಡು ತನ್ನ ಅನುಭವ ಸಾಮ್ರಾಜ್ಯವನ್ನು ವಿಸ್ತಾರಗೊಳಿಸುತ್ತಾನೆ. . . . ಸುಂದರವಾದ ಈ ಪ್ರಪಂಚದಲ್ಲಿ ನಮ್ಮನ್ನು ಹಿಡಿದಿರುವ ಪರಮಾತ್ಮನನ್ನು ಸ್ವಲ್ಪ ಸ್ವಲ್ಪ ವಾಗಿ ತಿಳಿದು ಕೊನೆಗೆ ತನ್ನದಾಗಿ ಪಡೆಯುವನು" ಎಂಬುದೂ ಸರ್ವಸಮ್ಮತವಾಗಿರಲಾರದು. ಹಾಗಾದರೆ ಮಹಾಕವಿಗಳು ತತ್ತ್ವ ಜ್ಞಾನಿಗಳಾಗುವುದಿಲ್ಲವೇ?—ಎಂದು ಕೇಳಬಹುದು. ಅದು ನಮ್ಮ ಅಭಿಪ್ರಾಯವಲ್ಲ; ಮಹಾಕವಿಗಳು ಋಷಿಸಮಾನರೆಂದು ಹಿಂದೆಯೇ ಹೇಳಿದ್ದೇವೆ. ಅವರಿಗೆ ಪರಮಾತ್ಮಾನುಭವವು ಆಗುವುದು ಸುಲಭ; ಆದರೆ ಅವರ ಮಾರ್ಗವು ಕೇವಲ "ವ್ಯಕ್ತಸೌಂದರ್ಯ"ದ ಅಭಿಧ್ಯಾನವಲ್ಲ.

ಅಲ್ಲದೆ ಪ್ರಪಂಚದಲ್ಲಿ "ವ್ಯಕ್ತಸೌಂದರ್ಯ"ವನ್ನು ಅನುಭವಿಸುವ ಪುಣ್ಯವು ಅನೇಕ ಕವಿಗಳ ಪಾಲಿಗೆ ಬಂದಿರುವುದಿಲ್ಲ; ಅಂಥವರಿಗೆ

ದೇವರು ಬಲತಾಯಿಯಂತೆ ಅನುಭವಕ್ಕೆ ಬರುವನು ; ಅವರಲ್ಲಿ ಹೃದಯವು ಹಿಂಡಿ "ಶೋಕವೇ ಶ್ಲೋಕವಾಗುತ್ತದೆ." ಅನೇಕವೇಳೆ ಇಂಗ್ಲಿಷ್ ಕವಿಯೊಬ್ಬನು ಹೇಳಿರುವಂತೆ

Our sincerest laughter
With some pain is fraught:
Our sweetest songs are those that tell of saddest thought

ಇಂಥ ಕವಿಗಳಿಗೆ ಪರಮಾತ್ಮನ ಅನುಭವವಾಗುವುದಿಲ್ಲವೆಂದು ಹೇಳಬೇಕು, ಇಲ್ಲದಿದ್ದರೆ ಸೌಂದರ್ಯದ ಅನುಭವ ಮತ್ತು ವರ್ಣನೆಗಳಿಂದ ಮಾತ್ರವೇ ಅಲ್ಲದೆ ಸುಖ ದುಃಖ ಮೋಹಾತ್ಮಕವಾದ ಯಾವುದನ್ನೇ ಆಗಲಿ ಒಳಹೊಕ್ಕು ನೋಡುತ್ತ ಹೋದರೆ ಕೊನೆಗೆ ಪರಮಾತ್ಮನ ಅನುಭವವಾಗುತ್ತದೆಂದು ಹೇಳಬೇಕು.

ಶ್ರೀನಿವಾಸರ ಹಾಡು ಕತೆ ನಾಟಕ ಮುಂತಾದ ಕಾವ್ಯಗಳನ್ನು ಓದಿದರೆ ಅವರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ನೂತನ ರೀತಿ ಪಕ್ಷಪಾತಿಗಳೆಂದೂ ನೂತನ ರೀತಿನಿರ್ಮಾಪಕರೆಂದೂ ಯಾರಿಗಾದರೂ ತೋರಿಬರುವುದು; ಇಂಥವರಲ್ಲಿ ಪ್ರಬಲವಾದ ಕವಿಸಮಯ ಪಕ್ಷಪಾತವು ಯಾರಿಗಾದರೂ ಆಶ್ಚರ್ಯವನ್ನುಂಟುಮಾಡತಕ್ಕದ್ದೇ ಸರಿ ; "ಕವಿಸಮಯ" ಶಬ್ದಕ್ಕೆ ಲಕ್ಷಣ ಗ್ರಂಥಕಾರರು ಕೊಟ್ಟಿರುವ ಅರ್ಥವನ್ನು ಒಪ್ಪಿಕೊಂಡರೆ "ಕವಿಸಮಯವೆನ್ನುವುದು ಹೆಚ್ಚಿದಷ್ಟೂ ಜನರಲ್ಲಿ ರಸಿಕತೆಯ ಸಾಮಗ್ರಿ ಹೆಚ್ಚಿತೆಂದು ಹೇಳಬಹುದು" "ಕವಿಸಮಯವು ಜನರಲ್ಲಿ ವಾಡಿಕೆಯಾದಷ್ಟೂ ಒಳ್ಳೆಯದೆ" ಎಂಬ ಸಿದ್ಧಾಂತವನ್ನು ನಾವು ಒಪ್ಪಲಾರೆವು. "ಚಳಿಯೊಡ್ಡು ಜಾರೆ...." ಎಂದು ವಸಂತಾಗಮದ ವರ್ಣನೆಯನ್ನು ಬರೆದವನ "ಮನಸ್ಸು ಸರ್ವದಾ ಸ್ಫುರವಾಗಿರಬೇಕು. ಅವನ ಸರ್ವೇಂದ್ರಿಯಗಳೂ ಈ ಪ್ರಪಂಚದ ವಿವಿಧ ಸೌಂದರ್ಯವನ್ನು ತಿಳಿಯುತ್ತಿದ್ದಿರಬೇಕು" ಎಂಬ ತೀರ್ಮಾನವನ್ನು ನಾವು ಒಪ್ಪಲಾರೆವು ; "ನಗೆಮೊಗಮಿಂದುವಂ ನಗೆ ಕುರುಳ್ ಮುಗಿಲಂ ನಗೆ ಶಂಖಮಂ ಗಳಂ ........" ಎಂಬ ಪದ್ಯಕ್ಕಿಂತಲೂ ಸುಂದರವಾದ ವರ್ಣನೆಯನ್ನು ಕವಿಸಮಯದ ಬಾಧೆಯಿಲ್ಲದ ಕಾವ್ಯದಲ್ಲಿಯಾಗಲಿ ತೋರಿಸುವುದು ಯಾರಿಗೂ

ಸುಲಭವಲ್ಲ, ಎಂಬುದನ್ನು ಒಪ್ಪಲಾರೆವು. ನಿಷ್ಪಕ್ಷಪಾತವಾಗಿ ಹೇಳ ಬೇಕೆಂದರೆ ಪ್ರಾಚೀನ ಕಾವ್ಯಗಳಲ್ಲಿ "ಕವಿಸಮಯದ ಬಾಧೆ" ಯು ಸಹಿಸಲಾರದಷ್ಟಾಗಿದೆ; ಕವಿಶಿಕ್ಷೆಯನ್ನು ಬೋಧಿಸುವ ಗ್ರಂಥಗಳಲ್ಲಿ ಕೊಟ್ಟಿರುವ ವರ್ಣನಾಂಶಗಳು ಉಪಮಾನಗಳು ಮುಂತಾದವುಗಳ ಪಟ್ಟಿಗಳನ್ನು ಬಾಯಿಪಾಠ ಮಾಡಿ ಒಪ್ಪಿಸಿದ ಕವಿಬ್ರುವರ "ಕವಿತೆ" ಗಳು ನಮ್ಮ ತಲೆ ಚಿಟ್ಟು ಹಿಡಿಸಿವೆ. ಆದ್ದರಿಂದ "ನಗೆ ಮೊಗ ಮಿಂದುವಂ ........" ಎಂಬಂಥ ಪದ್ಯವು ಶಾನುಭೋಗರ ತಖ್ತೆಯಂತೆ ನಮಗೆ ತೋರುತ್ತದೆ; ಕವಿಸಮಯದ ಬಾಧೆಯಿಲ್ಲದ "ಎಣಿಸೆ ನಖಂಗಳಿಂ ದುಡಿಯದಿರ್ದ ಚಿಗುರ್" ಮುಂತಾದ ಪದ್ಯಗಳು ಜ್ಞಾಪಕಕ್ಕೆ ಬರು ತ್ತವೆ. ಮೇಲಿನ ಪದ್ಯದಲ್ಲಾಗಲಿ "ನದೀ ನದ ವಿಶೇಷದಿಂ........" ಎಂಬ ಪದ್ಯದಲ್ಲಾಗಲಿ ಇರುವ ರಮಣೀಯತೆಗೆ ಈ ಕವಿಸಮಯ ವಾಗಲಿ ಅರ್ಥಸಂಪತ್ತಾಗಲಿ ಕಾರಣವಲ್ಲ—ಅವುಗಳಲ್ಲಿರುವ ವರ್ಣ ಸ್ವರೂಪ ಪದಗುಂಫನ ಶೈಲಿ ಮುಂತಾದವುಗಳು ಕಾರಣ.

"ಹಿಂದಿನವರು ಬರೆದದ್ದನ್ನೇ ಬರೆದರು ಎನ್ನುವುದು ಸಾಧು ವಾದ ಆಕ್ಷೇಪವಲ್ಲ" ಏಕೆಂದರೆ "ಬರೆಯುವುದು ಬರೆಯುವನ ಸಂಸ್ಕಾರ ಕ್ಕಾಗಿಯೂ ಜನಾಂಗದ ಸಂಸ್ಕಾರಕ್ಕಾಗಿಯೂ" ಆಗಿದೆ. ಅಲ್ಲದೆ "ಮಕ್ಕಳನ್ನು ಹೆತ್ತು ಸಾಕಿ ಆಗಬೇಕಾದ ಸಂಸ್ಕಾರವು ಸಾಮಾನ್ಯ ಮನುಷ್ಯನಿಗೆ ಹೇಗೆ ಆವಶ್ಯಕವೋ ಹಾಗೆ ಗ್ರಂಥಗಳನ್ನು ಬರೆಯುವ ಸಂಸ್ಕಾರವು ಪ್ರತಿ ತಲೆಮಾರಿಗೂ ಪ್ರತಿ ಜನಾಂಗಕ್ಕೂ ಬೇಕು" ಎಂದು ಶ್ರೀನಿವಾಸರು ಹೇಳುತ್ತಾರೆ. ಇಲ್ಲಿ ಬರೆಯುವ ಸಂಸ್ಕಾರಕ್ಕಿಂತಲೂ ಓದುವ ಸಂಸ್ಕಾರವು ಬೇಕು ಎಂದು ಹೇಳಿದರೆ ಹೆಚ್ಚು ನಿಜವಾಗುವು ದೆಂದು ನಮಗೆ ತೋರುವುದು. ಬರೆಯುವ ಸಂಸ್ಕಾರವೂ ಬೇಕಾಗಿದ್ದಿರ ಬಹುದು; ಆದರೆ ಭಗವಂತನು ಪ್ರಾಣಿಗಳಿಗೆ ಮಕ್ಕಳು ಪಡೆಯುವುದಕ್ಕೆ ಬೇಕಾದ ಶಕ್ತಿಯನ್ನು ಕೊಟ್ಟಿರುವಷ್ಟು ಧಾರಾಳವಾಗಿ ಕವಿತಾ ಶಕ್ತಿ ಯನ್ನು ಕೊಡಲಿಲ್ಲ. ಜನಸಾಮಾನ್ಯರು ಮದುವೆಯಾಗಿರುವ ಪ್ರತಿಭಾ ಜಾತಿಯಲ್ಲಿ ಬಂಜೆಯರೇ ಹೆಚ್ಚು. ಪ್ರತಿಯೊಂದು ಗಿಡವೂ ತನಗೆ ಸಂಸ್ಕಾರವಾಗಬೇಕೆಂದು ಮುಕ್ಕಿರಿದಾದರೂ ಹಣ್ಣು ಬಿಡಬೇಕೆಂದರೆ.

ಸಾಧ್ಯವೇ ? ಅಲ್ಲದೆ ಈಗ, ತಮಗೆ ಕವಿತಾಶಕ್ತಿ ಇದೆ ಎಂಬ ಭ್ರಾಂತಿಯಿಂದ ನೀರಸವಾದ ಕಗ್ಗಗಳನ್ನು ಬರೆದು ಪಾಠಕರನ್ನು ಪೀಡಿಸುತ್ತಿರುವವರೇ ಬಹಳವಾಗಿದ್ದಾರೆ. ಇಂಥ ಸಂದರ್ಭದಲ್ಲಿ ಪ್ರತಿಯೊಬ್ಬನೂ ಬರೆಯುವ ಸಂಸ್ಕಾರವನ್ನು ಆವಶ್ಯಕವಾಗಿ ಪಡೆಯಲೇಬೇಕೆಂಬ ವಾದವನ್ನು ಒಪ್ಪಿಕೊಂಡು ಬರೆಯುವುದಕ್ಕೆ ಹೊರಟರೆ ಆಗ ಅಕ್ಷರ ಕಲಿತವರ ಸ್ಥಿತಿಯು ಬಲು ಶೋಚನೀಯವಾಗುವುದು.

ರಾಮಾಯಣ ಭಾರತಾದಿ ಕಥೆಗಳ ಮೇಲೆ ಕಾವ್ಯಗಳನ್ನು ಬರೆಯುವುದರ ಔಚಿತ್ಯದ ವಿಚಾರವಾಗಿ ಶ್ರೀನಿವಾಸರು ಹೇಳುವುದನ್ನು ನಾವೂ ಒಪ್ಪುವೆವು. ಈ ಭಾಗವು ಬಹು ರಸವತ್ತಾಗಿಯೂ ಉತ್ಸಾಹಪೂರ್ಣವಾಗಿಯೂ ಇದೆ. ರಾಮಾಯಣ ಭಾರತಗಳನ್ನು ನೆನೆಸಿಕೊಂಡರೆ ಯಾರಿಗಾದರೂ ಆಗತಕ್ಕದ್ದು ಹಾಗೆ ತಾನೆ. ಇದೇ ಶ್ರೇಷ್ಠವಾದ ಸಾಹಿತ್ಯಕ್ಕೆ ಹೆಗ್ಗುರುತು. ವ್ಯಾಸ ವಾಲ್ಮೀಕಿಗಳು ಈ ಗ್ರಂಥಗಳನ್ನು ಬರೆದು ಕಾಳಿದಾಸ ಮುಂತಾದ ಕವಿಶ್ರೇಷ್ಠರನ್ನು ಕೊಂಡುಕೊಂಡು ಬಿಟ್ಟಿದ್ದಾರೆ. ಇನ್ನು ನಮ್ಮಂಥವರ ಮಾತೇನು ? ಆದ್ದರಿಂದಲೇ " ಸಿಹಿ " ಎಂದರೆ ಅದಕ್ಕೆ ಆಶ್ರಯವಾಗಿ ಸಕ್ಕರೆಯು ಜ್ಞಾಪಕಕ್ಕೆ ಬರುವಂತೆ ಕಾವ್ಯಸಾಮಗ್ರಿಯೆಂದರೆ ಹಿಂದಿನವರಿಗೆ ಈ ಮಹಾಕಾವ್ಯಗಳು ಜ್ಞಾಪಕಕ್ಕೆ ಬರುತ್ತಿದ್ದುವು. ಇವುಗಳಲ್ಲಿ ಬರುವಂಥ ಕೆಲವು ಸನ್ನಿವೇಶಗಳೂ ಪಾತ್ರಗಳೂ ಪ್ರಪಂಚದ ಮತ್ತೆ ಯಾವ ಸಾಹಿತ್ಯದಲ್ಲೂ ಬರುವುದಿಲ್ಲವೆಂದು ಧಾರಾಳವಾಗಿ ಹೇಳಬಹುದು. ಆದ್ದರಿಂದ ಇವು " ಅವರ ರಾಗ ಸಂಸ್ಕಾರಕ್ಕೆ " ಮಾತ್ರವೇ ಅಲ್ಲ, ಒಂದು ವಿಧದಲ್ಲಿ ಎಲ್ಲರ ರಾಗ ಸಂಸ್ಕಾರಕ್ಕೂ ಸಾಕಾಗುವುವು. ದೇಶ ಕಾಲ ಭೇದಗಳನ್ನನುಸರಿಸಿ ಬೇಕಾಗಬಹುದಾದ ಪದಾರ್ಥ ವಿಶೇಷಗಳನ್ನು ಬಿಟ್ಟು ಪ್ರಾಣಧಾರಣೆಗೆ ಬೇಕಾದ ಸಾಮಗ್ರಿಯು ಅನ್ನ ನೀರುಗಳಲ್ಲಿರುವಂತೆ ಮಾನವ ಹೃದಯದ ಹಸಿವು ತೃಷೆಗಳನ್ನು ತೃಪ್ತಿಪಡಿಸುವ ಸಾಮಗ್ರಿಯು ಅವುಗಳಲ್ಲಿ ಹೇರಳವಾಗಿ ದೊರಕುತ್ತದೆ. ಆದರೆ ಅವುಗಳನ್ನು ಅಥವಾ ಅವುಗಳ ಭಾವಗಳನ್ನು ತೆಗೆದುಕೊಂಡು ನೀರಸವಾಗಿ ಬರೆದರೆ ಅಂಥವುಗಳನ್ನು ಏಕೆ ಬರೆಯುವರೆಂಬ ಆಕ್ಷೇಪಣೆಯು ಬಂದೇಬರುವುದು, ಬರಲೇ

ಬೇಕು; ಮತ್ತು ಕಾಲಕ್ರಮದಲ್ಲಿ ಅಂಥ ಕಾವ್ಯಗಳು ಅದೃಶ್ಯವಾಗುವುದೂ ಸಹಜ; ಮಹಾಭಾರತ ರಾಮಾಯಣಗಳಿಗಿಂತಲೂ "ಮೇಘ ಸಂದೇಶ" ವನ್ನು ಅನುಸರಿಸಿ ಬರೆದ ಸಂದೇಶಕಾವ್ಯಗಳ ಸ್ಥಿತಿಯನ್ನು ಪರಿಶೀಲಿಸಿ ನೋಡಿದರೆ ಇದರ ತತ್ತ್ವವು ಚೆನ್ನಾಗಿ ಗೊತ್ತಾಗುವುದು.

ಇದರಿಂದ ಬರೆದ ಕಾವ್ಯಗಳೆಲ್ಲವೂ ಆದರಣೀಯವಾಗಲಾರವೆಂಬುದೂ "ಇದರ ಉಪಯೋಗವೇನು?" ಎಂದು ಆಕ್ಷೇಪಿಸುವುದು ಇಂಥ ಸಂದರ್ಭದಲ್ಲಿ ನ್ಯಾಯುವೆಂಬುದೂ ಸ್ಪಷ್ಟವಾಗಿದೆ. ಬರಿಯ "ಧೋರಣೆಯಿಂದ" ಆಡುವವರ ಮಾತನ್ನು ಯಾವಾಗಲೂ ಗಣನೆಗೆ ತರಬೇಕಾಗಿಲ್ಲ. ಆದರೆ "ಬರೆದ ಪುಸ್ತಕ ಯಾರಿಗಾದರೂ ಉಪಯೋಗಕ್ಕೆ ಬರಬಹುದು" ಎಂದು ಹೊರಕ್ಕೆ ಬಂದ ಪುಸ್ತಕಗಳನ್ನೆಲ್ಲಾ ಮೆಚ್ಚುವುದಕ್ಕಾಗುತ್ತದೆಯೇ? ಕೆಲವು ಗ್ರಂಥಗಳು "ವೇಷದ ಮಾತಲ್ಲ"ದೆ "ನಿಜವಾದ ಮಾತೇ" ಆಗಿದ್ದರೂ ಅವು ಪಸಾರೆಯ ಅಂಗಡಿಗೆ ಮಾತ್ರ "ಉಪಯೋಗಕ್ಕೆ ಬರಬಹುದು." ಹೀಗೆಂದು ಪಸಾರೆಯ ಅಂಗಡಿಯ ಉಪಯೋಗಕ್ಕಾಗಿ ಗ್ರಂಥಗಳನ್ನು ಬರೆಯುವುದು ನ್ಯಾಯುವೇ? ಬರಿದರೆ ಅಂಥವುಗಳನ್ನು ಆಕ್ಷೇಪಿಸದಿರುವುದಕ್ಕಾಗುವುದೋ? ಆಕ್ಷೇಪಿಸಿದರೆ ತಪ್ಪಾಗುವುದೊ? ಕವಿಯು ತನ್ನ ತನ್ನ ಶಕ್ತಿಸಾಮರ್ಥ್ಯ ಅಭಿರುಚಿಗಳನ್ನನುಸರಿಸಿ ತಾನು ಆವಶ್ಯಕವಾಗಿ ಬರೆಯಬೇಕಾಗುವ ಗ್ರಂಥಗಳನ್ನು ಬರೆಯುವನೋ, ಉದ್ದೇಶಪೂರ್ವಕವಾಗಿ ಇದು ಇಂಥವರ ಉಪಯೋಗಕ್ಕೆ ಇದು ಅಂಥವರ ಉಪಯೋಗಕ್ಕೆ ಎಂದು ಮೊದಲೇ ನಿಷ್ಕರ್ಷೆ ಮಾಡಿಕೊಂಡು—ಬಟ್ಟೆಯ ಯಂತ್ರವು ಬೇರೆ ಬೇರೆ ಅಳತೆಗಳ ಪಂಚೆಗಳನ್ನು ನೇಯುವಂತೆ—ಬರೆಯುವನೋ? ಹಾಗಿದ್ದರೆ ಉದ್ದಿಷ್ಟರಾದವರು ಓದಿಯೇ ಓದುತ್ತಾರೆ; ಹಾಗೆ ಅವರು ಓದಲಿ ಬಿಡಲಿ, ಮಿಕ್ಕವರು ಅವುಗಳನ್ನು ಅಲಕ್ಷ್ಯಮಾಡಿದರೆ ಕವಿಯು ಅಂಥವರಲ್ಲಿ ಅಸಮಾಧಾನವನ್ನು ತೋರಿಸುವುದು ಅನ್ಯಾಯವಾಗುವುದು. ಆದರೆ "ದೇವದೇವನ ಮಾಯೆಯ ಮೂಲತಂತ್ರವನ್ನು ತಿಳಿಯಲು ಯತ್ನಮಾಡುತ್ತಿರುವ ಕವಿಯು ಈ ಮಾತಿನಿಂದ ಉಪಯೋಗವುಂಟು, ಈ ಮಾತಿನಿಂದ ಉಪಯೋಗವಿಲ್ಲ" ಎಂದು ತಿಳಿಯಬಲ್ಲನು; ಅಷ್ಟೇ ಅಲ್ಲ; ಅಂಥ

ಮಹಾಕವಿಯ ಕವಿತೆಗಳಲ್ಲಿ ಆಕ್ಷೇಪ ತೆಗೆಯುವ ಶಕ್ತಿ ಯಾರಿಗಿದೆ? ಬರುವ ಕಷ್ಟವೆಲ್ಲಾ ನರಕವಿಗಳ ವಿಚಾರದಲ್ಲಿ.

ಸಾಹಿತ್ಯದಲ್ಲಿ ಅನೇಕ ವೇಳೆ ಪರಸ್ಪರ ಸಾದೃಶ್ಯವಿರುವುದುಂಟು— ಇದು ಸ್ವತಂತ್ರವಾಗಿರಬಹುದು; ಅಥವಾ ಒಂದರಿಂದ ಮತ್ತೊಂದು ಉಪಕೃತವಾಗಿ ಬಂದದ್ದಿರಬಹುದು. ಈ ಎರಡನೆಯ ಸಂದರ್ಭದಲ್ಲಿ ಕವಿಗೆ ಅಪಕರ್ಷವೇ?—ಎಂಬುದು ಒಂದು ವಿಚಾರ. "ಹೀಗೆ ಬಂದಿರುವ ಭಾವದ ಮೂಲವನ್ನು ಹುಡುಕಿ ನಿರ್ಧರಿಸುವೆನೆನ್ನುವವನು ಒಂದು ಹೂವಿನ ಇಷ್ಟು ಭಾಗವು ತನ್ನ ಗಾಡಿಯಲ್ಲಿ ತಂದ ಗೊಬ್ಬರದಿಂದ ಬಂದಿತೆಂದು ಹೇಳುವವನಂತಾಗುವನು; ಹೇಳಿರುವುದು ಸರಿಯೇ ಎಂಬ ಸಂದೇಹಕ್ಕಲ್ಲದೆ ಸರಿಯಾದರೆ ತಾನೆ ಏನು ಎಂಬ ಆಕ್ಷೇಪಕ್ಕೂ ಅವನು ಒಳಗಾಗುವನು" ಎಂದು ಇಂಥ ವಿಮರ್ಶಕರ ವಿಚಾರವಾಗಿ ಶ್ರೀನಿವಾಸರು ಒಂದು ವಿಧವಾದ ಅಸಹನವನ್ನು ತೋರಿಸುವರು. ಕವಿಯ ಶಕ್ತಿ ಸಾಮರ್ಥ್ಯಗಳನ್ನು ತೂಗುವುದಕ್ಕೆ ಹೊರಡುವವನು ಇಂಥ ಕೆಲಸಮಾಡಬೇಕಾಗುವುದು.—ಇದು ಬೂದಿಯ ಗೊಬ್ಬರ ಹಾಕಿ ಬೆಳೆಸಿದ್ದು, ಇದು ಕುದುರೆಯ ಗೊಬ್ಬರ ಹಾಕಿ ಬೆಳೆಸಿದ್ದು, ಆದ್ದರಿಂದ ಈ ಹೂಗಳಲ್ಲಿ ಒಂದು ಸುಮಾರಾಗಿಯೂ ಮತ್ತೊಂದು ಹೊರವಾಗಿಯೂ ಇದೆ, ಗೊಬ್ಬರವೇ ಹಾಕದಿದ್ದರೆ ಈ ಭೂಮಿಯಲ್ಲಿ ಬಿಡುತ್ತಿದ್ದ ಹೂವು ಪೀಚಾಗುತ್ತಿತ್ತು ಎಂದು ತೋಟಗಾರನು ಹೇಳುವ ಹಾಗೆ. ಇದರ ಹೊರವನ್ನು ನಿಷ್ಕೃಷ್ಟವಾಗಿ ಅಳೆಯುವುದಕ್ಕೆ ಸೂಕ್ಷ್ಮವಾದ ಯಂತ್ರಗಳಿಲ್ಲ, ಅಂಥ ಯಂತ್ರಗಳ ಆವಶ್ಯಕತೆಯೂ ಇಲ್ಲ. "ಸರಿಯಾದರೆ ತಾನೇ ಏನು" ಎಂಬುದು ಆಕ್ಷೇಪಣೆಯಲ್ಲವೇ? ಇದು ಪೂರ್ವಜನ್ಮದಿಂದ ತಂದದ್ದು, ಇದು ಈ ಜನ್ಮದಲ್ಲಿ ಸಂಪಾದಿಸಿದ್ದು, ಸಾಲ ತಂದದ್ದು ಅಥವಾ ಕಳವು ಮಾಡಿದ್ದು ಎಂದು ಗೊತ್ತಾಗುವುದು. ಈ ಅಂಶಗಳಿಂದ ಮನುಷ್ಯನ ಸತ್ತ್ವವೂ ಯೋಗ್ಯತೆಯೂ ನಿರ್ಣೀತವಾಗುವುದಿಲ್ಲವೇ?

ಮುಂದಿನ ಮೂರು ಉಪನ್ಯಾಸಗಳಲ್ಲಿ ವಿಪ್ರತಿಪತ್ತಿ ಇರಬಹುದಾದ ಅಂಶಗಳು ಕಡಿಮೆ; ಆದ್ದರಿಂದ ಅವುಗಳ ಮೇಲೆ ವಿಸ್ತಾರವಾದ

ವಿಚಾರವು ಅನಾವಶ್ಯಕ; ಅಲ್ಲದೆ ಮೊದಲ ಉಪನ್ಯಾಸದಲ್ಲಿ ಪರಿಚಿತ ವಾದ ವಿಷಯಗಳು ಅಲ್ಲಿಯೂ ಬಹುವಾಗಿ ತಲೆದೋರುವುದರಿಂದ ಮಿಕ್ಕ ಉಪನ್ಯಾಸಗಳನ್ನು ಸಂಕ್ಷೇಪವಾಗಿ ಅವಲೋಕನ ಮಾಡಿಬಿಡ ಬಹುದು.

ಎರಡನೆಯ ಉಪನ್ಯಾಸದಲ್ಲಿ ಬುದ್ಧಿ "ರಾಗ"ಗಳ ಸ್ವರೂಪ, ಸ್ವಭಾವ, ಕಾರ್ಯ, ಅವುಗಳಿಗೆ ಇರುವ ಪರಸ್ಪರ ಭೇದ, ಅವುಗಳಿಂದ ಆತ್ಮಕ್ಕೆ ಸಂಸ್ಕಾರವುಂಟಾಗುವ ಬಗೆ ಇವೆಲ್ಲಾ ವಿಸ್ತಾರವಾಗಿ ವಿವರಿಸ ಲ್ಪಟ್ಟಿವೆ. ಇವುಗಳ ವಿಸ್ತಾರ ವಿವರಣೆಯು ಸ್ವಲ್ಪಮಟ್ಟಿಗೆ ಆವಶ್ಯಕವೇ; ಏಕೆಂದರೆ ಮ|| ಶ್ರೀನಿವಾಸರು "ರಾಗ" ಶಬ್ದಕ್ಕೆ ಕೊಟ್ಟಿರುವ ಅರ್ಥವು ಅಪೂರ್ವವಾದದ್ದು; ಅದನ್ನು ಸ್ಪಷ್ಟವಾಗಿ ತಿಳಿದುಕೊಳ್ಳದಿದ್ದರೆ ಅವರ ಗ್ರಂಥದ ಬಹುಭಾಗವೇ ಅರ್ಥವಾಗಲಾರದು. ಈ ಉಪನ್ಯಾಸದ ಸಾರಾಂಶವೇನೆಂದರೆ:—

"ಆತ್ಮವು ಈ ಜೀವನದಲ್ಲಿ ಪಡೆಯಬೇಕಾದ ಸಂಸ್ಕಾರವನ್ನು" ಪಡೆಯುವುದಕ್ಕೆ ಬುದ್ಧಿಯೂ ರಾಗವೂ ಎರಡೂ ಸಾಧನಗಳು. ಈ "ರಾಗದ ಸಂಸ್ಕಾರಕ್ಕೆ ಸಾಹಿತ್ಯವು ಮುಖ್ಯ ಫಲವೂ ಮುಖ್ಯ ಸಾಧನವೂ" ಆಗಿದೆ. "ಬುದ್ಧಿಯು ಮನುಷ್ಯನಿಗೆ ಸರಿ ತಪ್ಪು ಎಂಬುದನ್ನು ತಿಳಿ ಯುವುದಕ್ಕಾಗಿ ಇರುವ ಸಾಧನವು. ರಾಗವರ್ಗವು ಮನುಷ್ಯನಿಗೆ ಕಷ್ಟಸುಖದ ಅನುಭವಕ್ಕಾಗಿ ಇರುವ ಸಾಧನವು." "ಮನುಷ್ಯನಿಗೆ ರಾಗಗಳೂ ಬುದ್ಧಿಯೂ ಎರಡೂ ಬೇಕು." ರಾಗವನ್ನು ಬುದ್ಧಿಯು ತಿದ್ದಬೇಕು; ಬುದ್ಧಿಯ ಫಲವನ್ನು ರಾಗವು ಪಡೆಯಬೇಕು. "ಬುದ್ಧಿಯ ಕೆಲಸವೆಲ್ಲ ಸಾರ್ಥಕವಾಗುವುದು ರಾಗದಿಂದಲೇ." ಬುದ್ಧಿಯ ಕೆಲಸ ವಾದ ಶಾಸ್ತ್ರಕ್ಕೆ ರಾಗದ ಕೆಲಸವಾದ ಸಾಹಿತ್ಯದಿಂದಲೇ ಸಫಲತೆ. ಆದರೆ "ರಾಗದ ತೃಪ್ತಿಯೂ ಬುದ್ಧಿಯ ತೃಪ್ತಿಯೂ ಒಂದೇ ಫಲಕ್ಕೆ ಸಾಧನ ಗಳು." ಏಕೆಂದರೆ "ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ." "ಬುದ್ಧಿಗೆ ಗೋಚರವಾದಾಗ ಸತ್ಯವೆಂದು ಕಾಣು"ವುದೇ "ರಾಗಕ್ಕೆ ಗೋಚರ ವಾದಾಗ ಸೌಂದರ್ಯವೆಂದು ಕಾಣುವುದು." ಇತ್ಯಾದಿ.

ನಮ್ಮ ಲಾಕ್ಷಣಿಕರು ವೇದ ಶಾಸ್ತ್ರ ಪುರಾಣ ಕಾವ್ಯ ಎಲ್ಲಾ ಒಂದೇ

ವಿಷಯವನ್ನು ಬೇರೆ ಬೇರೆ "ಸಂಮಿತಿ"ಯಿಂದ ಪ್ರತಿಪಾದಿಸುತ್ತವೆಂಬು ದಾಗಿ ಹೇಳಿದ್ದಾರೆಂದೂ ವೇದಶಾಸ್ತ್ರಾದಿಗಳಲ್ಲಿ ಬರದೇ ಇರತಕ್ಕ ಎಷ್ಟೋ ಸಂಗತಿಗಳು ಕಾವ್ಯಗಳಲ್ಲಿ ಬರುತ್ತವೆಂದೂ, ಪ್ರಾಚೀನ ಕಾವ್ಯಲಕ್ಷಣಗ ಳಲ್ಲಿ ದೋಷವನ್ನು ತೋರಿಸಿ ಮ|| ಶ್ರೀನಿವಾಸರು ಈ ಉಪನ್ಯಾಸವನ್ನು ಆರಂಭಿಸುತ್ತಾರೆ. ಇದನ್ನು ಸಮರ್ಥನ ಮಾಡಿರುವುದೂ ಸ್ವಲ್ಪ ವಿಚಿತ್ರ ವಾಗಿದೆ. ವೇದವು ಪ್ರಭುಸಮ್ಮಿತವೆಂದೂ, ಪುರಾಣಗಳು ಮಿತ್ರಸಮ್ಮಿ ತವೆಂದೂ, ಕಾವ್ಯವು ಕಾಂತಾಸಮ್ಮಿತವೆಂದೂ ಹೇಳಿದ ಪ್ರಾಚೀನರು ಅವುಗಳ ಪ್ರತಿಪಾದನ ಕ್ರಮಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಅವುಗಳಿಗೆ ಪರಸ್ಪರ ವ್ಯತ್ಯಾಸವನ್ನು ಹೇಳಿದರೇ ಹೊರತು ಅವುಗಳ ವಿಷಯೈಕ್ಯವನ್ನು ಸಾಧಿಸುವುದಕ್ಕೆ ಹೊರಟಹಾಗಿಲ್ಲ.

ಮುಂದೆ ಕೀಟ್ಸ್ ಕವಿಯ "ಸತ್ಯವೇ ಸೌಂದರ್ಯ, ಸೌಂದ ರ್ಯವೇ ಸತ್ಯ" ಎಂಬ ಸೂತ್ರಾರ್ಥವನ್ನು ವಿಸ್ತಾರವಾಗಿ ವಿಚಾರ ಮಾಡಿದ್ದಾರೆ. ಇಲ್ಲಿ "ಸತ್ಯ ಸೌಂದರ್ಯ ಎನ್ನುವ ಮಾತುಗಳಿಗೆ ಸಾಮಾನ್ಯವಾಗಿ ಎಲ್ಲರೂ ಒಪ್ಪುವ ಅರ್ಥವನ್ನಿಟ್ಟುಕೊಂಡು ಕವಿಯ ಮಾತನ್ನು ಸರಿ"ಯೆಂದು ಸಾಧಿಸುವುದಕ್ಕೆ ಆಗುತ್ತದೆಯೆ? ಸತ್ಯ ಸೌಂದ ರ್ಯಗಳು ವ್ಯಾವಹಾರಿಕದಶೆಯಲ್ಲಿ ಒಂದಲ್ಲವೆಂಬುದು ಎಲ್ಲರಿಗೂ ಕಾಣತ ಕ್ಕದ್ದೇ. ತತ್ತ್ವಜ್ಞಾನಿಯಾದ ಕವಿಯು, ಇವು ಪಾರಮಾರ್ಥಿಕ ದಶೆ ಯಲ್ಲಿ ಒಂದೇ ಎಂದು ಹೇಳಿದಂತಿದೆ—ದೀಪದಲ್ಲಿ ಬೆಳಕಾಗಿಯೂ ಒಲೆಯಲ್ಲಿ ಶಾಖವಾಗಿಯೂ ಉಪಾಧಿಭೇದದಿಂದ ಬೇರೆಬೇರೆಯಾಗಿ ಅನುಭವಕ್ಕೆ ಬರುವ ತೇಜಸ್ಸು ಒಂದೇ ಎಂದು ಹೇಳುವ ಹಾಗೆ. ವೇದಾಂತದಲ್ಲಿ ಪ್ರವೇಶವಿರತಕ್ಕವರಿಗೆ ಈ ಮತದಲ್ಲಿ ಪಕ್ಷಪಾತವಿಲ್ಲದಿರ ಲಾರದು. ಈ ಅರ್ಥವನ್ನು ಇಟ್ಟುಕೊಂಡರೆ "ಇದಿಷ್ಟನ್ನು ಮಾತ್ರ ನಾವು ಬಲ್ಲೆವು; ಇದರ ಮೇಲೆ ಇನ್ನೇನನ್ನೂ ತಿಳಿಯಬೇಕಾದದ್ದಿಲ್ಲ" ಎಂಬ ಮಾತಿಗೆ ಹೆಚ್ಚು ಉಪಪತ್ತಿ ಬರುತ್ತದೆ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ," "ಯಸ್ಮಿನ್ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" ಮುಂತಾದ ಉಪನಿಷದ್ವಾಕ್ಯಗಳು ಜ್ಞಾಪಕಕ್ಕೆ ಬರುತ್ತವೆ.

"ಬುದ್ಧಿಯ ಕೆಲಸವೆಲ್ಲ ಸಾರ್ಥಕವಾಗುವುದು ರಾಗದಿಂದಲೇ" ಎಂಬ ಪಕ್ಷವನ್ನೂ ಎಲ್ಲರೂ ಒಪ್ಪಲಾರರು. ಇದನ್ನು ಶ್ರೀನಿವಾಸರೇ ಹೇಳಿದ್ದಾರೆ. ಆದರೆ ಸ್ವಪಕ್ಷವನ್ನು ಸಾಧಿಸಿ ಸಿದ್ಧಾಂತ ಮಾಡಿರುವ ಕ್ರಮವು ಈ ವಿಚಾರದಲ್ಲಿ ಸಂಶಯಗಳನ್ನು ದೂರಮಾಡುವಂತಿಲ್ಲ.

"ಸಾಹಿತ್ಯದಲ್ಲಿರಬೇಕಾದ ಉದ್ದೇಶವೂ ನೀತಿಯೂ" ಎಂಬುದು ಮೂರನೆಯ ಉಪನ್ಯಾಸ. ಇದರ ಸಾರಾಂಶವೇನೆಂದರೆ:—ಉತ್ತಮ ಸಾಹಿತ್ಯವು ಕವಿಯ ಆವೇಶದಿಂದ ಸ್ವಾಭಾವಿಕವಾಗಿ ಉಕ್ಕಿಬರುವುದರಿಂದ ಅವನು ಯಾವ ಸ್ಫುಟವಾದ ಉದ್ದೇಶವನ್ನೂ ಎಂದರೆ ನೀತಿಯನ್ನೂ ಇಟ್ಟುಕೊಂಡು ಬರೆಯುವುದಿಲ್ಲ. ಆದರೆ ಅದು ಅವನ ಮನೋಭಾವದ ಫಲವಾದ್ದರಿಂದ ಅವನ ಸಂಸ್ಕಾರ ಗುಣವು ಅದರಲ್ಲಿ ತೋರಿಯೇ ತೋರುವುದು. ಉತ್ತಮ ಕವಿಗೆ ಉತ್ತಮ ಸಂಸ್ಕಾರವಿರುವುದರಿಂದ ಅವನ ಗ್ರಂಥವು ನೀತಿ ವಿರುದ್ಧವಾಗಿರುವುದಿಲ್ಲ. ಒಂದುವೇಳೆ "ನಮಗೆ ನೀತಿ ಎಂದು ತೋರದ ವಿಷಯವನ್ನು ಅವನು ನೀತಿಯೆಂಬಂತೆ ವಿವರಿಸಿದರೂ ನಾವು ಅದಕ್ಕೆ ಮನ್ನಣೆಯನ್ನು ಕೊಡಬೇಕು." ಅಲ್ಲದೆ ಅನೇಕ ವೇಳೆ ನೀತಿಯು ಒಂದೇ ಕಾವ್ಯದಲ್ಲಿ ನಾನಾವಿಧವಾಗಿ ತೋರಬಹುದಾದ್ದರಿಂದ ಇಂಥ ನೀತಿಯೇ ಉದ್ದಿಷ್ಟವಾದ್ದೆಂದು ಹೇಳುವ ಹಾಗಿರುವುದಿಲ್ಲ.

"ನೀತಿಯೆನ್ನುವುದು ಬುದ್ಧಿಗೆ ಸಮ್ಮತವಾದ ನಿಯಮವು; ಸಾಹಿತ್ಯದ ರಸವು ರಾಗವರ್ಗಕ್ಕೆ ಸಮ್ಮತವಾದ ವಸ್ತುಲಕ್ಷಣವು. ಸಾಹಿತ್ಯವು ತನ್ನ ಕರ್ತವ್ಯವನ್ನು ಸರಿಯಾಗಿ ನೆರವೇರಿಸಿದರೆ ಬುದ್ಧಿಯಿಂದ ಒಪ್ಪಬಹುದಾದ ಫಲ ಬರುವುದೇ ಹೊರತು ಬೇರೆಯಿಲ್ಲ, ಎಂದರೆ ಅದು ನೀತಿಗೆ ವಿರೋಧವಾಗಿರುವುದಿಲ್ಲ. ಸತ್ಯವೂ ಸೌಂದರ್ಯವೂ ಒಂದೇ ಎಂಬ ಮಾತಿನಲ್ಲಿಯೇ ಇದು ಅಡಕವಾಗಿದೆ."—ಇತ್ಯಾದಿ.

ಈ ಉಪನ್ಯಾಸದಲ್ಲಿ ಮುಖ್ಯವಾಗಿ ಕವಿಯು ಏನಾದರೂ ಉದ್ದೇಶವನ್ನು ಇಟ್ಟುಕೊಂಡು ಕಾವ್ಯವನ್ನು ಬರೆಯುವನೇ, ಆದರಲ್ಲಿ ನೀತಿಯಿರುತ್ತದೆಯೇ ಇರಬೇಕೇ ಎಂಬ ಪಕ್ಷವನ್ನು ಇಟ್ಟುಕೊಂಡು ವಿಚಾರ ಮಾಡಿದ್ದಾರೆ. ಪಾಠಕರ ಪಕ್ಷವೂ ವಿಚಾರಕ್ಕೆ ಬಂದಿದೆ. ಆದರೆ ಈ

ವಿಷಯವಾಗಿ ಹಿಂದಿನಿಂದ ಬಂದಿರುವ ವ್ಯಾಜ್ಯವು ಅವರ ವಿಚಾರದಿಂದ ತೀರ್ಮಾನವಾಗುವುದಿಲ್ಲ. ಏಕೆಂದರೆ ಇವರು ಉದ್ದಕ್ಕೂ ಉತ್ತಮ ಕವಿಯ ಉತ್ತಮ ಕಾವ್ಯವನ್ನು ವಿಚಾರಕ್ಕೆ ತೆಗೆದುಕೊಂಡಿದ್ದಾರೆಯೇ ಹೊರತು ಕಾವ್ಯ ಸಾಮಾನ್ಯವನ್ನೂ ತೆಗೆದುಕೊಂಡಿಲ್ಲ. ಕಾವ್ಯಸಾಮಾನ್ಯ ದಲ್ಲಿಯೂ ಉದ್ದೇಶ್ಯವಿರಬೇಕೇ ನೀತಿಯಿರಬೇಕೇ, ಇದ್ದರೆ ಎಷ್ಟು ಮಟ್ಟಿಗೆ ಎಂಬುದು ವಿಚಾರಮಾಡಬೇಕಾದದ್ದು. ಷೇಕ್ಸ್‌ಪಿಯರ್, ಬೈರ್ಲ, ಕಾಳಿದಾಸ, ಮಾಘ ಮುಂತಾದ ಉತ್ತಮ ಕವಿಗಳನ್ನು ತೆಗೆದು ಕೊಂಡರೂ ಇವರ ಕೆಲವು ಪದ್ಯಗಳನ್ನು ಓದುತ್ತಿರುವಾಗ ಇಂಥವುಗಳನ್ನು ಚಿಕ್ಕವಯಸ್ಸಿನವರು ಓದದಿರುವುದು ಉತ್ತಮ ಎನ್ನಿಸುತ್ತದೆ—ಆದರೂ ಅವುಗಳಿಂದ ಸುಖಪಡೆಯದವರು ಅಪರೂಪ. ಅಲ್ಲದೆ ಉತ್ತಮ ಕವಿ ಯಾದವನೂ ಕೂಡ—ಎಂಥ ಆವೇಶಪಾರವಶ್ಯದಲ್ಲಿಯೇ ಇರಲಿ—ತನ್ನ ಕಾವ್ಯವಸ್ತುವನ್ನು ಅನುಭವಿಸಿ ಸುಖಪಟ್ಟು ಆ ಸುಖವು ಇತರರಿಗೆ ದೊರೆಯಲಿ ಎಂದು ತನ್ನ ಕಾವ್ಯವನ್ನು ಬರೆಯುವನು. ಆದ್ದರಿಂದ ಆನಂದವೇ ಕಾವ್ಯಸಾಮಾನ್ಯದ ಉದ್ದೇಶ್ಯವೆಂದು ಇಟ್ಟುಕೊಂಡು, ಮಂಗಳಾಕಾಂಕ್ಷಿಯಾದ ಪಾಠಕನು ಬರಿಯ ಪ್ರಿಯವಾದದ್ದನ್ನೇ ಹುಡುಕಿಕೊಂಡು ಹೋಗಬಾರದು, ಪಥ್ಯವಾದದ್ದನ್ನೂ ಹಿತವಾದದ್ದನ್ನೂ ತೆಗೆದುಕೊಳ್ಳಬೇಕು ; ಮಂಗಳಾಕಾಂಕ್ಷಿಯಾದ ಕವಿಯು ತನ್ನ ಕಾವ್ಯ ದಲ್ಲಿ "ಪ್ರಿಯ" ವನ್ನು "ಪಥ್ಯ" ದಿಂದ ಮುಚ್ಚಿಬಿಡಬಾರದು ಎಂದು ಹೇಳುವುದು ಮೇಲೆಂದು ತೋರುತ್ತದೆ. ನೀತಿಪೂರ್ಣವಾಗಿದ್ದು ಅನೇಕ ರಿಗೆ ಬೇಸರವಾಗುವ ಗ್ರಂಥಗಳನ್ನು ಎಷ್ಟೋ ಜನರು ಆದರದಿಂದ ಓದಿ ಸುಖಪಡುತ್ತಾರಲ್ಲ—ಎಂದು ಕೇಳಬಹುದು ; ಅವರಿಗೆ ಉಂಟಾಗು ವುದೂ ಸುಖವೇ ; ಇಲ್ಲದಿದ್ದರೆ ಆ ಗ್ರಂಥದಲ್ಲಿ ಪ್ರವೃತ್ತಿ ಹುಟ್ಟುತ್ತಿರಲ್ಲ ; ಅವರ ಮನೋಧರ್ಮವೂ ಸ್ವಲ್ಪ ಅಸಾಮಾನ್ಯವಾದದ್ದೇ.

"ಸಾಹಿತ್ಯದ ಸಾಮಗ್ರಿ ರೂಪಾದಿಗಳು" ಎಂಬುದು ನಾಲ್ಕನೆಯ ಉಪನ್ಯಾಸ. ಇದರಲ್ಲಿ ಕಾವ್ಯದ ಸಾಮಗ್ರಿಯು ಬಾಹ್ಯವಸ್ತುಗಳಲ್ಲ ವೆಂದೂ ಕವಿಯ ಪ್ರತಿಭಾ ದರ್ಪಣದಲ್ಲಿ ಪ್ರತಿಫಲಿಸಿದ ಅವುಗಳ ಪ್ರತಿ ಬಿಂಬವೆಂದೂ ಹೇಳಿ, ಅನಂತರ ಕಾವ್ಯಗಳು ವಿಷಯವನ್ನನುಸರಿಸಿ

ಪಡೆಯತಕ್ಕ ರೀತಿಗಳು ಅಥವಾ ರೂಪಭೇದಗಳನ್ನು ವಿವರಿಸುತ್ತಾರೆ; ಪಾಶ್ಚಾತ್ಯ ರೀತಿಗಳನ್ನೂ ಆಧುನಿಕ ಗ್ರಂಥ ಭೇದಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು ಸಾಹಿತ್ಯವನ್ನು ವಿಭಾಗ ಮಾಡಿದ್ದಾರೆ. ಇದು ಬಹುಮಟ್ಟಿಗೆ ಸ್ವಾಭಾವಿಕವಾಗಿಯೂ ಇದೆ. ಈ ವಿಭಾಗ ಕ್ರಮವನ್ನು ಇಲ್ಲಿ ಸೂಕ್ಷ್ಮವಾಗಿ ತಿಳಿಸಬಹುದು:—

ಕಾವ್ಯವು ವ್ಯಂಜಕಕಾವ್ಯ, ವರ್ಣನಾಕಾವ್ಯ ಎಂದು ಎರಡು ವಿಧ; ಇವು "ಅನೇಕ ರೂಪವನ್ನು ಹೊಂದಬಹುದು."

"ಯಾವುದಾದರೂ ಒಂದು ವಿಷಯದಲ್ಲಿ ಕವಿಗೆ ಬಂದ ಆಲೋಚನೆಯನ್ನು ಕವಿಯು ಸುಮ್ಮನೆ ಆಲೋಚನೆಯಾಗಿ ಬರೆದರೆ ಅದು ಉಪನ್ಯಾಸವಾಗುವುದು. ಅವನು ಊಹೆಯನ್ನು ಉಪಯೋಗಿಸಿ ಇದೇ ವಿಷಯವನ್ನು ಇಬ್ಬರು ಮಾತನಾಡುವ ರೀತಿಯಲ್ಲಿ ಬರೆಯಬಹುದು. ಹೀಗೆ ಬರೆಯುವುದರಲ್ಲಿ ಒಂದು ಭಾವವನ್ನು ಮಾತ್ರವಲ್ಲದೆ ಒಂದು ಸ್ವಭಾವವನ್ನು ವರ್ಣಿಸಿ ಅದರಲ್ಲಿ ಇದೂ ಇದರ ಜತೆಯ ಇತರ ಭಾವಗಳೂ ಸೇರಿದರೆ ಸೇರಲಿ ಎಂದು ಬರೆದರೆ ಅದು ಒಂದು ಕತೆಯಾಗುವುದು. ಇಂತ ಕತೆಯಲ್ಲಿ ರಸಪುಷ್ಟವಾದ ಸನ್ನಿವೇಶಗಳನ್ನು ಆರಿಸಿಕೊಂಡು ವ್ಯಕ್ತಿಗಳು ಆಚರಿಸುವಂತೆ ಆಚರಣೆಯನ್ನು ತೋರಿಸಿ ವಿಷಯವನ್ನು ಪ್ರತಿಪಾದಿಸಿದರೆ ನಾಟಕವಾಗುವುದು. ಪಾತ್ರಗಳ ನಡೆನುಡಿಗಳನ್ನು ಮಾತ್ರವಲ್ಲದೆ ಅವುಗಳ ವಿಷಯದಲ್ಲಿ ಅಭಿಪ್ರಾಯಗಳನ್ನೂ ಸೂಚಿಸುತ್ತ ಸನ್ನಿವೇಶ ಸನ್ನಿವೇಶಕ್ಕೆ ನಡುವೆ ವಿವರಣವನ್ನು ಕೊಡಬೇಕೆಂದರೆ ಕಾದಂಬರಿಯಾಗುವುದು. ಮಾನವ ಚರಿತ್ರೆಯ ಗಂಭೀರಾವಸ್ಥೆಗಳನ್ನು ಅರಿತವರು ಬರೆದರೆ ನಾಟಕವೂ ನಾವಲೂ ಗೀತೆಗಳನ್ನು ಒಳಗೊಂಡ ಅದ್ಭುತ ಕಾವ್ಯಗಳಾಗುವುವು . . ."

ಇದಾದ ಮೇಲೆ ಸಾಹಿತ್ಯದಲ್ಲಿರುವ "ಸ್ವಾತಂತ್ರ್ಯಮಾರ್ಗ ಸಿದ್ಧಾಂತಮಾರ್ಗ" ಎಂದು ಎರಡು ಮಾರ್ಗಗಳನ್ನು ವಿವರಿಸಿ ಇವುಗಳು ಯಾವ ಯಾವ ಸಾಹಿತ್ಯ ಭೇದಕ್ಕೆ ಎಷ್ಟೆಷ್ಟು ಮಟ್ಟಿಗೆ ಹೊಂದುತ್ತವೆ ಎಂಬುದನ್ನು ಸೂಚಿಸಿ ಗ್ರಂಥವನ್ನು ಉಪಸಂಹರಿಸುವರು.

ಈಗ ಗ್ರಂಥದ ಪ್ರತಿಪಾದ್ಯ ವಿಷಯವು ಸ್ಥೂಲವಾಗಿ ಇಂಥದೆಂದು

ಗೊತ್ತಾಗುವುದೆಂದು ನಂಬುತ್ತೇವೆ. ಆದರೆ ಇದಿಷ್ಟೇ ಆ ಗ್ರಂಥದಲ್ಲಿ ರುವುದೆಂದು ಪಾಠಕರು ಅರಿಯಬಾರದು. ನಾವೂ ಅದರ ಸಾರವನ್ನೆಲ್ಲಾ ತೆಗೆದುಕೊಟ್ಟಿರುವೆವೆಂಬ ದುರಭಿಮಾನವನ್ನೂ ಇಟ್ಟುಕೊಂಡಿಲ್ಲ. ಒಂದು ಹೂವಿನ ಪರಿಚಯಮಾಡಿಕೊಡಬೇಕಾದರೆ ಅದನ್ನೇ ತಂದು ಮುಂದಿಟ್ಟ ಹೊರತು, ಅದೇ ಅನುಭವಕ್ಕೆ ಬಂದ ಹೊರತು, ಅದರ ಪೂರ್ಣವಾದ ಪರಿಚಯವಾಗುವುದಿಲ್ಲ. ಇದುವರೆಗೂ ಸಸ್ಯ ಶಾಸ್ತ್ರಜ್ಞನಂತೆ ಈ ಗ್ರಂಥಪುಷ್ಪದಲ್ಲಿರುವ ಸಾಮಗ್ರಿಗಳನ್ನೂ ಅವುಗಳ ಸ್ವರೂಪವನ್ನೂ ವಿವರಿಸಿ ಆಯಿತೇ ಹೊರತು ಅದರ ಸೌಕುಮಾರ್ಯ ಸೌಂದರ್ಯಾದಿಗಳನ್ನೇನು ಹೇಳಿದ ಹಾಗಾಗಲಿಲ್ಲ. ಇದು ಶಾಸ್ತ್ರ ಜಾತಿಗೆ ಸೇರಿ ಸಾಮಾನ್ಯವಾಗಿ ನೀರಸವಾಗಿರಬೇಕಾದ ಗ್ರಂಥ ಭೇದ ವಾದರೂ ಇದರಲ್ಲಿ "ಬಿನ್ನಹ" "ಸಣ್ಣ ಕತೆಗಳು" ಮುಂತಾದವುಗಳ ಸುಗಂಧ ಸೌಕುಮಾರ್ಯ ಸೌಂದರ್ಯಾದಿಗಳು ಅಲ್ಲಲ್ಲಿಯೇ ಕಂಡು ಬರುತ್ತವೆ. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಡುವೆವು :—

೧. ಈ (ಶಾಕುಂತಲ) ನಾಟಕವು ಸಾಹಿತ್ಯ ಪ್ರಪಂಚದ ಪರಾತ್ಪರ ಮೂರ್ತಿಯಾಗಿದೆ. (ಪು. ೩)

೨. ಸಾಮಾನ್ಯ ಚೇತನವು ಜೀವನ ಮಾರ್ಗದಲ್ಲಿ ನಿದ್ದೆಯಲ್ಲಿ ನಡೆಯುವಂತೆ ಪರಾಮರ್ಶ ವಿಹೀನವಾಗಿ ನಡೆಯುತ್ತದೆ. (ಪು. ೨೧)

೩. ಸರಸ್ವತಿಯ ವೀಣೆ ನುಡಿಯಬಲ್ಲ ಸ್ವರಕ್ಕೆ ಆದಿಯಿಲ್ಲ ಅಂತ್ಯ ವಿಲ್ಲ. (ಪು. ೨೫)

೪. ಆಚಾರ್ಯರ ಶ್ಲೋಕಮಂಜರಿಯಲ್ಲಿ ಅಮರನಾಗಿರುವ ಡುಕೃಂ ಕರಣೆಯ ಬ್ರಹ್ಮೇತಿ ಹಿಡಿದಿದ್ದ ವೈಯಾಕರಣಿಯನ್ನು ನಾವೆಲ್ಲ ಬಲ್ಲೆವು. ಮೃತ್ಯು ಸನ್ನಿಹಿತವಾದಾಗ ಡುಕೃಂಕರಣೆಯು ರಕ್ಷಿಸುವುದಿಲ್ಲ ಎಂದು ಅವರು ಅವನಿಗೆ ಎಚ್ಚರಿಕೆ ಹೇಳಿದರಷ್ಟೆ. ಇಂತ ವೈಯಾಕರಣಿಯೊಬ್ಬ ನನ್ನು ಬ್ರೌನಿಂಗ್ ಕವಿಯು ಒಂದು ಕಾವ್ಯದಲ್ಲಿ ವರ್ಣಿಸಿದ್ದಾನೆ. ಈತನು ತನ್ನ ಜೀವನವನ್ನೆಲ್ಲ ಪುಸ್ತಕಗಳನ್ನು ಓದುವುದರಲ್ಲಿ ಕಳೆದನು ; ಕೇವಲ ಅಪರವಯಸ್ಸಿನಲ್ಲಿ ಒಂದೆರಡು ಮಾತನ್ನು ಬರೆಯುವುದಕ್ಕೆ ಆರಂಭಿಸಿ ದನು ; ಶೋಭೆ ಬಂತು ; ಒಂದು ಧಾತುವಿನ ಸ್ವರೂಪವನ್ನು ನಿರ್ಧರಿಸಿ

ದನು; ಉಷ್ಣವಾಯು ಕೆರಳಿ ದೇಹವು ನರಳುತ್ತಿರುವಾಗ ಇನ್ನೊಂದು ಮಾತಿನ ಲಕ್ಷಣಗಳನ್ನು ಗೊತ್ತುಮಾಡಿ ಮುಗಿಸಿದನು; ಲಕ್ವಬಡಿದು ಅರ್ಧ ದೇಹವು ಮೃತವಾಗಿದ್ದಾಗ ಇನ್ನೊಂದು ಮಾತಿನ ಲಕ್ಷಣಗಳನ್ನು ವಿವರಿಸುವುದರಲ್ಲಿ ಅರ್ಧವನ್ನು ಮಾಡಿದ್ದನು; ಇನ್ನು ಸ್ವಲ್ಪವನ್ನು ಮಾಡುವುದರಲ್ಲಿ ಅವನನ್ನು ಮೃತ್ಯು ಕೊಂಡೊಯ್ಯಿತು. ಇವನ ಗತಿಯೇನು? ಸಂಸ್ಕೃತದ ಡುಕೃಂಕರಣೆಯೇ ರಕ್ಷಿಸುವುದಿಲ್ಲವೆಂದ ಮೇಲೆ "ಔನ್", "ಎನ್‌ಕ್ಲಿಟಿಕ್‌ಡೆ" ಮೊದಲಾದ ಹೂಣ ಭಾಷೆಯ ಮಾತುಗಳು ರಕ್ಷಿಸುವುದುಂಟೇ ಎಂದು ನಾವು ಎನ್ನಬಹುದು. (ಪು. ೫೦-೫೧)

೫. ನಿಖಿಲನು ಶರತ್ಕಾಲದ ಚಂದ್ರನಂತೆ ಶುಭ್ರವಾದ ಆತ್ಮವುಳ್ಳವನು, ಸೌಮ್ಯಮೂರ್ತಿ. ವಿಮಲೆಯು ಈ ಚಂದ್ರನ ಪೂರ್ಣಿಮೆಯ ಬೆಳ್ದಿಂಗಳಲ್ಲಿ ಮುಳುಗಿ ಕುಳಿತಿರುವ ವಿಮಲವಾದ ಸುಂದರವಾದ ಪತಂಗ........ಸಂದೀಪನು ನಮ್ಮ ಸೀಮೆಯೆಣ್ಣೆಯ ಬುಡ್ಡಿಗಳ ಉರಿಯಂತೆ ನೀಚಸ್ವಭಾವದ ಮನುಷ್ಯ. ನಿಖಿಲನ ಬೆಳ್ದಿಂಗಳಲ್ಲಿ ಇದ್ದ ಪತಂಗವು ಬಂದು ಈ ಬುಡ್ಡಿಯ ದೀಪಕ್ಕೆ ತನ್ನ ಸುಖವನ್ನೆಲ್ಲಾ ಬಲಿ ಹಾಕುವುದನ್ನು ನೆನೆದರೆ ಆಗುವ ದುಃಖವನ್ನು (ಠಾಕೂರರ "ಮನೆಯ ಒಳಗೂ ಮನೆಯ ಹೊರಗೂ" ಎಂಬ) ಈ ಕತೆಯನ್ನು ಓದಿದರೆಯೇ ತಿಳಿಯಬಹುದು. (ಪು. ೫೯-೬೦)

೬. ಶಿಲ್ಪದಲ್ಲಿ ಇದು (ವೀನಸ್ ವಿಗ್ರಹವು) ಮಾಘಕಾವ್ಯ (ಪು. ೬೫).

೭. ವಿಷವನ್ನು ಕೂಡಿಟ್ಟುಕೊಂಡು ನಾಗರಹಾವು ತನ್ನ ಸಂಸ್ಕಾರವನ್ನು ಮುಗಿಸಿಕೊಳ್ಳಬೇಕು; ಕಚ್ಚುತ್ತೇನೆ ಎಂದು ಬಂದರೆ ನಾವು ಅದರ ತಲೆಯನ್ನು ಚಚ್ಚಿ ನಮ್ಮ ಸಂಸ್ಕಾರವನ್ನು ಮುಗಿಸಿಕೊಳ್ಳಬೇಕಾಗುವುದು. (ಪು. ೭೪)

೮. ನಾವೆಲ್ಲ ಪ್ರಪಂಚದಲ್ಲಿರುವುದು ತಾಯನ್ನು ತಿಳಿಯದೆ ಸುಮ್ಮನೆ ಅವಳ ಕೈಯಲ್ಲಿ ಇರುವ ಮಗುವಿನಂತೆ. (ಪು. ೮೫)

೯. ವರ್ಡ್ಸ್‌ವರ್ತಿನ ಸಾರವೇ ಬೇರೆ; ಷೆಲ್ಲಿಯ ಮಾಯವೇ ಬೇರೆ. (ಪು. ೯೧)

೧೦. ಸಣ್ಣ ಕತೆಯಾಗಬೇಕಾದದ್ದನ್ನು ನಾವಲಾಗಿ ಬರೆದರೆ ನೀರೂ ಜೊಂಡೂ ತುಂಬಿದ ಸೋರೆಯುಂತೆ ಆಗುತ್ತದೆ. (ಪು. ೯೭)

ಇಂಥ ಉದಾಹರಣೆಗಳನ್ನು ಬೇಕಾದಷ್ಟು ಕೊಡಬಹುದು; ಆದರೆ ವಿಸ್ತಾರಭಯದಿಂದ ಸುಮ್ಮನಾಗಬೇಕಾಗಿದೆ. ಇಷ್ಟಾದರೂ ಈ ಗ್ರಂಥದ ಅನೇಕ ಭಾಗಗಳು "ಸಣ್ಣ ಕತೆ" ಗಳನ್ನು ಬರೆದವರೇ ಬರೆದದ್ದೇ ಎಂಬ ಪ್ರಬಲವಾದ ಸಂದೇಹವನ್ನುಂಟುಮಾಡುವುವಾಗಿವೆ. ಇದಕ್ಕೆ ಬಹು ಮಟ್ಟಿಗೆ ಗ್ರಂಥದ ಪ್ರತಿಪಾದ್ಯ ವಿಷಯವು ಕಾರಣ. ಪ್ರಾಯಶಃ ಇತರರು ಬರೆದರೆ ಇದನ್ನು ಇಷ್ಟು ಸುಲಭವಾಗಿಯೂ ಬರೆಯಲಾರರು. ಆದರೂ ಮ|| ಶ್ರೀನಿವಾಸರು ಮನಸ್ಸು ಮಾಡಿದ್ದರೆ ಇದನ್ನು ಇನ್ನಿಷ್ಟು ಸರಳ ವಾಗಿ ಬರೆದಿರಬಹುದಾಗಿತ್ತು ಎನ್ನಿಸುತ್ತದೆ, ಇನ್ನಿಷ್ಟು ಸ್ಪಷ್ಟಮಾಡ ಬಹುದಾಗಿತ್ತು ಎನ್ನಿಸುತ್ತದೆ. ಇದಕ್ಕೆ ಅವರ ಕೆಲವು ನೂತನವಾದ ಅಭಿಪ್ರಾಯಗಳೂ ಪದಗಳೂ ಸರಣಿಯೂ ಕಾರಣವೆಂದು ಹೇಳ ಬಹುದು. ಅನೇಕ ಕಡೆ ವಿಷಯಗಳ ವಿಚಾರವು ವಿಸ್ತಾರವಾಗಿದ್ದರೂ ಅವರ ಸಿದ್ಧಾಂತವು ಸ್ಪಷ್ಟವಾಗುವುದಿಲ್ಲ. ಇದಕ್ಕೆ ಮತ್ತೇನೇನು ಕಾರಣ ಗಳು ಇವೆಯೋ ಗೊತ್ತಾಗದು. ಅಂತೂ ಇದನ್ನು ಒಂದು ಸಾರಿ ಓದಿ ಇದರ ಸಾರಾಂಶವಿಷ್ಟು, ಇವರು ಪ್ರತಿಪಾದಿಸಿರುವ ಸಂಗತಿ ಇಂಥದು ಎಂದು ಹೇಳಿಬಿಡುವುದು ಕಷ್ಟವಾಗುತ್ತದೆ. ಇದಕ್ಕೆ ಪಾಠಕರ ಮೇಧಾದೌರ್ಬ ಲ್ಯವೂ ಕಾರಣವಾಗಬಹುದು; ವಿಷಯದ ಕಾಠಿಣ್ಯವೂ ಕಾರಣವಿರ ಬಹುದು; ಆದರೂ ಪ್ರತಿಪಾದನಕ್ರಮವೂ ಸ್ವಲ್ಪವಾದರೂ ಕಾರಣ ವಾಗಿದೆಯೆಂದು ನಾವು ಅಭಿಪ್ರಾಯಪಡುತ್ತೇವೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಇಂಥ ಗ್ರಂಥವು ಮೊದಲ ನೆಯದು; ಶ್ರೀನಿವಾಸರ ಗ್ರಂಥಗಳಲ್ಲಿಯೂ ಇಂಥದು ಮೊದಲನೆ ಯದು; ಇಂಥ ಗ್ರಂಥಗಳಿಂದ ಸಾಹಿತ್ಯದ ಸಾರವು ಹೆಚ್ಚುವುದು. ವಿಷ ಯವು ಭಾಷಾಭೇದದ ಯೋಚನೆಯಿಲ್ಲದೆ ಎಲ್ಲರಿಗೂ ಬೇಕಾಗಿರುವುದ ರಿಂದ ಕನ್ನಡಿಗರೇ ಅಲ್ಲದೆ ಸಾಹಿತ್ಯದಲ್ಲಿ ಅಭಿರುಚಿ ಇರತಕ್ಕ ಎಲ್ಲರೂ ಈ ಗ್ರಂಥವನ್ನು ಓದತಕ್ಕದ್ದಾಗಿದೆ.



---

# ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಚರಿತ್ರವು

ಯಾವುದಾದರೂ ಒಂದು ದೇಶದಲ್ಲಿ ಹುಟ್ಟಿ ಬಾಳಿದ ಮಹಾಪುರುಷರ ಜೀವನ ಚರಿತ್ರೆಗಳನ್ನು ಒಟ್ಟುಗೂಡಿಸಿದರೆ ಅದು ಆ ದೇಶದ ಚರಿತ್ರೆಯಾಗುತ್ತದೆ ಎಂದು ಹೇಳುವುದುಂಟು. ಈ ಹೇಳಿಕೆಯನ್ನು ಪೂರ್ತಿಯಾಗಿ ಒಪ್ಪಲಾಗುವುದಿಲ್ಲವಾದರೂ ಇದರಲ್ಲಿ ಬಹುಮಟ್ಟಿನ ನಿಜಾಂಶವಿದೆಯೆಂದು ಒಪ್ಪಿಕೊಳ್ಳಬೇಕು."ರಾಜಾ ರಾಷ್ಟ್ರಸ್ಯ ಕಾರಣಂ" ಎಂಬುದಕ್ಕೆ ಇದೇ ಅರ್ಥ. ಈ ಹೇಳಿಕೆಯನ್ನು ಅಂಗೀಕರಿಸಿಕೊಂಡರೇ ರಾಜರ ಆಳಿಕೆಗಳನ್ನು ಹಿಡಿದು ಬರೆದಿರುವ ಚರಿತ್ರೆಗಳ ಲೇಖನ ಕ್ರಮವನ್ನು ಒಪ್ಪಬಹುದು. ಯಾವುದಾದರೊಂದು ಕಾವ್ಯದ ಪ್ರತಿಯೊಂದು ಪ್ರಧಾನ ಘಟನೆಯೂ ಅದರ ನಾಯಕನಿಗೆ ಸಾಕ್ಷಾತ್ತಾಗಿಯೋ ಪರಂಪರೆಯಿಂದಲೋ ಸಂಬಂಧಿಸಿಯೇ ಇರುವಂತೆ, ಯಾವುದಾದರೊಂದು ಚರಿತ್ರಭಾಗದ ಘಟನೆಗಳೂ ಆ ಕಾಲದ ರಾಜನಿಗೆ–ಅಥವಾ ಮಂತ್ರಿಮುಂತಾದ ಪ್ರಧಾನ ಪುರುಷರಿಗೆ–ಸಂಬಂಧಿಸಿಯೇ ಇರುತ್ತದೆ. ಆದ್ದರಿಂದಲೇ ಒಬ್ಬ ಅರಸನ ಕಾಲದಲ್ಲಿ, ಕುಡಿದ ನೀರು ಅಲ್ಲಾಡದಂತಿದ್ದ ರಾಜ್ಯವು ಮತ್ತೊಬ್ಬ ವಿಪರೀತಗುಣದ ಅರಸನ ಕೈಗೆ ಬಂದ ಕೂಡಲೆ ಅಲ್ಲೋಲ ಕಲ್ಲೋಲವಾಗಿ ದೇಶಕ್ಷೋಭವಾಗಿರುವುದನ್ನು ನೋಡಿದ್ದೇವೆ —ಅಥವಾ ಓದಿದ್ದೇವೆ. ದುಷ್ಟಮೃಗಭರಿತವಾದ ಕಾಡಿನಲ್ಲಿ ನೆಲಸಿ ತಮ್ಮ ತಪೋಮಹಿಮೆಯಿಂದ ಅಲ್ಲಿ ಶಾಂತಿಯನ್ನು ನೆಲೆಗೊಳಿಸಿ ಅರಣ್ಯವನ್ನು ಉದ್ಯಾನವನವಾಗಿ ಮಾಡುವ ತಪಸ್ವಿಯಂತೆ, ಅವ್ಯವಸ್ಥೆಗೆ ಸಿಕ್ಕಿದ ದೇಶವನ್ನು ರಾಜ್ಯತಂತ್ರ ಶಕ್ತಿಯಿಂದ ಪುನಃ ಕಟ್ಟಿ ದೇಶಭಕ್ತಿಯನ್ನೂ ಸತ್ವವನ್ನೂ ಧರ್ಮವನ್ನೂ ನೆಲೆಗೊಳಿಸಿ ಚಿರಸ್ಥಾಯಿಯಾದ ಕೀರ್ತಿಯನ್ನು ಗಳಿಸಿಕೊಂಡ ಮಹಾಪುರುಷರನ್ನೂ ನೋಡಿದ್ದೇವೆ. ಆದ್ದರಿಂದ ಪ್ರಧಾನ ಪುರುಷರ ಚರಿತ್ರೆಯೇ ದೇಶದ ಚರಿತ್ರೆಯೆಂದು ಏಕೆ ಹೇಳಬಾರದು? ಈಗ ಯಾರಾದರೂ ತಿಲಕರ, ಗೋಖಲೆಯವರ

ಅಥವಾ ಮಹಾತ್ಮ ಗಾಂಧಿಯವರ ಜೀವನ ಚರಿತೆಯನ್ನು ಬರೆಯುವು ದಕ್ಕೆ ಹೋದರೆ ಈ ಕಾಲದ ಹಿಂದೂದೇಶದ ಚರಿತ್ರೆಯ ಮುಖ್ಯಾಂಶ ಗಳನ್ನೆಲ್ಲ ತರದೆ ಬರೆಯುವುದು ಸಾಧ್ಯವೇ? ಎಂಥವನೂ ಹತ್ತರಲ್ಲಿ ಹನ್ನೊಂದಾಗಿ ಹೋಗುವ ಈ ಪ್ರಜಾಪ್ರಾಧಾನ್ಯದ ಕಾಲದಲ್ಲೇ ಹೀಗಾ ದರೆ, ರಾಜನು ನಿಜವಾದ ರಾಜನಾಗಿದ್ದು ರಾಜ್ಯಸೂತ್ರಗಳನ್ನೆಲ್ಲಾ ತನ್ನ ಕೈಯಲ್ಲಿಟ್ಟುಕೊಂಡಿದ್ದ ಕಾಲದಲ್ಲಿ ರಾಜನ ಚರಿತ್ರೆಯೇ ದೇಶದ ಚರಿತ್ರೆ ಯೆಂದು ಹೇಳಿದರೆ ತಪ್ಪಾಗಲಾರದು. ಹೀಗಿರಲು ಆ ಕಾಲದಲ್ಲಿ (ಕುರುಬ ನನ್ನು ಮಹಾಕವಿಯಾದ ಕಾಳಿದಾಸನಾಗಿ ಮಾಡಿದಂತೆ) ಅನಾಮಧೇಯ ರನ್ನು ಮಹಾಸತ್ವಶಾಲಿಗಳಾದ ರಾಜರನ್ನಾಗಿ ಮಾಡಿದ ವಿದ್ಯಾರಣ್ಯ ಸ್ವಾಮಿಗಳು ರಾಮದಾಸಸ್ವಾಮಿಗಳು ಇಂಥ ಮಹಾಪುರುಷರ ವಿಚಾರ ದಲ್ಲಿ ಹೇಳುವುದೇನು?

ಜೀವನಚರಿತ್ರೆಯು ದೇಶಚರಿತ್ರೆಯೇ ಆಗದಿದ್ದರೂ ಅದೂ ಒಂದು ವಿಧವಾದ ಚರಿತ್ರೆಯೇ ಆದ್ದರಿಂದ, ಜೀವನಚರಿತ್ರ ಲೇಖಕರೂ ದೇಶಚರಿತ್ರ ಲೇಖಕರ ಮಾರ್ಗದಲ್ಲಿಯೇ ಹೋಗಬೇಕು. ಆದರೆ ನಾವು ಪುರಾಣಿಕರು, ಚರಿತ್ರಲೇಖಕರಲ್ಲ; ಚರಿತ್ರ ಲೇಖನ ವಾಸನೆಯು ನಮಗೆ ಹಿಂದಿನಿಂದ ಬಂದಿಲ್ಲ. ಆದ್ದರಿಂದ ಈಗ ನಮ್ಮಲ್ಲಿ ದೊಡ್ಡ ದೊಡ್ಡ ಪದವೀಧರರು ಬರೆಯುತ್ತಿರುವ ಚರಿತ್ರಗಳೂ ಸರಿಯಾದ ಬಣ್ಣಕ್ಕೆ ಬರುವುದು ಅಪರೂಪ. ಜೀವನ ಚರಿತ್ರೆಗಳ ಪಾಡೂ ಅಷ್ಟೇ ಆಗಿದೆ. ಹಿಂದೆ ಆದದ್ದನ್ನು ತಿಳಿದುಕೊಂಡು, ಆ ತಿಳಿವಳಿಕೆಯ ಬೆಳಕಿ ನಲ್ಲಿ ಈಗ ನಾವು ಮಾಡಬೇಕಾದ ಕಾರ್ಯವನ್ನು ಹೆಚ್ಚು ಪರಿಷ್ಕಾರ ವಾಗಿ ಮಾಡುತ್ತ ಉತ್ತಮತರವಾಗಿ ಬಾಳುವುದೇ ಚರಿತ್ರವ್ಯಾಸಂಗದ ಉದ್ದೇಶ್ಯ. ಆದ್ದರಿಂದ ಚರಿತ್ರೆಯ ನಿಜವಾದ ಉಪಯೋಗವನ್ನು ಪಡೆಯಬೇಕಾದರೆ ಅದರಲ್ಲಿ ಯಾಥಾರ್ಥ್ಯಕ್ಕೆ ಪ್ರಾಶಸ್ತ್ಯ ಕೊಡಬೇಕು. ಚರಿತ್ರೆಗೆ ಯಾಥಾರ್ಥ್ಯವೇ ಜೀವ. ಆದರೆ ಯಥಾರ್ಥವಾದದ್ದನ್ನು ಗ್ರಹಿಸುವುದು ಕಷ್ಟ. ಪುರಾಣಗಳನ್ನು ಬರೆದವರೂ ಸುಳ್ಳನ್ನು ಬರೆಯು ತ್ತೇವೆಂದು ಬರೆದಿಲ್ಲ; ಅದೆಲ್ಲವೂ ನಿಜವೆಂದೇ ಅವರ ಭಾವ. ವೇದದಲ್ಲಿ ಯಾದರೂ 'ಅರ್ಥವಾದ'ವನ್ನು ಒಪ್ಪಿಕೊಂಡಾರು, ಪುರಾಣಗಳಲ್ಲಿ

ಅದು ಸಲ್ಲದು. ನಿಜವಾದ ಸಂಗತಿಯೇನೆಂದರೆ, ವಿವರ್ಣವಾದ ಯಾಥಾರ್ಥ್ಯದ ನಿಜಸ್ವರೂಪವನ್ನು ನಮ್ಮ ಸವರ್ಣ ದೃಷ್ಟಿಯಿಂದ ಅರಿಯುವುದು ಅಸಾಧ್ಯ. ಪ್ರತಿಯೊಬ್ಬರೂ ಕಣ್ಣಿನೊಳಗೆ ಒಂದೊಂದು ಬಣ್ಣದ ಗಾಜನ್ನು ಇಟ್ಟುಕೊಂಡೇ ಇರುತ್ತೇವೆ. ಒಬ್ಬನಿಗೆ ಹಸುರಾಗಿ ಕಂಡದ್ದು ಮತ್ತೊಬ್ಬನಿಗೆ ಹಳದಿಯಾಗಿ ಕಂಡೀತು; ಅಷ್ಟೇಯೆ. ಅದರ ನಿಜವಾದ ಬಿಳಿಯ ಬಣ್ಣವನ್ನು ನೋಡಬೇಕಾದರೆ ಆ ಗಾಜಿನ ಚೂರನ್ನು ಕಣ್ಣಿನಿಂದ ತೆಗೆದಿಡಬೇಕು. ಇದು ಒಂದು ವಿಧವಾದ ಬ್ರಹ್ಮವಿದ್ಯೆ; ಎಲ್ಲರಿಗೂ ಸಾಧ್ಯವಾದದ್ದಲ್ಲ. "ಕೃಷ್ಣನು ಸ್ತ್ರೀಯರಿಗೆ ಕಾಮನಂತೆಯೂ, ಅರ್ಥಿಗಳಿಗೆ ಕಲ್ಪವೃಕ್ಷದಂತೆಯೂ, ಶತ್ರುಗಳಿಗೆ ಯಮನಂತೆಯೂ ಕಂಡನು" ಎಂದು ಒಬ್ಬ ಆಲಂಕಾರಿಕನು ಉಲ್ಲೇಖಿಸಿದ್ದಾನೆ. ಚರಿತ್ರೆಯನ್ನು ಬರೆಯುವುದಕ್ಕೆ ಹೋದರೆ ಆಗುವುದೂ ಹೀಗೆಯೇ. ಚರಿತ್ರೆಯ ಮಾತಿರಲಿ, ಮೈಸೂರು ನವರಾತ್ರಿಯ ನೋಟದಂಥ ಒಂದು ಸಣ್ಣ ಸಂಗತಿಯನ್ನು ತೆಗೆದುಕೊಳ್ಳೋಣ. ಅದರ ಅನುಭವವು ಸರ್ಕಾರದ ಒಬ್ಬ ದೊಡ್ಡ ಅಧಿಕಾರಿ, ಪೊಲೀಸಿನವನು, ಪರಸ್ಥಳದಿಂದ ಬಂದ ನೋಟಕ, ಸ್ಥಳೀಕನಾದ ಒಬ್ಬ ಬಡ ಸಂಸಾರಿ ಇವರೆಲ್ಲರಿಗೂ ಒಂದೇ ವಿಧವಾಗಿರುವುದೇ? ಹೀಗೆಯೇ ನಾನಾಮುಖವಾದ ಒಂದು ದೇಶದ ಚರಿತ್ರೆಯೇ ಆಗಲಿ ಒಬ್ಬ ಮಹಾಪುರುಷನ ಜೀವನವೇ ಆಗಲಿ ಲೇಖಕನ ಯೋಗ್ಯತಾಪಾತ್ರೆಯಲ್ಲಿ ಹಿಡಿಸುವಷ್ಟು ಮತ್ತು ಅದರ ಗುಣವನ್ನು ಅನುಸರಿಸಿ ಸಿಕ್ಕುತ್ತದೆಯೇ ಹೊರತು ಅಖಂಡವಾಗಿ ಸಿಕ್ಕುವುದು ಅಸಾಧ್ಯ. ಅದರಲ್ಲಿಯೂ ಜೀವನ ಚರಿತ್ರೆಗೆ ನಾಯಕನು ಧಾರ್ಮಿಕ ಪುರುಷನಾದರೆ, ಅಂಥ ಚರಿತ್ರೆಯನ್ನು ಬರೆಯುವಷ್ಟು ಕಷ್ಟವಾದ ಕೆಲಸ ಮತ್ತೊಂದಿರುವುದಿಲ್ಲ. ಧರ್ಮವು ಆಂತರಿಕವಾದುದು, ಬಾಹ್ಯವಾದದ್ದಲ್ಲ; ಆದರೆ "ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ." ಸೃಷ್ಟಿಕರ್ತನು ಹೊರಗನ್ನು ನೋಡುವುದಕ್ಕೆ ಶಕ್ತಿಕೊಟ್ಟಂತೆ ಒಳಗನ್ನು ನೋಡಲು ಕೊಡಲಿಲ್ಲ. ಅಲ್ಲದೆ, ನಮಗೆ ಇಲ್ಲದ್ದನ್ನೂ ನಾವು ಮಾಡಲಾರದ್ದನ್ನೂ ದೇವತೆಗಳಲ್ಲಿಯೂ ಅವರ ಆವಾಸಸ್ಥಾನಗಳಲ್ಲಿಯೂ ಆರೋಪಿಸುವಂತೆ, ನಮಗಿಂತ ದೊಡ್ಡವರಲ್ಲಿಯೂ ಆರೋಪಿಸುವು

ದುಂಟು; ಅವುಗಳು ಇದ್ದರೆ ಅವುಗಳನ್ನು ಗುಣಾಕಾರ ಮಾಡುವು ದುಂಟು. ಆದ್ದರಿಂದಲೇ ಧಾರ್ಮಿಕ ಪುರುಷರ ಚರಿತ್ರೆಯನ್ನು ಬರೆ ಯುವುದಕ್ಕೆ ಹೋದರೆ ಅವುಗಳಲ್ಲಿ ಅದ್ಭುತಕಾರ್ಯಗಳು ಬರದೆ ಇರುವು ದಿಲ್ಲ; ಬುದ್ಧ, ಕ್ರಿಸ್ತ ಮುಂತಾದವರನ್ನು ಮೊದಲು ಮಾಡಿಕೊಂಡು ಈಗಿನ ಮಠಾಧಿಪತಿಗಳವರೆಗೆ ಅದ್ಭುತಕಾರ್ಯಗಳನ್ನು ಮಾಡದಿರುವವ ರಾರು? ಅದ್ಭುತಕಾರ್ಯಗಳೂ ಲೀಲೆಗಳೂ ಪವಾಡಗಳೂ ಅವರ ಜೀವನದೊಳಗಿನ ಹೂರಣವಾಗಿ ಹೋಗಿವೆ—ಅವರ ಚರಿತ್ರೆಯಂತೂ ಈ ಭಾವವನ್ನು ಕೊಡುತ್ತದೆ. ಮಹಾಪುರುಷರ ಜೀವನದಲ್ಲಿ ಅದ್ಭುತ ಗಳು ನಡೆಯಬಹುದು; ಆದರೆ ಅವುಗಳನ್ನೇ ಮುಂದುಮಾಡುವುದರಿಂದ ಮನುಷ್ಯ ಸಾಮಾನ್ಯನ ವ್ಯವಹಾರಕ್ಕೆ ಏನು ಪ್ರಯೋಜನ? "ಅವ ರಂತೂ ದೊಡ್ಡವರು, ಹಾಗೆ ಮಾಡಿದರು ಎಂದರೆ ನಾವೂ ಮಾಡುವುದು ಸಾಧ್ಯವೇ?"—ಎಂದು ಮನಸ್ಸನ್ನು ಜೋಲುಬಿಡುವುದಾಗುತ್ತದೆಯೇ ಹೊರತು ಆ ತೇಜಸ್ಸಿನಿಂದ ನಮ್ಮ ಹಣತೆಯನ್ನು ಹತ್ತಿಸಿಕೊಂಡು ನಮ್ಮ ಗುಡಿಸಲನ್ನು ಬೆಳಕುಮಾಡಿಕೊಳ್ಳುವುದಕ್ಕಾಗುವುದಿಲ್ಲ. ಅಲ್ಲದೆ ಅದ್ಭುತಕಾರ್ಯಗಳು ನಾಟಕಶಾಲೆಯ ಹೊರಗಡೆ ನಡೆಯುತ್ತಿರುವ ವಾದ್ಯಗಳ ಹಾಗೆ. ಅವುಗಳ ಮುಂದೆ ಪದ್ಮಾಸನ ಹಾಕಿಕೊಂಡು ಪರಿಷ್ಕಾ ರವಾಗಿ ಕುಳಿತುಬಿಡುವವನಿಗೆ ನಾಟಕದ ನೋಟವೇ ತಪ್ಪಿಹೋಗುತ್ತದೆ.

"ರಾಮದಾಸ ಸ್ವಾಮಿಗಳ ಚರಿತ್ರೆ" ಯೂ ಸ್ವಲ್ಪ ಈ ಜಾತಿಯ ಗ್ರಂಥವಾಗಿದೆ; ಆದರೂ ಇದರ ಹಿಂದೆ ಪ್ರಕಟವಾದ "ಶೇಷಾಚಲ ಸಾಧುಗಳ ಚರಿತ್ರೆ"ಗಿಂತ ಉತ್ತಮ. ಈ ಸಾಧುಗಳ ಸತ್ಸಂಗವು ದೊರೆತ ವರಿಂದ ಅವರ ಜೀವನ ವಿಚಾರಗಳನ್ನು ಕೇಳಿಬಲ್ಲೆವು. ಆದರೆ ಯಾವ ಘಟನೆಗಳಿಂದ ಅವರಲ್ಲಿ ನಮಗೆ ಪೂಜ್ಯತೆಯುಂಟಾಗಿದೆಯೋ ಅವು ಆ ಚರಿತ್ರೆಯಲ್ಲಿ ಅದೃಶ್ಯವಾಗಿ ಅಥವಾ ಮೂಲೆಗೆ ಬಿದ್ದು ಮೊದಲಿಂದ ತುದಿಯವರೆಗೆ ಬರಿಯ ಅದ್ಭುತಗಳೇ ತುಂಬಿ ಹೋಗಿವೆ. ಈ ಗ್ರಂಥಗಳು ಜನರಂಜಕವಾಗಿರುವುದೇನೋ ನಿಜ; ಆದರೆ ವಸ್ತುತಃ ಈ ಕ್ರಮದಿಂದ ಯಾಥಾರ್ಥ್ಯಕ್ಕೆ ಎಷ್ಟುಮಟ್ಟಿಗೆ ಗೌರವ ಕೊಟ್ಟಂತಾ ಯಿತು? ವ್ಯಕ್ತಿಜ್ಞಾನವು ಏಕಮುಖವಾಗಿ ಆದಂತಾಯಿತೇ ಸರ್ವತೋ

ಮುಖವಾಗಿಯೂ ಆಯಿತೇ? ರಾಮದಾಸರು ರಾಮಲಕ್ಷ್ಮಣರೊಡನೆ ಮಾತನಾಡಿದರೋ ಬಿಟ್ಟರೋ, ಅವರ ಜೊತೆಯಲ್ಲಿ ಊಟ ಮಾಡಿದರೋ ಬಿಟ್ಟರೋ, ಅವರು ಆಂಜನೇಯನ ಅವತಾರ ಹೌದೋ ಅಲ್ಲವೋ ಇದರ ವಿಸ್ತರದಿಂದ ಏನು ಫಲ? ಜನಗಳಲ್ಲಿ ಭಕ್ತಿಯುಂಟಾಗಬಹುದೆಂದರೆ ಇದೇನು ಹರಿಕಥೆಯೇ? ಇಂಥ ಮರಳಿನ ಮೇಲೆ ಕಟ್ಟಿದ ಭಕ್ತಿಮಂದಿರಕ್ಕೆ, ಅದರಲ್ಲಿಯೂ ಈಗಿನ ಕಾಲದಲ್ಲಿ, ಎಂದಿದ್ದರೂ ಅಪಾಯವೇ. ಅವರ ಜೀವನದಲ್ಲಿ ದೃಢವಾದ ತಳಪಾಯಕ್ಕೆ ಅನುಕೂಲವಾದ ಬೇರೆ ಸಾಮಗ್ರಿಗಳು ಸಿಕ್ಕದಿದ್ದರಂತೂ ಸರಿ; ಅವು ಯಥೇಚ್ಛವಾಗಿ ಸಿಕ್ಕುವಾಗಲೂ ಕಿಂಕೃತಿಯೇಕೆ? ಶ್ರೀಕೃಷ್ಣನು ಅರ್ಜುನನನ್ನೂ ವಿದ್ಯಾರಣ್ಯರು ಹರಿಹರನನ್ನೂ ಉದ್ದೀಪನಗೊಳಿಸಿ ಅವರು ಕರ್ಮದಲ್ಲಿ ತೊಡಗುವಂತೆ ಮಾಡಿ ಅವರಿಗೆ ಸಾರಥ್ಯಮಾಡಿದಂತೆ ರಾಮದಾಸರೂ ಶಿವಾಜಿಯನ್ನು ಕರ್ಮಪರನನ್ನಾಗಿಸಿ ಅವನಿಗೆ ಸಾರಥ್ಯಮಾಡಿದರು. ನಿಜವಾದ—ಎಂದರೆ ಸ್ವಾರ್ಥತ್ಯಾಗಪೂರ್ವಕವಾದ—ಕರ್ಮವೂ ನಿಜವಾದ ಭಕ್ತಿಯೂ ಎರಡೂ ಫಲದಲ್ಲಿ ಒಂದೇ ಆಗಿ ಪರಿಣಮಿಸುವುವು. ಆದರೂ ಈಗಿನ ಕಾಲಕ್ಕೆ ಭಕ್ತಿಬೋಧೆಯು ಹರಿಕಥೆಗಳಿಗಿರಲಿ; ಮಹಾಪುರುಷರ ಜೀವನ ಚರಿತ್ರೆಗಳಿಂದ ಕರ್ಮೋದ್ದೀಪನವಾಗಬೇಕು. ರಾಮದಾಸರ ಮತ್ತು ವಿದ್ಯಾರಣ್ಯರ ಚರಿತ್ರೆಯಿಂದಲೂ ಇದು ಆಗದಿದ್ದರೆ ಏನು ಗತಿ?

ವೇ|| ರಾಮಚಂದ್ರ ತ್ರ್ಯಂಬಕ ಕರ್ಪೂರರವರು ಬರೆದಿರುವ ಗ್ರಂಥವು ತಕ್ಕಮಟ್ಟಿಗೆ ದೊಡ್ಡದಾಗಿದೆ; ಬಹುವಿಷಯುಗಳಿಂದ ತುಂಬಿದೆ. ಆದರೆ ಅವರು ಯಾವ ಯಾವ ಆಧಾರಗಳ ಮೇಲೆ ಈ ಗ್ರಂಥವನ್ನು ಬರೆದಿದ್ದಾರೆಂಬುದನ್ನು ತಿಳಿಸಿಲ್ಲ. ಚರಿತ್ರಲೇಖನದಲ್ಲಿ ಆಧಾರಗ್ರಂಥಗಳು ಯೋಗ್ಯವಾಗಿರತಕ್ಕದ್ದು ಬಹು ಮುಖ್ಯವಾದ ಸಂಗತಿ. ಅವುಗಳ ಗುಣದೋಷಗಳ ಮೇಲೆ ಚರಿತ್ರೆಯ ಗುಣದೋಷಗಳೂ ಹೋಗುತ್ತವೆ.

ಶೈಲಿಯು ಸುಲಭವಾಗಿದೆ. ಭಾಷೆಯಲ್ಲಿ ಧಾರವಾಡದವರಿಗಾಗಲಿ, ಮೈಸೂರು ಮಂಗಳೂರು ಕಡೆಯವರಿಗಾಗಲಿ ವಿಶೇಷ ವೈಲಕ್ಷಣ್ಯಗಳಿರುವಂತೆ ಕಾಣುವುದಿಲ್ಲ. "ಸದ್ಬೋಧಚಂದ್ರಿಕೆ" "ಸದ್ಗುರು"ಗಳ ಶೈಲಿಯೇ ಹೀಗೆಂದು ಹೇಳಬಹುದು.

೨೬.

# ವಿದ್ಯಾರಣ್ಯವಿಜಯ

ಕರ್ಣಾಟಕದೇಶದಲ್ಲಿ ಪೌರುಷವನ್ನು ಬಿತ್ತಿ ಬೆಳೆದು, ಸಂಪತ್ತು ಸುಖಶಾಂತಿಗಳನ್ನು ತಂದು, ದೇಶವನ್ನು ಪುನರುಜ್ಜೀವನಗೊಳಿಸಿದ ಶ್ರೀ ವಿದ್ಯಾರಣ್ಯರನ್ನು ನೆನೆಸಿಕೊಂಡು ಈಗ ನಮ್ಮ ದೇಶದ ಕವಿಗಳೂ ವಿದ್ವಾಂಸರೂ ಅವರ ಮತ್ತು ಅವರ ಕಾಲದ ಚರಿತ್ರೆಯನ್ನು ವ್ಯಾಸಂಗ ಮಾಡುತ್ತ ಗ್ರಂಥಗಳನ್ನು ಬರೆಯುತ್ತಿರುವುದು ಒಂದು ಶುಭಸೂಚನೆಯಾಗಿದೆ. ಈಗ ನಾಲ್ಕಾರು ವರ್ಷಗಳಿಂದೀಚೆಗೆ ಈ ವಿಷಯವಾಗಿ ಹಲವು ಗದ್ಯ ಪದ್ಯ ನಾಟಕ ಗ್ರಂಥಗಳು ಹುಟ್ಟಿ ಗೌರವವನ್ನು ಪಡೆದಿವೆ. ಇಂಥ ಗ್ರಂಥಗಳನ್ನು ಬರೆದಿರುವವರಲ್ಲಿ ಮ|| ಡಿ. ವಿ. ಗುಂಡಪ್ಪನವರು ಗಣ್ಯರಾಗಿದ್ದಾರೆ. ಈ ವಿಷಯವನ್ನು ಅವರು ಎಷ್ಟು ಶ್ರಮವಹಿಸಿ ವ್ಯಾಸಂಗಮಾಡಿದ್ದಾರೆಂಬುದನ್ನೂ, ತಮ್ಮ ವ್ಯಾಸಂಗದ ಫಲವನ್ನು ಎಷ್ಟು ತೃಪ್ತಿಕರವಾಗಿ ಕನ್ನಡಿಗರಿಗೆ ಕೊಟ್ಟಿದ್ದಾರೆಂಬುದನ್ನೂ ತಿಳಿದುಕೊಳ್ಳಬೇಕಾದರೆ ಅವರ "ಶ್ರೀ ವಿದ್ಯಾರಣ್ಯರು ಮತ್ತು ಅವರ ಕಾಲ" ಎಂಬ ಗದ್ಯ ಗ್ರಂಥವನ್ನು ನೋಡಬೇಕು. ಅವರು ಈಗ್ಗೆ ಸುಮಾರು ನಾಲ್ಕು ವರ್ಷಗಳ ಕೆಳಗೆ ಆ ಗ್ರಂಥವನ್ನು ಪ್ರಕಟಿಸಿದಾಗ ಅದರ "ವಿಜ್ಞಾಪನೆ" ಯಲ್ಲಿ ಹೀಗೆಂದು ಬರೆದಿದ್ದರು :—

"ಉಪನ್ಯಾಸದ ರೀತಿಯಲ್ಲಿ ಸಮರ್ಪಕವಾಗಿ ಬಣ್ಣಿಸಲಾಗದ ಐತಿಹಾಸಿಕ ತತ್ವಗಳು ಕೆಲವುಂಟು. ಅವುಗಳನ್ನು ಕಾವ್ಯದ ರೀತಿಯಲ್ಲಿ ಜನರ ಊಹಾಶಕ್ತಿಗೆ ಗೋಚರಪಡಿಸಬಹುದು. ಈ ನಂಬಿಕೆಯಿಂದ, ವಿದ್ಯಾರಣ್ಯರ ಕಾರ್ಯರೀತಿಯನ್ನು ತೋರಿಸಲು ಒಂದು 'ನಾಟಕ' ಅಥವಾ ದೃಶ್ಯ ಪ್ರಕರಣವನ್ನು ಬರೆದಿರುವೆನು. ಈ ಉಪನ್ಯಾಸವನ್ನು ಓದುವ ಮಹಾಶಯರು, ಇದರ ಪರಿಶಿಷ್ಟ ಭಾಗವಾದ ಆ 'ನಾಟಕ' ವನ್ನೂ ನೋಡಬೇಕೆಂದು ಬೇಡುತ್ತೇನೆ."

ಆ ನಾಟಕವು ಈಗ "ಶ್ರೀ ವಿದ್ಯಾರಣ್ಯವಿಜಯ" ಎಂಬ ಹೆಸರಿನಿಂದ ಪ್ರಕಟವಾಗಿದೆ. ಬರ್ನಾರ್ಡ್ ಷಾ ಮುಂತಾದವರ (ಸೇಂಟ್ ಜೋನ್ ಇತ್ಯಾದಿ) ಕೆಲವು ಇಂಗ್ಲಿಷ್ ನಾಟಕಗಳನ್ನು ನೋಡಿದವರಿಗೆ

ಸ್ವತಂತ್ರ ಗ್ರಂಥಗಳಂತಿರುವ ಮುನ್ನುಡಿಗಳೂ ಪರಿಶಿಷ್ಟಗಳೂ ಹೊಸ ದಲ್ಲ. ಆದರೆ ಅಲ್ಲಿ ನಾಟಕವೇ ಮುಖ್ಯ; ಮುನ್ನುಡಿ ಪರಿಶಿಷ್ಟಗಳು—ಅವು ಎಷ್ಟೇ ದೊಡ್ಡವಾಗಲಿ—ಕೊಂಬು ಬಾಲಗಳಂತೆ ಗೌಣ. ಇಲ್ಲಿ ಅದು ತಲೆಕೆಳಕಾಗಿದೆ. ಇದರಿಂದ ಗ್ರಂಥಕರ್ತರು ತಮ್ಮ ಗದ್ಯ ಗ್ರಂಥಕ್ಕೆ ಎಷ್ಟು ಪ್ರಾಶಸ್ತ್ಯ ಕೊಟ್ಟಿರುವರೆಂಬುದು ಗೊತ್ತಾಗುತ್ತದೆ. ಅದರೊಳಗೆ ಎಷ್ಟು ವಿದ್ವತ್ತೂ ವ್ಯಾಸಂಗವೂ ಅಡಕವಾಗಿದೆ ಎಂದು ಅರಿತವರು ಯಾರೂ ಅವರೊಡನೆ ಈ ಸಂಬಂಧವಾಗಿ ವಿವಾದ ಮಾಡ ಲಾರರು. ಆ "ನಾಟಕ" ಕ್ಕೂ ಈ "ನಾಟಕ" ಕ್ಕೂ ಇರುವ ಪರಸ್ಪರ ಸ್ವರೂಪ ಭೇದವೂ ಈ ಸ್ಥಾನಭೇದವನ್ನು ಸಮರ್ಥಿಸಬಹುದು.

ಎಂಥ ಸಂಗತಿಗಳನ್ನು ನಾಟಕ ರೂಪದಲ್ಲಿ ಪ್ರತಿಪಾದಿಸಬೇಕು ಮತ್ತು ಏಕೆ ಎಂಬುದನ್ನೂ ಪ್ರಕೃತ ಗ್ರಂಥವು ಎಷ್ಟರಮಟ್ಟಿಗೆ "ನಾಟಕ" ಅಥವಾ "ರೂಪಕ" ವೆಂಬ ಹೆಸರಿಗೆ ಅಧಿಕಾರಿಯಾಗಿದೆ ಎಂಬು ದನ್ನೂ ಗ್ರಂಥಕರ್ತರೇ ವಿಚಾರ ಮಾಡಿದ್ದಾರೆ. ಅವರು ಹೇಳುವು ದೇನೆಂದರೆ :—

"ಐತಿಹಾಸಿಕ ಸಂದರ್ಭಗಳ ಬಾಹ್ಯರೂಪವನ್ನು ಗದ್ಯೋಪನ್ಯಾಸ ರೂಪದ ಚರಿತ್ರೆಯು, ಅಥವಾ ಇತಿಹಾಸವು, ಸ್ಪಷ್ಟವಾದ ರೀತಿ ಯಲ್ಲಿ ವಿವರಿಸಬಲ್ಲದು. ಆದರೆ ಅವುಗಳ ಅಂತಸ್ತತ್ತ್ವವನ್ನು ಅಂತಹ ಉಪನ್ಯಾಸವೊಂದರಿಂದಲೇ ಸ್ಪಷ್ಟಗೊಳಿಸಲು ಆಗಲಾರದು . . . . . . ಸ್ಥೂಲಾಂಶಗಳನ್ನು ನ್ಯೂನಾತಿರೇಕಗಳಿಲ್ಲದಂತೆ ನಿರ್ಧರಿಸಿ ಉಲ್ಲೇಖಿಸು ವುದು ಗದ್ಯಪ್ರಬಂಧದ ಕೆಲಸ. ಆದರೆ ಈ ಬಾಹ್ಯವ್ಯಾಪಾರಗಳ ನಡುವೆ ಅಡಗಿಕೊಂಡಿರುವ ಸೂಕ್ಷ್ಮಾಂಶಗಳು ಕೆಲವು ಬೇರೆ ಇದ್ದೇ ಇರುತ್ತವೆ . . . ಇವುಗಳನ್ನು ಬಹುಮಟ್ಟಿಗೆ ಆಯಾ ಸಂದರ್ಭಗಳಿಗೆ ಸಂಬಂಧ ಪಟ್ಟ ಪ್ರಮುಖ ಪುರುಷರು ಆಡಿದ ಮಾತುಗಳಿಂದಲೂ ತೋರಿದ ನಡತೆಗಳಿಂದಲೂ ಅವರ ಸಾಮಾನ್ಯ ಶೀಲಸ್ವಭಾವಗಳಿಂದಲೂ ಆಗಿನ ಸಾಮಾನ್ಯ ಜನತೆಯ ಆಹಾರ ವ್ಯವಹಾರಗಳ ರೀತಿಯಿಂದಲೂ ಅನು ಮಾನಿಸಬೇಕಾಗುವುದು.

. . . . ಹೊರಮೈಯನ್ನು . . . . ವಚನಪ್ರಬಂಧದಲ್ಲಿ ಕಾಣ

ಬಹುದು . . . ಆದರ ಒಳವನ್ನೈಯನ್ನು ತೋರಿಸುವ ಕೆಲಸವು ಕಾವ್ಯದ ಅಧಿಕಾರಕ್ಕೆ ಸೇರಿದುದು.

. . . . ಈ ಕೃತಿಯು ದೃಶ್ಯಕಾವ್ಯದ ರೂಪವನ್ನು ಧರಿಸಿದ್ದರೂ ಇದನ್ನು 'ನಾಟಕ' ಅಥವಾ 'ರೂಪಕ' ಎಂದು ಆ ಪದಗಳ ವಿಶೇಷಾರ್ಥದಲ್ಲಿ ಕರೆಯಬಹುದೋ ಇಲ್ಲವೋ ಎಂಬ ವಿಷಯದಲ್ಲಿ ಲೇಖಕನಿಗೇ ಸಂದೇಹವುಂಟು . . . . ಇದು ಪಾಶ್ಚಾತ್ಯರೂಪಕ ಪದ್ಧತಿಯನ್ನನುಸರಿಸಿದೆಯೆಂದೂ ಹೇಳಲಾಗುವಂತಿಲ್ಲ . . .

ಆದು ಹೇಗಾದರಾಗಲಿ, ನಮ್ಮ ದೇಶದಲ್ಲಿಯೂ ಇತರ ದೇಶಗಳಲ್ಲಿಯೂ ಪಠ್ಯಕಾವ್ಯಗಳು ಮಾತ್ರವೇ ಆದ ದೃಶ್ಯಕಾವ್ಯಗಳು ಎಷ್ಟೋ ಇವೆ. ಇದು ಅವುಗಳಂತಹುದಿನ್ನೊಂದು ಆದರೂ ಆಗಬಹುದು. ಇದರ ದೃಶ್ಯತೆಯು ಸದ್ಯಃ ಮನಶ್ಚಕ್ಷುವಿಗೆ, ಚರ್ಮಚಕ್ಷುವಿಗಲ್ಲ . . ."

ಮ॥ ಗುಂಡಪ್ಪನವರು ಶ್ರೇಷ್ಠರಾದ ವಿಮರ್ಶಕರು. ಆದ್ದರಿಂದ, ಸಮರ್ಥನಾದ ವೈದ್ಯನು ತನ್ನ ದೇಹಸ್ಥಿತಿಯನ್ನು ತಾನೇ ಪರೀಕ್ಷಿಸಿ ನಿರ್ಧರಿಸಿಕೊಳ್ಳುವಂತೆ, ಅವರು ತಮ್ಮ ಕಾವ್ಯದ ಸ್ವರೂಪವನ್ನು ತಾವೇ ಪರೀಕ್ಷಿಸಿ ಹೇಳಿಕೊಂಡಿದ್ದಾರೆ. ಈ ಅವರ ನಿದಾನವು ಸುಲಭವಾಗಿ ತಳ್ಳಿಹಾಕತಕ್ಕದ್ದಲ್ಲ. ಆದರೆ ಒಬ್ಬ ಡಾಕ್ಟರು ಹೇಳುವುದನ್ನು ಮತ್ತೊಬ್ಬನು ಒಪ್ಪುವುದಿಲ್ಲ—ಅಥವಾ ಪೂರ್ತಿಯಾಗಿ ಅಂಗೀಕರಿಸುವುದಿಲ್ಲ. ಅಲ್ಲದೆ ಎಂಥ ಧನ್ವಂತರಿಗೂ ತನ್ನ ಅಂಗಾಂಗಗಳಲ್ಲಿಯೇ ತನಗೆ ಕಾಣದಿರುವ ಭಾಗಗಳುಂಟು ; ಭ್ರಾಂತಿಗೆ ಅವಕಾಶವುಂಟು. ಆದ್ದರಿಂದ ಒಬ್ಬ ಅಳಲೆಕಾಯಿ ಪಂಡಿತನೂ ಧನ್ವಂತರಿಯ ನಿದಾನವನ್ನು ಪರೀಕ್ಷೆ ಮಾಡಬಾರದೇಕೆ ?

" ಶ್ರೀ ವಿದ್ಯಾರಣ್ಯವಿಜಯ " ವು ಚರಿತ್ರೆ ಉಪನ್ಯಾಸ ಜೀವನ ಚರಿತ್ರೆ ಕಾದಂಬರಿ (?) ಇವುಗಳು ನಾಟಕ ರೂಪದಲ್ಲಿ ಸಮ್ಮಿಳಿತವಾಗಿರುವ ಒಂದು ಕಾವ್ಯವಾಗಿದೆ. ವಸ್ತುಸ್ವರೂಪವೇ ಇದಕ್ಕೆ ಕಾರಣ. " ಶ್ರೀ ವಿದ್ಯಾರಣ್ಯವಿಜಯ (ನಾಟಕ) " ಎಂಬ ಹೆಸರನ್ನು ನೋಡಿದರೆ ಇದನ್ನು ನಾಟಕವೆಂದೇ ಭಾವಿಸಬೇಕೆಂಬುದು ಗ್ರಂಥಕರ್ತರ ಆಶಯವೆಂದು ತೋರುತ್ತದೆ. ಆದರೆ,

" ಈ ಕೃತಿಯು ದೃಶ್ಯಕಾವ್ಯದ ರೂಪವನ್ನು ಧರಿಸಿದ್ದರೂ ಇದನ್ನು 'ನಾಟಕ' ಅಥವಾ 'ರೂಪಕ' ಎಂದು ಆ ಪದಗಳ ವಿಶೇಷಾರ್ಥದಲ್ಲಿ ಕರೆಯಬಹುದೋ ಇಲ್ಲವೋ ಎಂಬ ವಿಷಯದಲ್ಲಿ ಲೇಖಕನಿಗೇ ಸಂದೇಹ ವುಂಟು—ಈ ಪ್ರಬಂಧವು ಒಂದು ರಾಜ್ಯದ ಕಥೆ . . . ಇದರಲ್ಲಿರಬಹು ದಾದ ರಸವೂ ಇತರ ನಾಟಕಗಳಲ್ಲಿರುವಷ್ಟು ಮಟ್ಟಿಗೆ ಇಲ್ಲದೆ ಇರ ಬಹುದು . . . ಇದು ಒಂದು ಬರಿಯ ದೃಶ್ಯಚಿತ್ರಗಳ ಪರಂಪರೆ . . . ಇದು 'ನಾಟಕ' ವೆಂಬ ಹೆಸರನ್ನು ಸಾಮಾನ್ಯಾರ್ಥದಲ್ಲಿ—ಎಂದರೆ ಔಪಚಾರಿಕವಾಗಿ ಮಾತ್ರ—ಇಟ್ಟುಕೊಳ್ಳಬಹುದೆಂದು ತೋರುತ್ತದೆ. . . . ಇದರ ದೃಶ್ಯತೆಯು ಸದ್ಯಃ ಮನಶ್ಚಕ್ಷುವಿಗೆ, ಚರ್ಮಚಕ್ಷುವಿಗಲ್ಲ. . . . ಅವರ (ಮಹಾಜನರ) ದೃಷ್ಟಿಯು ದಯಾರ್ದ್ರವಾಗಿರಲಿ " ಎಂದು ಹೇಳಿ, ಇದನ್ನು ನಾಟಕವೆಂದು ಭಾವಿಸಿಕೊಂಡು ಬಾಯಿತೆಗೆಯಬಹು ದಾದ ಖಂಡನಕಾರರ ಶಸ್ತ್ರಾಸ್ತ್ರಗಳನ್ನು ಉಡುಗಿಸಿ ಬಿಟ್ಟಿರುತ್ತಾರೆ. ಆದ್ದರಿಂದ ಇದನ್ನು ಸಂಪ್ರದಾಯಸಿದ್ಧವಾದ ನಾಟಕದ ದೃಷ್ಟಿಯಿಂದ ವಿಚಾರಮಾಡುವಂತಿಲ್ಲ—ಮಾಡುವುದೂ ಅನ್ಯಾಯ. ಆದರೂ ಈ " ಔಪಚಾರಿಕ " ನಾಟಕವನ್ನಾದರೂ ಬರೆಯುವುದಕ್ಕೆ ಆವಶ್ಯಕತೆ ಉದ್ದೇಶಗಳೇನು, ಅವು ಎಷ್ಟರ ಮಟ್ಟಿಗೆ ಸಿದ್ಧಿಸಿವೆ ಎಂಬಂಶಗಳನ್ನು ಕವಿಸಮಯದ ವಾಸನೆಯನ್ನು ಇಟ್ಟುಕೊಳ್ಳದೆ ವಿಚಾರಮಾಡ ಬಹುದಷ್ಟೆ.

ಒಂದು ವಸ್ತುವನ್ನು ಉಪನ್ಯಾಸವಾಗಿ ಬರೆಯದೆ, ಚರಿತ್ರೆ ಕಾದಂಬರಿಗಳಾಗಿ ಬರೆಯದೆ, ನಾಟಕರೂಪವಾಗಿ ಬರೆಯುವುದರಲ್ಲಿ ವಿಶೇಷವೇನೆಂದು ನೋಡೋಣ. ಉಪನ್ಯಾಸದಲ್ಲಿ ಗ್ರಂಥಕರ್ತನು ತಾನೇತಾನಾಗಿರುವನು ; ಅವನು ಹೇಳಿದ್ದೇ ಮಾತು ; ಮತ್ತೊಬ್ಬರು ಮಧ್ಯೆ ಮಾತಾಡುವಂತಿಲ್ಲ; ಅವನ ವರದಿಗೇ ಆದಷ್ಟು ಅರ್ಥ ಮಾಡಿಕೊಂಡು ಹೋಗಬೇಕು. ಇದಕ್ಕೆ ವಿಷಯವು ಎಷ್ಟು ಖಚಿತ ವಾಗಿ ನಿಶ್ಚಿತವಾಗಿದ್ದರೆ, ಪ್ರತಿಪಾದನ ಕ್ರಮವು ಎಷ್ಟು ಸಂಗ್ರಹ ವಾಗಿದ್ದರೆ, ಅಷ್ಟು ಮೇಲು. ಮನುಷ್ಯರ ಕೈ ಸೋಕದೆ ತಯಾರಾದ ಸೀಮೆಯ ಔಷಧಗಳಂತೆ, ಮಾನವನ ಭಾವಾನುಭಾವಗಳು ಸೋಕದೆ

ಇರುವ ಶಾಸ್ತ್ರಾದಿ ಶುಷ್ಕ ವಿಷಯಗಳು ಇದಕ್ಕೆ ಅತ್ಯುತ್ತಮ. ಇದಕ್ಕಿಂತ ಚರಿತ್ರೆಯಲ್ಲಿಯೂ ಚರಿತ್ರೆಗಿಂತ ಕಾದಂಬರಿಯಲ್ಲಿಯೂ ಕಾದಂಬರಿಗಿಂತ ರೂಪಕದಲ್ಲಿಯೂ ಮನುಷ್ಯ ಸಹವಾಸವು ಹೆಚ್ಚುತ್ತ ಹೋಗುತ್ತದೆ. ಮಾನವ ಪ್ರಪಂಚಕ್ಕೆ ಪ್ರವೇಶ ಮಾಡಿದರೆ, ಅದರ ಅನುಭವವನ್ನು ಎಷ್ಟೆಷ್ಟುಮಟ್ಟಿಗೆ ಸ್ವತಃ ಮಾಡಿಕೊಳ್ಳುತ್ತ ಹೋದರೆ ಆದರ ಫಲವೂ ಪರಿಣಾಮವೂ ಅಷ್ಟಷ್ಟು ಹೆಚ್ಚುತ್ತ ಹೋಗುತ್ತದೆ. ನಾಲ್ಕು ಮೂರಲು ಹನ್ನೆರಡು ಹೊರತು ಹದಿಮೂರಾಗಲಿ ಹತ್ತೊ ವರೆಯಾಗಲಿ ಆಗುವುದಿಲ್ಲ. ಆದನ್ನು ಕಣ್ಣಿನಿಂದ ನೋಡಿದರೂ ಒಂದೇ, ಕೈಯಿಂದ ಎಣಿಸಿದರೂ ಒಂದೇ; ಮತ್ತೊಬ್ಬರು ಹೇಳಿದರೂ ಅದೇ, ತಾವಾಗಿ ತಿಳಿದುಕೊಂಡರೂ ಅಷ್ಟೇ; ಆದರೆ ಮನುಷ್ಯನ ಮಾತುಕಥೆಗಳು ಕಾರ್ಯಕರಣಗಳು ಮಾತ್ರ, ಮತ್ತೊಬ್ಬರ ಮಾತಿನಿಂದ ಗೊತ್ತಾಗುವುದಿರಲಿ, ತಾನಾಗಿ ನೋಡಿದರೂ ಸರಿಯಾಗಿ ಗ್ರಹಿಸುವುದಕ್ಕಾಗುವುದಿಲ್ಲ; ಅವರವರ ಸಂಸ್ಕಾರ ಸ್ವಭಾವ ಬುದ್ಧಿಗಳಿಗನುಸಾರವಾಗಿ ಬೇರೆ ಬೇರೆ ವಿಧವಾಗಿ ಗೋಚರಿಸತಕ್ಕವು. ಆದ್ದರಿಂದ, ಆರಿಯದ ಮಕ್ಕಳಿಗೆ ಆನೆಯನ್ನು ವರ್ಣಿಸಿ ತಿಳಿಸುವುದಕ್ಕಿಂತ ಅದನ್ನೇ ತೋರಿಸುವುದು, ಅಥವಾ ಕಡೆಯ ಪಕ್ಷಕ್ಕೆ ಅದರ ಚಿತ್ರವನ್ನಾದರೂ ತೋರಿಸುವುದು, ಹೇಗೆ ಉತ್ತಮವೋ ಹಾಗೆಯೇ ಕವಿಯು ಒಂದು ಸನ್ನಿವೇಶವನ್ನು ತನ್ನ ಮಾತುಗಳಲ್ಲಿ ವರ್ಣಿಸದೆ ಅದರ ಕರ್ತೃಗಳೇ ಬಂದು ಅದನ್ನು ಸೃಷ್ಟಿಸುವಂತೆ ಮಾಡುವುದು ಉತ್ತಮ. ಆಗ ತಿಂಡಿಯ ವರ್ಣನೆಯನ್ನು ಕೇಳಿ ಹಸಿವಿನಿಂದ ಪೀಡಿತರಾಗುವುದಕ್ಕೆ ಬದಲು, ಸಾಕ್ಷಾತ್ತಾದ ಅನುಭವದಿಂದ ಭಕ್ಷ್ಯ ಭೋಜ್ಯಗಳನ್ನು ತಿಂದು ಸಂತೋಷಪಡುವ ಹಾಗಾಗುವುದು. ಇದಕ್ಕೆ ಕವಿಯು ತಾನು ರಂಗಕ್ಕೆ ಬಂದು ನಿಂತು ನಾಟೀ ರಾಗ ಎಳೆಯುವುದನ್ನು ನಿಲ್ಲಿಸಿ, ಬೇಕಾದ ದೃಶ್ಯಪರಿಕರಗಳನ್ನೂ ಪಾತ್ರಗಳನ್ನೂ ಮುಂದು ಮಾಡಬೇಕು. ಅವರಿಂದ ಮಾತನಾಡಿಸಿ ಕೆಲಸ ಮಾಡಿಸಬೇಕು. ನಾಟಕವು ಆರಂಭವಾಯಿತೆಂದರೆ ಅವನಿಗೆ (ಪಾರ್ಶಿನಾಟಕಗಳ ವಿದೂಷಕನಂತಾಗಲಿ, ತಮಿಳು ನಾಟಕಗಳ ಕೋಡಂಗಿಯಂತಾಗಲಿ) ಮಧ್ಯೆ

ತಲೆಹಾಕುವುದಕ್ಕೆ ಅಪ್ಪಣೆಯಿಲ್ಲ. ಈ ನಿಷೇಧವು ಚರಿತ್ರೆಯಲ್ಲಿ ಸೂಕ್ಷ್ಮ ವಾಗಿಯೂ ವಿಕಲ್ಪವಾಗಿಯೂ ಇದ್ದು, ಕಾದಂಬರಿಯಲ್ಲಿ ಹುಟ್ಟಿ ಬೆಳೆದು, ರೂಪಕದಲ್ಲಿ ಸರ್ವವ್ಯಾಪಿಯಾಗಿ ನಿಲ್ಲುತ್ತದೆ. ತಾತ್ತ್ವಿಕ ಪ್ರಪಂಚದಲ್ಲಿ ಜನರ ಮಾತು ಕಥೆಗಳೂ ಕಾರ್ಯಾಕಾರ್ಯಗಳೂ ಹೇಗೆ ಅವರ ಜೀವ ಸೂಚಕವೋ ಹಾಗೇ ಪಾತ್ರಗಳ ಮಾತುಕಥೆಗಳೂ ಕಾರ್ಯಾಕಾರ್ಯಗಳೂ ಅವುಗಳ ಜೀವಸೂಚಕ. ಅವುಗಳ ಜೀವವೇ ನಾಟಕದ ಜೀವ. ಅವು ಎಷ್ಟೆಷ್ಟು ಅಸ್ವಾಭಾವಿಕವಾಗಿ, ಅನುಭವವಿಲ್ಲದ ವೇಷಧಾರಿಗಳಂತೆಯೋ, ಸೂತ್ರದ ಬೊಂಬೆಗಳಂತೆಯೋ, ಸೂತ್ರಗಳೂ ಇಲ್ಲದ ಬೊಂಬೆಗಳಂತೆಯೋ ಆಗುವವೋ, ನಾಟಕವೂ ಅಷ್ಟಷ್ಟು ಮಟ್ಟಿಗೆ ನಿರ್ಜೀವವಾಗಿ ಹೀನವಾಗಿ ಹೋಗುತ್ತದೆ. ಈ ಅಂಶದಲ್ಲಿ ನೈಪುಣ್ಯ ಒಂದಿದ್ದರೆ ನೋಟಕರಲ್ಲಿ ಸತ್ಯಭ್ರಾಂತಿಯೂ ಆತ್ಮೀಯತೆಯೂ ಉಂಟಾಗಿ ಸ್ಥಾಯಿಭಾವಗಳು ಉದ್ಬುದ್ಧವಾಗಿ, ರಸಾನುಭವವಾಗುವುದು. ಆದ್ದರಿಂದಲೇ ಪ್ರಾಚೀನಲಾಕ್ಷಣಿಕರು ಶ್ರವ್ಯಕಾವ್ಯಗಳಲ್ಲಿ ರೀತಿಗುಣ ಅಲಂಕಾರ ಮುಂತಾದವುಗಳಿಗೆ ಪ್ರಾಶಸ್ತ್ಯ ಹೇಳುತ್ತ ದೃಶ್ಯಕಾವ್ಯಗಳಲ್ಲಿ ಮಾತ್ರ ರಸಕ್ಕೆ ಪ್ರಾಧಾನ್ಯವನ್ನು ಕೊಟ್ಟಿದ್ದರು; ಆದ್ದರಿಂದಲೇ ನಾಟಕವು ಇಂದಿಗೂ ನಾನಾವಿಧವಾದ ರುಚಿ ಸಂಸ್ಕಾರ ಬುದ್ಧಿಶಕ್ತಿಗಳುಳ್ಳ ಜನರಿಗೂ ಆನಂದದಾಯಕವಾಗಿ "ಕಾವ್ಯೇಷು ನಾಟಕಂ ರಮ್ಯಂ" ಎಂಬ ಹೇಳಿಕೆಗೆ ಮೂಲವಾಗಿದೆ.

ರೂಪಕಕ್ಕೂ ಮಿಕ್ಕ ಕಾವ್ಯಜಾತಿಗೂ ಇರುವ ಮತ್ತೊಂದು ಭೇದವು ಬೆಟ್ಟ ಗುಡ್ಡಗಳಲ್ಲಿ ಧುಮುಕಿ ಓಡುವ ಗಿರಿನಿರ್ಝರಿಗೂ, ಮೈದಾನದಲ್ಲಿರುವ ಚಚ್ಚೌಕವಾದ ಸರೋವರಕ್ಕೂ ಇರುವ ವ್ಯತ್ಯಾಸ ದಂತಹುದು. ಎರಡರಲ್ಲಿಯೂ ಇರತಕ್ಕ ಜಲವಸ್ತುವು ಒಂದೇ ಆದರೂ ಒಂದರ ಸೌಂದರ್ಯ ಮತ್ತೊಂದಕ್ಕೆ ಬರುವುದಿಲ್ಲ. ನಾಟಕದ ಕಥೆಯು ವೇಗದಿಂದ ಓಡುತ್ತಿರುತ್ತದೆ. ನಾಟಕ ನೋಡುವುದು ಒಳ್ಳೆಯ ಮೋಟಾರು ಗಾಡಿಯಲ್ಲಿ ವೇಗದಿಂದ ಹೊರಟು ಪಟ್ಟಣದಲ್ಲಿ ನೋಡ ಬೇಕಾದ ಭಾಗಗಳನ್ನೆಲ್ಲಾ ಬೇಗಬೇಗ ನೋಡಿಕೊಂಡು ಮನೆಗೆ ಬಂದು ಬಿಡುವ ಹಾಗೆ. ಅವುಗಳನ್ನೇ ಒಂಟೆತ್ತಿನ ಗಾಡಿಯಲ್ಲಿಯೂ ಹೋಗಿ

ನೋಡಿಕೊಂಡು ಬರಬಹುದು; ಆದರೆ ಅದು ಅಷ್ಟು ಸ್ವಲ್ಪ ಕಾಲದಲ್ಲಿ ಆಗುವುದಿಲ್ಲ. ಅಲ್ಲದೆ ಒಂದನ್ನು ನೋಡುವ ಹೊತ್ತಿಗೆ ಮತ್ತೊಂದರ ಅನುಭವವು ಜೀರ್ಣವಾಗಿ ಹೋಗಿರುತ್ತದೆ. ಆದ್ದರಿಂದ ರಸವತ್ತಾದ ಸನ್ನಿವೇಶಗಳನ್ನು ಮೇಲೆ ಮೇಲೆ ಚರ್ವಣಮಾಡಲು ಸಾಧ್ಯವಾಗುವುದಿಲ್ಲ. ಪಂಚಭಕ್ಷ್ಯ ಪರಮಾನ್ನದ ಔತಣವನ್ನು ಒಂದು ಸಾರಿ ಕುಳಿತು ಊಟಮಾಡದೆ ಇವತ್ತು ಒಂದು ಭಕ್ಷ್ಯವನ್ನೂ ಇನ್ನು ಮೂರು ತಿಂಗಳಿಗೆ ಒಂದನ್ನೂ ಆ ಮೇಲೆ ಹದಿನೈದು ದಿನ ಬಿಟ್ಟುಕೊಂಡು ಮತ್ತೊಂದು ವ್ಯಂಜನವನ್ನೂ (ಇತ್ಯಾದಿ, ಇತ್ಯಾದಿ) ನಾಲ್ಕಾರು ವರ್ಷಗಳ ವರೆಗೆ ಅನುಭವಿಸುತ್ತಿದ್ದು ಅವೆಲ್ಲವನ್ನೂ ಒಟ್ಟುಗೂಡಿಸಿ ಒಂದು ಔತಣದ ಊಟಕ್ಕೆ ಜಮಾಕಟ್ಟಿಕೊಳ್ಳಬೇಕಾದರೆ, ಲೆಕ್ಕಾಚಾರವು ಸರಿಹೋಗದೆ ಭೋಕ್ತೃಗಳಿಂದ ದೊಡ್ಡ ಆಕ್ಷೇಪಣೆ ಬರುವುದು. ಅಲ್ಲದೆ (ಮೋಟಾರಿನಲ್ಲಿಯೇ ಇನ್ನೂ ಸ್ವಲ್ಪದೂರ ಹೋಗೋಣ!) ಸೊಗಸಾದ ವಸ್ತುಗಳನ್ನು ನೋಡುವುದಕ್ಕೆ ಹೋದಾಗ ಮೋಟಾರಿನಲ್ಲಿ ಹೋಗುತ್ತಿದ್ದೇವೆಂಬ ದೊಡ್ಡತನದ ಪರಿಜ್ಞಾನವೂ ಅದರ ವೇಗವೂ ಸೇರಿ ಬರುವ ಒಂದು ಸುಖವು, ಕುಂಟಿಕೊಂಡು ಹೋಗುವ ಒಂಟೆತ್ತಿನ ಗಾಡಿಯಿಂದ ಬರುವುದಿಲ್ಲ.

ಇವಲ್ಲದೆ ರಮಣೀಯವಾದ ವಸ್ತು, ಚಮತ್ಕಾರವಾದ ಸಂವಿಧಾನ ರಸವತ್ತಾದ ಸನ್ನಿವೇಶಗಳು, ಪಾತ್ರಗಳ ಪ್ರದರ್ಶನ, ಸಂಭಾಷಣೆಯಲ್ಲಿ ನೈಸರ್ಗಿಕತೆ, ಇವುಗಳ ಫಲವಾಗಿ ರಸೋದ್ಬೋಧ, ಇವೆಲ್ಲಾ ಕಾದಂಬರಿಯಂತೆ ನಾಟಕದಲ್ಲಿಯೂ ಇರುವುವು. ಆದರೆ ಇವೆಲ್ಲಕ್ಕೂ ಕಾದಂಬರಿಗಿಂತಲೂ ನಾಟಕದಲ್ಲಿ ಅತಿಶಯ ಹೆಚ್ಚಾದರೂ ನಾಟಕಕರ್ತನಿಗೆ ಸ್ವಾತಂತ್ರ್ಯವೂ ಅವಕಾಶವೂ ಕಡಿಮೆ. ಹೀಗೆ ಕೈಕಾಲು ಕಟ್ಟಿಸಿಕೊಂಡು ಅಲ್ಪಾವಕಾಶದಲ್ಲಿ ಅವನು ಅರಮನೆಯನ್ನು ಕಟ್ಟಬೇಕಾಗಿದೆ. ಇದರಿಂದಲೇ ನಾಟಕ ಬರೆಯುವುದು ಕಷ್ಟ; ಬರೆದರೆ ಅವನಿಗೆ ಉತ್ಕರ್ಷ.

ಈ ಉತ್ಕರ್ಷದಾಯಕವಾದ ವಿಶೇಷಲಕ್ಷಣಗಳಿಲ್ಲದಿದ್ದರೆ ನಾಟಕವು ನಾಟಕವಾಗುವುದಿಲ್ಲ—ನಾಟಕದ ಆಕಾರವಿದ್ದರೂ ನಾಟಕದ ಅಂದವೂ ನಾಟಕದ ಫಲವೂ ಬರುವುದಿಲ್ಲ; ಒಂದು ದೊಡ್ಡ ಮರವನ್ನು

ಕಿತ್ತು ತಲೆಕೆಳಗಾಗಿ ನಿಲ್ಲಿಸಿದಂತೆ ಆಗುತ್ತದೆ. ಅಂಥ ನಾಟಕಕ್ಕೆ ಬದಲಾಗಿ ಪ್ರತಿಪಾದ್ಯ ವಿಷಯವನ್ನು ಉಪನ್ಯಾಸ ರೂಪದಲ್ಲೇ ಹೇಳಿ ಆಯಾ ಪಾಠಕರು ಅವರವರ ಪ್ರತಿಭೆಗೆ ಅನುಗುಣವಾಗಿ ಅದನ್ನು ಪುಷ್ಟೀಕರಿಸಿಕೊಳ್ಳುವಂತೆ ಬಿಡುವುದು ಮೇಲು.

"ಪಠ್ಯನಾಟಕಗಳು" ಅಥವಾ "ಶ್ರವ್ಯ ರೂಪಕ"ಗಳಲ್ಲಿ ಮೇಲೆ ಹೇಳಿದ ಶುದ್ಧರೂಪಕದ ಲಕ್ಷಣಗಳೆಲ್ಲಾ ಇರುವುದಿಲ್ಲ. ಆದರೂ ನೀತಿ ಕಾವ್ಯ ನರಸಿಂಹಾವತಾರ ತುಂಬುರುಗಾನ ಇವುಗಳಂತೆ ಈ ವಿರೋಧಾಭಾಸವನ್ನೂ ಅಂಗೀಕರಿಸಬಹುದು. ಇವು ಅನೇಕ ವೇಳೆ ಅಭಿನಯಕ್ಕೆ ಅನುಕೂಲವಾಗಿಲ್ಲದಿರುವುದರಿಂದ ಪಠ್ಯವೆನಿಸಿಕೊಳ್ಳುತ್ತವೆಯೇ ಹೊರತು, ಓದುವುದಕ್ಕೆ ಬಹು ಆನಂದಕರವಾಗಿರುತ್ತವೆಂದಲ್ಲ. ಏಕೆಂದರೆ ಇಂಥವುಗಳಲ್ಲಿ—ಅವುಗಳ ಗಾತ್ರವಿರಲಿ! ಏಕೆಂದರೆ ಗೇಟೆ, ಥಾಮಸ್ ಹಾರ್ಡಿ, ಬರ್ನಾರ್ಡ್‌ಷಾ, ಇಬ್ಸೆನ್ ಮುಂತಾದ ಪಾಶ್ಚಾತ್ಯ ಲೇಖಕರ ಈ ವಿಧವಾದ ಗ್ರಂಥಗಳು ಒಂದೊಂದು ಐನೂರು ಪುಟಗಳಿಂದ ಸಾವಿರ ಪುಟಗಳವರೆಗೂ ಇರುವುದುಂಟು. ಇಂಥವುಗಳಲ್ಲಿ—ಕಥೆಯು ಹೆಚ್ಚಾಗಿರುವುದಿಲ್ಲ. ಇದ್ದರೂ ಅದರಲ್ಲಿ ಸುಪರಿಚಿತವಾದ ರಸಗಳು ಇರುವುದಿಲ್ಲ. ಎಲ್ಲರಿಗೂ ರುಚಿಸುವಂಥ ಸರ್ವಸಾಮಾನ್ಯತೆ ಇರುವುದಿಲ್ಲ, ಕಥೆಯೂ ಬೇಗ ಸಾಗುವುದಿಲ್ಲ. ಒಂದೊಂದು ಪಾತ್ರವೂ ಒಂದೊಂದು "ಲೆಕ್ಚರ್ ಕೊಡ್ತೇನು; ಲಾಲ್ಸ್ಬೇಕು" ಎಂದು ಹೊರಡುವುದುಂಟು. ಇದರಿಂದ ಇವುಗಳನ್ನು ಆಮೂಲಾಗ್ರವಾಗಿ ಉತ್ಸಾಹದಿಂದ ಓದುವವರೂ ಕಡಿಮೆ.

ಈ ವಿಧವಾದ ದೋಷಗಳನ್ನು—ಅಥವಾ ವೈಲಕ್ಷಣ್ಯಗಳನ್ನು—"ವಿದ್ಯಾರಣ್ಯ ವಿಜಯ"ದಲ್ಲಿಯೂ ಕಂಡೇ ಬಹುಶಃ ಮ|| ಗುಂಡಪ್ಪನವರು ಇದನ್ನು ಮೇಲೆ ಕಂಡ ಗ್ರಂಥದ ಗುಂಪಿಗೆ ಸೇರಿಸಿದ್ದಾರೆ. ಇದರಲ್ಲಿ ನಾಟಕಕ್ಕೆ ಉಚಿತವಾದ ಅನೇಕ ಸನ್ನಿವೇಶಗಳಿವೆ. ಪಾತ್ರಪ್ರತಿಪಾದನ ಕ್ರಮದಲ್ಲಿ ಕಣ್ಣಿಗೆ ಬೀಳುವಂಥ ವಿಶೇಷಾಂಶವೇನೂ ಇಲ್ಲ. ಈ ಗ್ರಂಥದಲ್ಲಿ ವ್ಯಕ್ತಿಪ್ರಾಶಸ್ತ್ಯ ವಿದ್ದರೆ ಈ ಅಂಶಕ್ಕೆ ಇನ್ನೂ ಹೆಚ್ಚಾಗಿ ಗಮನ ಕೊಡುತ್ತಿದ್ದರೆಂದು ತೋರುತ್ತದೆ. ಆದರೆ ಇದು ವ್ಯಕ್ತಿಯ ಅಥವಾ ವ್ಯಕ್ತಿಗಳ ಕಥೆಯಲ್ಲ.—"ರಾಜ್ಯದ ಕಥೆ". ಇದರಲ್ಲಿ ಬರುವ

ಪದ್ಯಭಾಗಗಳು ಕೆಲವು ಕಡೆ ಸಣ್ಣ ಖಂಡಕಾವ್ಯಗಳಾಗುವಷ್ಟು ದೊಡ್ಡ ವಾಗಿವೆ; ವ್ಯಾಸಸ್ತುತಿ, ರಂಗಸ್ತುತಿ ಇವು ವಿಷಯಕ್ಕೆ ತಕ್ಕಂತೆ ಗಂಭೀರ ವಾಗಿಯೂ ಭಕ್ತಿಪೂರ್ವಕವಾಗಿಯೂ ಇವೆ. ಭಾಷೆಯು ಶುದ್ಧವಾಗಿದೆ ಎಂದು ಹೇಳಬೇಕಾಗಿಲ್ಲ. ಮ||ಗುಂಡಪ್ಪನವರ ಭಾಷೆಯು ಯಾವಾ ಗಲೂ ಸುಸಂಸ್ಕೃತವಾಗಿ ಕಡೆದ ಬುಗುರಿಯಂತಿರುತ್ತದೆ. ಆದರೆ ಈ ಗುಣವೇ ಪ್ರಕೃತದಲ್ಲಿ ಕೆಲವು ಕಡೆ ಅವಗುಣವೆಂದು ತೋರುತ್ತದೆ. ಏಕೆಂದರೆ ಪಂಡಿತಪಾಮರರೆಲ್ಲರೂ ಒಂದೇ ಕಾವ್ಯ ಶೈಲಿಯಲ್ಲಿ ಮಾತನಾ ಡುವುದು ಅಸಂಭವ, ಅನೈಸರ್ಗಿಕ. ಇದರಲ್ಲಿ ಸಮುದ್ರದ ಗಾಂಭೀರ್ಯ ವಿದ್ದರೂ, ಆ ಗಾಂಭೀರ್ಯವು ಚಳಿಗೆ ಘನೀಭೂತವಾಗಿ ಒಂದು ಅಖಂಡ ಸ್ಫಟಿಕ ಶಿಲಾಫಲಕದಂತೆ ಹೊಳೆಯುತ್ತಿರುವ ಸಮುದ್ರದ ಗಾಂಭೀ ರ್ಯವೇ ಹೊರತು, ಅಲೆಗಳು ಎದ್ದುಬಿದ್ದು "ವಿಸ್ತೃತ ಗಭೀರ ಭೀಕರ ಗರ್ತ"ಗಳನ್ನೂ "ವಕ್ರಶಿಲೋಚ್ಚಯ"ಗಳನ್ನೂ ಕಲ್ಪಿಸುತ್ತ ನೊರೆಯಿಂದ ಕೂಡಿ ಉಕ್ಕುಕ್ಕಿಬರುವ ಹಸುರು ಸಮುದ್ರದ ಗಾಂಭೀರ್ಯ ವಲ್ಲ. ಲಾಕ್ಷಿಣಕರು, ಹಿಮತ್ಪರ್ವತ, ಆರಿಸುಚತ್ತಿರು, ಕೈಕೊಳ್ಳತಂ— ಮುಂತಾದ ಕೆಲವು ಮುದ್ರಣ ಸ್ಖಾಲಿತ್ಯಗಳಿವೆ. ಮಹಾತ್ಮ್ಯೆ, ಮೂಳ್ಕುಗುಂ, ಮಾರಣೆಯ ದಿನ, ಯವ್ವನ, ಸೇರಿಕ್ಕೊಂಡರು, ಧರ್ಮಿಷ್ಟ ಆವಶ್ಯವಾಗಿ, ತಮ್ಮ ಸ್ವಮತ, ಧೃವ,ಧಾರುಣೀ—ಮುಂತಾದ ಕೆಲವು ಪ್ರಯೋಗಗಳು ವಿಚಾರಣೀಯಗಳಾಗಿವೆ. ಶಿಶಿರರತ್ತು, ಸೌಭ್ರಾತೃತ್ವ, ತನುಕೋಲ, ಬುದ್ಧ್ಯರಿತ್ರ—ಮುಂತಾದವುಗಳನ್ನು ಸ್ವಲ್ಪ ಸುಲಭ ಮಾಡಬಹುದಾಗಿತ್ತು. 'ಘರ್ಮಮುಮೋಜಮುಂ' 'ಯಾವ ಬಾಧೆಯೂ ಆಗದಂತೆ ಮಹಮದೀಯರು ಬಾಳುವುದಾದರೆ' 'ವಿದೇಶಾ ಟನೆಯೊಳ್' 'ಗಾಢದಿ ವೇದಶಾಸ್ತ್ರಂಗಳು'—ಮುಂತಾದವುಗಳನ್ನು ಬೇರೆ ಮಾತುಗಳಲ್ಲಿ ಹೇಳಿದರೆ ಉತ್ತಮ. ಮೊದಲಿನಲ್ಲಿಯೂ ಕೊನೆ ಯಲ್ಲಿಯೂ ಬರುವ ವೃತ್ತದಲ್ಲಿ "ಖದ್ಯೋತ" ಶಬ್ದಕ್ಕೆ 'ಮಿಣುಕು ಹುಳು' ಎಂದೂ ಅರ್ಥವಾಗುವುದರಿಂದ ಅದನ್ನು ಲಾಕ್ಷಣಿಕರು ಒಂದು ದೋಷವೆಂದು ಎಣಿಸಿಯಾರು.

ಇನ್ನು ಫಲಶ್ರುತಿ. ವಿದ್ಯಾರಣ್ಯರು ನಮ್ಮವರು; ಕರ್ಣಾಟಕ

ರಾಜ್ಯಸ್ಥಾಪಕರು; ಕರ್ಣಾಟದೇಶೋದ್ಧಾರಕರು; ಆದ್ದರಿಂದ ಅವರ ಚರಿತ್ರೆಯನ್ನು ಓದುವುದು ಕನ್ನಡಿಗರೆಲ್ಲರಿಗೂ ಶ್ರೇಯಸ್ಸು. ಈ ಭಕ್ತಿ ಭಾವವಿಲ್ಲದೆ ಪ್ರಕೃತಗ್ರಂಥವನ್ನು ಓದಿದರೆ ಮತಾಭಿಮಾನವಿಲ್ಲದೆ ಮಣಿ ಮಂಜರಿಯನ್ನು ಓದಿದಂತೆ ಆಗುತ್ತದೆ.

೨೭.

---

# ಅರುಣ, ಕಮಲ

ಇವು ಹೊಸದಾಗಿ ಹೊರಟ ಎರಡು ಪತ್ರಿಕೆಗಳು. ಮೊದಲನೆಯದು ಶಿವಮೊಗ್ಗದ ಹೈಸ್ಕೂಲಿನಿಂದಲೂ, ಎರಡನೆಯದು ಹಾಸನದ ಹೈಸ್ಕೂಲಿನಿಂದಲೂ ಪ್ರಕಟವಾಗುತ್ತಿದೆ. ಇದರಂತೆ ಬೆಂಗಳೂರು ತುಮಕೂರು ಮುಂತಾದ ಇನ್ನು ಕೆಲವು ಹೈಸ್ಕೂಲಿನವರೂ ತಮ್ಮ ತಮ್ಮ ಪತ್ರಿಕೆಗಳನ್ನು ಹೊರಡಿಸುತ್ತಿದ್ದಾರೆ. ಆ ಕೆಲಸವನ್ನು ಮಾಡದಿರುವ ಸ್ಕೂಲುಗಳವರು ಇನ್ನೂ ಮಾಡಿಲ್ಲವಲ್ಲಾ ಎಂದು ಕೊರಗುತ್ತಲೋ ಯತ್ನಿಸುತ್ತಲೋ ಇದ್ದಾರೆ. ಸಂಘಗಳೂ ಪತ್ರಿಕೆಗಳೂ ಈಗ ಓದುವ ಹುಡುಗರಿಗೆ ಟೋಪಿ ಹೇಗೋ ಹಾಗೆ, ಸ್ಕೂಲುಗಳಿಗೆ ಒಂದು ಕಿರೀಟವೆಂಬ ಭಾವವು ಉತ್ಪನ್ನವಾಗಿರುವಂತಿದೆ. ಪತ್ರಿಕಾಲೇಖನ ಚಾಲನಾದಿ ಕಾರ್ಯಗಳು ಹೈಸ್ಕೂಲಿನ ಹುಡುಗರಿಗೇ ಸಾಧ್ಯವಾಗಿರುವುದು ಮುಂದಿನ ಸಾಹಿತ್ಯ ಶುಭೋದಯಕ್ಕೆ ಸೂಚಕವಾಗಿದೆ. ಆದರೆ ಇಂಥ ಪತ್ರಿಕೆಗಳ ಉದ್ದೇಶವೇನು? ಉದ್ದೇಶವನ್ನು ಖಚಿತವಾಗಿ ಇಟ್ಟುಕೊಳ್ಳದೆ ಅದು ಈಡೇರುವುದಕ್ಕೆ ತಕ್ಕ ಸಾಧನಗಳನ್ನು ನಿಷ್ಕೃಷ್ಟವಾಗಿ ಏರ್ಪಡಿಸಿಕೊಳ್ಳದೆ ಹೋದರೆ ಮದ್ದಿನಲ್ಲಿ ಏನು ಮಾಡಬೇಕೆಂದು ತಿಳಿಯದೆ ಸುಮ್ಮನೆ ಅದನ್ನು ಹೊತ್ತಿಸಿ ಬುರುಬುರನೆ ಉರಿಸಿದಂತಾಗುವುದು. ಪ್ರತಿಯೊಂದು ಸ್ಕೂಲಿನವರೂ ತಮ್ಮ ತಮ್ಮ ಸ್ಕೂಲಿನ ಅಥವಾ ಸಂಘದ ವೃತ್ತಾಂತಗಳನ್ನು ತಿಳಿಸಬಹುದು ; ತಮ್ಮ ತಮ್ಮ ಹೆಸರಿನಲ್ಲಿ ಲೇಖನಗಳನ್ನು ಪ್ರಕಟಿಸಿ ಕೀರ್ತಿ ಗೌರವಗಳನ್ನು ಸಂಪಾದಿಸಬಹುದು. ತಮ್ಮ ನೆಂಟರಿಷ್ಟರಿಗೆ ಹೆಮ್ಮೆ ತರಬಹುದು. ಬರವಣಿಗೆಯನ್ನು ಅಭ್ಯಾಸ ಮಾಡಬಹುದು. ಜನರಿಗೆ ಹೊಸ ಹೊಸ ಸಂಗತಿಗಳನ್ನು ಹೊಸ ಹೊಸ ರೀತಿಯಲ್ಲಿ ತಿಳಿಸಿ ಜ್ಞಾನಾಭಿವೃದ್ಧಿಮಾಡಿ ಆನಂದಗೊಳಿಸಬಹುದು. ಇವೇ ಮುಂತಾದವುಗಳು ಉದ್ದೇಶಗಳಷ್ಟೆ. ಆದರೆ ಕನ್ನಡ ದೇಶದ ಹೈಸ್ಕೂಲುಗಳಿಂದ ಇಂಗ್ಲಿಷ್ ಪತ್ರಿಕೆ ಹೊರಟರೆ ಏನು ಪ್ರಯೋಜನ? ಇವುಗಳಲ್ಲಿ ಎಂಥ ಉತ್ತಮವಾದ ಇಂಗ್ಲಿಷ್ ಲೇಖನ ಬರಲಿ ಇಂಗ್ಲಿಷ್ ಓದಿರುವವರಿಗೆ ಅವು ಸಪ್ಪೆಸಾರು. ಬರೆದವರಿಗೆ ಅವರ ಬರಹ

ಮುದ್ದಾಗಿರಬಹುದು; ಅದು ಬೇರೆ ವಿಚಾರ. ಆದರೆ ಅದೇ ವಿಷಯ ಗಳನ್ನೇ ಕನ್ನಡದಲ್ಲಿ ಬರೆದರೆ ಅದನ್ನು ಓದುವವರಿಗೆ ಎಷ್ಟೋ ಲಾಭ— ಮೂರು ಕಾಸು ಇದ್ದವನಿಗೆ ಒಂದು ಬಿಡಿಕಾಸು ಸಿಕ್ಕಿದ ಹಾಗೆ. ಇಂಗ್ಲಿ ಷಿನವರು ಐಶ್ವರ್ಯವಂತರು; ಅವರು ಪೌಂಡು ಷಿಲಿಂಗ್ ಪೆನ್ಸ್ ನವರು; ಇವರಿಗೆ ಬಿಡಿಕಾಸು ಮಾನ್ಯವಾಗುತ್ತದೆಯೇ? ಪ್ರಾಯಶಃ ಅವ ರಲ್ಲಿ ಭಿಕ್ಷುಕನೂ ಒಂದಾಣೆಗೆ ಕಡಮೆಯಾದ ಭಿಕ್ಷವನ್ನು ಮುಟ್ಟನು. ಲೇಖಕರಿಗೆ ಕೀರ್ತಿ ಗೌರವಗಳು ಹೇಗಿದ್ದರೂ ಬರುತ್ತವೆ.—ಮಾತೃ ಭಾಷೆಯಲ್ಲಿಯೇ ಹೆಚ್ಚು ಸಂಭವ. ಅದರಲ್ಲಿ ಬರೆಯುವುದಕ್ಕೆ ಬರುವು ದಿಲ್ಲವೆಂಬುದು ನಾಚಿಕೆಕೇಡು! ಅನ್ಯಭಾಷೆಯಲ್ಲಿ ಬರೆದು ಜಹಗೀರಿ ಹಾಕಿಸಿಕೊಳ್ಳುವುದಕ್ಕಿಂತ ಸ್ವಭಾಷೆಯಲ್ಲಿ ಮುಲುಕಿ ತಪ್ಪು ಮಾಡು ವುದು ಶ್ರೇಯಸ್ಸು. ಚೆನ್ನಾಗಿ ಬರೆಯಬಲ್ಲೆವೆಂದು ಧೈರ್ಯವಿರುವವ ರೆಲ್ಲ ಇಂಗ್ಲಿಷಿಗೆ ಹೋಗಿಬಿಟ್ಟರೆ ಕನ್ನಡದ ಗತಿಯೇನು? ಇಂಗ್ಲಿಷಿಗೆ ಹೋಗಲಾರದವರು ಅಪ್ಪರ್‌ಸೆಕೆಂಡರಿಗೂ ವಿದ್ವತ್ಪರೀಕ್ಷೆಗೂ ಹೋಗು ತ್ತಿಲ್ಲವೇ ಹಾಗೆ ತಾನೆ! ಕೆಲವು ಪತ್ರಿಕೆಗಳಲ್ಲಿ ಕನ್ನಡ ಲೇಖನ ಗಳೇನೋ ಇವೆ; ಆದರೆ ಅವು ಕೀಳುಜಾತಿಯವರನ್ನು ಬಾಗಿಲಿನ ಹತ್ತಿರ ಕೂರಿಸಿ ಅನ್ನ ಹಾಕುವ ಹಾಗೆ ಎಲ್ಲೋ ಸಂಕೋಚದಿಂದ ಬರು ತ್ತಿವೆ. 'ಅರುಣ' ಎಂಬಂಥ ಕನ್ನಡ ಹೆಸರೂ ಲಕ್ಷ್ಮೀ, ಸರಸ್ವತಿ ವಿಶ್ವೇಶ್ವರಯ್ಯನವರು ಇಂಥ ಚಿತ್ರಗಳೂ ಇರತಕ್ಕ ಶಿವಮೊಗ್ಗೆಯ ಪತ್ರಿಕೆಯು ಈ ವಿಚಾರದಲ್ಲಿ ಆದರ್ಶ ಸ್ವರೂಪವಾಗಿದೆ. ಇಂಗ್ಲಿಷಿನಲ್ಲಿ ಬರೆಯಲೇಬಾರದೆಂಬುದು ನಮ್ಮ ಅಭಿಪ್ರಾಯವಲ್ಲ. ನಮ್ಮ ದೇಶಭಾಷೆ ಯನ್ನರಿಯದವರಿಗೆ ವಿಷಯಗಳನ್ನು ತಿಳಿಸಲು ಅದನ್ನು ಬಿಟ್ಟರೆ ಗತಿ ಯಿಲ್ಲ. ಇಂಗ್ಲಿಷಿನಿಂದ ಬಂದಿರುವ ತಪ್ಪು ತಿಳಿವಳಿಕೆ ಅಜ್ಞಾನ ಅವಿ ವೇಕಗಳನ್ನು ಅದರ ಮೂಲಕವೇ ನಿವಾರಣೆ ಮಾಡಬೇಕು. ಅಂಥ ಕಾರ್ಯಗಳು ಹೈಸ್ಕೂಲಿನ ಮಾಸಪತ್ರಿಕೆ ಅಥವಾ ತ್ರೈಮಾಸ ಪತ್ರಿಕೆ ಗಳಿಗೆ ಏನಿವೆ? ಕೆಲವು ಪತ್ರಿಕೆಗಳ ಚಾಲಕರೂ ಲೇಖಕರೂ ಅನ್ಯ ದೇಶೀಯರು, ಬೇರೆ ಮಾತಿನವರು. ಆದ್ದರಿಂದ ಸ್ವಲ್ಪ ಕಷ್ಟ; ಇಂಥ ಕಷ್ಟ ಇತರ ಕಡೆಗಳಲ್ಲಿಯೂ ಇದೆ. ಉದಾಹರಣೆ—ಮೈಸೂರಿನ ವಿಶ್ವ

ವಿದ್ಯಾಲಯದವರಿಗೆ ನಾನಾ ಶಾಸ್ತ್ರಗಳ ಮೇಲೆ ಕನ್ನಡದಲ್ಲಿ ಉಪನ್ಯಾಸಗಳನ್ನು ಕೊಡಿಸಬೇಕೆಂದು ಆಶೆ. ಆದರೆ ಆಯಾ ವಿಷಯಗಳನ್ನು ಅರಿತ ವಿಶಾರದರು ಕನ್ನಡವನ್ನು ಅರಿಯರು. ಅರಿತಿದ್ದರೂ ಅದರಲ್ಲಿ ಹೇಳಲಾರದಂಥವರು ಕೆಲವರು. ಅವರ ಕಷ್ಟ ಹೇಗಾದರೂ ಇರಲಿ, ಮೈಸೂರು ದೇಶೀಯರು, ಕನ್ನಡದಲ್ಲಿ ಆಸಕ್ತಿಯಿರುವವರು, ಅಗತ್ಯವಿಲ್ಲದ ಕಡೆಯೂ ಇಂಗ್ಲಿಷನ್ನು ನೆಟ್ಟು ಕಳೆ ಬೆಳೆಸಿದರೆ ನಮ್ಮ ಹೂವಿನ ಗಿಡ ದೊಡ್ಡದಾಗಿ ಅದರಲ್ಲಿ ಹೂ ಬಿಟ್ಟೀತು ಹೇಗೆ? ಇನ್ನೊಂದು ಮಾತು. ಈ ಪತ್ರಿಕೆಗಳೆಲ್ಲವೂ ಒಂದಾಗಿ ವಿದ್ಯಾಭ್ಯಾಸದ ಇಲಾಖೆಯ ಆಶ್ರಯದಲ್ಲಿ ಉತ್ತಮವಾಗಿ ನಡೆಯಬಾರದೇಕೆ?

ಅರುಣದಲ್ಲಿ ಶ್ರೀನಿವಾಸರ ಕೆಲವು ಸಣ್ಣ ಕಥೆಗಳ ಮೇಲೆ ಬರೆದಿರುವ ವಿಮರ್ಶೆಯೂ, 'ವೀರಧಾತ್ರಿ ಪನ್ನಾ' ಎಂಬ ಕಥೆಯೂ 'ತಾರಗೆ' ಎಂಬ ಪದ್ಯವೂ ಕಮಲದಲ್ಲಿ ಬಂದಿರುವ "ಗೋವಿನ ಕಥೆಯ ಅಂದ ಚಂದ" ಗಳೂ (ತುಮಕೂರಿನ "ಸ್ಕೂಲ್ ಫೋಕ್" ನಲ್ಲಿ ಬಂದಿರುವ "ಇಂಗ್ಲಿಷ್ ಗೀತೆಗಳ" ವಿಮರ್ಶೆಯೂ) ಚೆನ್ನಾಗಿವೆ. ಪನ್ನಾ ಕಥೆಯ ಕೊನೆಯ ಭಾಗವನ್ನು ಓದಿದರೆ ಸಂಕಟಹತ್ತಿ ಹೊಟ್ಟೆ ಉರಿದು ಹೋಗುತ್ತದೆ. ಇದಕ್ಕೆ ಮಗುವಿನ ಮರಣಯಾತನೆಯನ್ನು ಕೇಳಿ ಜಜ್ಜಿ ಹೋಗಿರುವ ನಿರ್ಭಾಗ್ಯ ಹೃದಯವೇ ಕಾರಣವೋ ಗ್ರಂಥಕರ್ತರ ಕೌಶಲ್ಯವೇ ಕಾರಣವೋ ತಿಳಿಯದು. ಲಲಿತ ಕಲೆಗೆ ಈ ವಸ್ತುವೂ ಪ್ರತಿಪಾದನವೂ ಅತಿ ಘೋರವೆನ್ನಿಸುತ್ತದೆ.

೩೦.

---

# ಪ್ರಬುದ್ಧ ಕರ್ಣಾಟಕ ಮತ್ತು ಸಾಹಿತ್ಯ

. . . . **ಭಾಷಾ ಸಾಹಿತ್ಯ ವಿಚಾರಗಳು . . . . ಜನರಿಗೆ ಬೇಕೇ ಬೇಡವೇ ?**

ಸಾಹಿತ್ಯವು ಜನಗಳಿಗೆ ಬೇಕಿಲ್ಲವೆಂದು ನಾವು ನಂಬಲಾರೆವು; ಇದರಲ್ಲಿ ಅವರಿಗೆ ಇರುವ ಆಸಕ್ತಿಯಿಂದಲೇ ಉತ್ತಮವಾದ ಸಾಹಿತ್ಯಕ್ಕೆ ಶಾಶ್ವತವಾಗಿ ನಿಲ್ಲುವ ಸಾಮರ್ಥ್ಯ ಬಂದಿದೆ. ತಮಗೆ ಸಮಾನವಿಲ್ಲ ವೆಂದು ಮೆರೆಯುವ ಚಕ್ರಾಧೀಶ್ವರರು ಹೋಗುವರು; ಅವರ ವಿಸ್ತಾರ ವಾದ ಚಕ್ರಾಧಿಪತ್ಯಗಳು ಉರುಳಿ ಹೋಗುವುವು; ಐಶ್ವರ್ಯವೂ ಭೋಗವೂ ಮಾಯವಾಗುವುವು. ಆದರೆ ಕಾಲನು ಇವೆಲ್ಲವುಗಳನ್ನೂ ಒಂದೊಂದಾಗಿ ತುಳಿದು ನುಚ್ಚುನೂರು ಮಾಡುತ್ತ ಹೋಗುವಾಗ ಉತ್ತಮವಾದ ಸಾಹಿತ್ಯ ರತ್ನಗಳಿಗೆ ಮಾತ್ರ ಮನಸೋತು ಅವುಗಳನ್ನು ಆರಿಸಿ ಮಾಲೆಕಟ್ಟಿ ಕಂಠದಲ್ಲಿ ಧರಿಸಿಕೊಂಡು ಹೋಗುವನು. ಅಲ್ಲದೆ ಸಾಹಿತ್ಯವು ಮನ್ಮಥನ ಹಸ್ತಗತವಾದ ಕುಸುಮಾಯುಧದಂತೆ ಸುಕೋಮಲವೂ ಮನೋಹರವೂ ಆದ ವಿಶ್ವವಿಜಯಿಯಾದ ಒಂದು ಅಪೂರ್ವ ಆಯುಧ. ಇದನ್ನು ಗ್ರಂಥಕರ್ತರು ಸರಿಯಾಗಿ ಉಪಯೋಗಿ ಸಿದರೆ ಪರಿಣಾಮದಲ್ಲಿ ನಿರ್ಘೃಣವಾದ ಉಕ್ಕಿನ ಕತ್ತಿಯನ್ನು ಹಿಡಿದು ಮಾಡುವ ಯುದ್ಧಕ್ಕಿಂತಲೂ ಹೆಚ್ಚು ಉಪಯೋಗವೂ ಮಂಗಳವೂ ಉಂಟಾಗಬಹುದು. ಇದಕ್ಕಾಗಿ ಸಾಹಿತ್ಯಕ್ಕೆ ಸಮಸ್ತ ಭೋಗೈಶ್ವರ್ಯ ಗಳಿಗಿಂತಲೂ ಹೆಚ್ಚು ಪ್ರಾಶಸ್ತ್ಯವನ್ನು ಕೊಡಬಹುದು.

ಆದರೆ ಈ ಮಾತು ಉತ್ತಮವಾದ ಸಾಹಿತ್ಯಕ್ಕೆ ಅನ್ವಯಿಸುತ್ತ ದೆಯೇ ಹೊರತು ಕಾವ್ಯವೆಂದು ಹೇಳಿಕೊಳ್ಳುವ ಕಸಕಡ್ಡಿಗಳಿಗಲ್ಲ; ಭೂದೇವಿಯಲ್ಲಿಯೋ ಅಗ್ನಿದೇವನಲ್ಲಿಯೋ ಐಕ್ಯವಾಗಿ ಪಂಚತ್ವವನ್ನೈ ದುವುದೇ ಅವುಗಳ ಹಣೆಯಬರಹ. ಉತ್ತಮವಾದ ಸಾಹಿತ್ಯವೆಂದರೇ ನೆಂಬುದನ್ನು ಅವಕಾಶ ದೊರೆತಾಗ ವಿಚಾರ ಮಾಡುವೆವು . . .

ನಮ್ಮ ಮುಖ್ಯ ಕೆಲಸವೆಂದರೆ ಕಾವ್ಯಸೃಷ್ಟಿಗೆ ಬೇಕಾದ ಸಾಮಗ್ರಿ ಳನ್ನು ಒದಗಿಸಿಕೊಡುವುದು, ಮುಂದೆ ಬರುವ ಕವಿರಾಜನಿಗೆ ದಾರಿ

ಯನ್ನು ಪರಿಷ್ಕಾರ ಮಾಡಿಕೊಡುವುದು. ಸಾಮಗ್ರಿ ಸಂಚಯಕ್ಕೆಂದು ಕೈನೀಡಿದರೆ ಒಂದು ಕಡೆ ಅನಾದಿ ಕಾಲದಿಂದಲೂ ಒಡವೆರೆದು ಬರುತ್ತಿರುವ ಸಂಸ್ಕೃತವೂ ಮತ್ತೊಂದು ಕಡೆ ನುಗ್ಗಿ ನುಗ್ಗಿ ದಾರಿಮಾಡಿಕೊಂಡು ಬರುತ್ತಿರುವ ಇಂಗ್ಲೀಷೂ ಸಿಕ್ಕುವುವು. ಇವುಗಳಲ್ಲಿ ಯಾವುದೂ ನಮ್ಮನ್ನು ಬಿಡುವ ಹಾಗಿಲ್ಲ; ನಾವೂ ಅವುಗಳನ್ನು ಬಿಡಬಾರದು. ಸಂಸ್ಕೃತದ ಹಾಲು ಕುಡಿದು ಕನ್ನಡವು ಇಷ್ಟು ಧೃಷ್ಟ ಪುಷ್ಟವಾಗಿರುವುದೆಂಬುದನ್ನೂ ಮುಂದಕ್ಕೂ ಅದರ ಆಶ್ರಯ ಆರೈಕೆಗಳಲ್ಲಿಯೇ ಬೆಳೆಯುತ್ತ ಹೋಗಬೇಕೆಂಬುದನ್ನೂ ಕನ್ನಡ ವಿದ್ಯಾರ್ಥಿಗಳು ಮರೆಯದೆ ಸಂಸ್ಕೃತದಲ್ಲಿರುವ ಉತ್ತಮೋತ್ತಮವಾದ ಗ್ರಂಥಗಳನ್ನು ಓದಲು ಯತ್ನಿಸಬೇಕು. ಸಂಸ್ಕೃತ ಸಾಹಿತ್ಯದ ಸುಖವನ್ನೂ ಉಪಯೋಗವನ್ನೂ ಪಡೆಯಲಿಚ್ಛಿಸುವವರು ಕಾಳಿದಾಸನ ಗ್ರಂಥಗಳನ್ನಾದರೂ ಓದಬೇಕು. ಒಂದೆರಡು ರೂಪಾಯಿಗಳನ್ನು ಕೊಟ್ಟುಬಿಟ್ಟರೆ ಬಂಗಾಳಿ ಭಾಷೆಯಲ್ಲಿರುವ " ಕಾಳಿದಾಸನ ಗ್ರಂಥಮಾಲೆ" ಎಂಬ ಒಂದು ಪುಸ್ತಕವು ಸಿಕ್ಕುವುದು ; ಅದರಲ್ಲಿ ಕಾಳಿದಾಸನ ಕಾವ್ಯಗಳೆಲ್ಲವೂ ಅರ್ಥಸಹಿತವಾಗಿ ಕೊಡಲ್ಪಟ್ಟವೆ. ಈ ಪುಸ್ತಕವು ಸಾಹಿತ್ಯ ವಿದ್ಯಾರ್ಥಿಗಳಿಗೆ ಎಷ್ಟು ಉಪಯೋಗಕರವಾದದ್ದೆಂದು ಹೇಳಬೇಕಾಗಿಲ್ಲ. ಇದರಂತೆ ಬಂಗಾಳಿ ಭಾಷೆಯಲ್ಲಿ ಶ್ರುತಿ ಸ್ಮೃತಿ ಉಪನಿಷತ್ತು ಧರ್ಮಶಾಸ್ತ್ರ ಮುಂತಾದ ಗ್ರಂಥಗಳ (Sacred Books of the East ನಂಥ) ಭಾಷಾಂತರಗಳೆಲ್ಲ ದೊರಕುತ್ತವೆ. ಇಂಥ ಕೆಲಸಗಳನ್ನು "ಪ್ರಬುದ್ಧ ಕರ್ಣಾಟಕ" ದ ಕೈಯಿಂದ ಮಾಡಿಸಬೇಕೆಂದಿದ್ದೇವೆ . . .

ಈಗೀಗ ನಮ್ಮ ದೇಶದಲ್ಲಿ ಒಬ್ಬಿಬ್ಬರು ತಕ್ಕಮಟ್ಟಿಗೆ ಸ್ವಾರಸ್ಯವಾಗಿ ಬರೆಯುವ ಸ್ವತಂತ್ರ ಗ್ರಂಥಗಳು ದೃಷ್ಟಿಗೆ ಗೋಚರವಾಗುತ್ತವೆ. ಇವು ನೀರು ಬೆರೆಸಿದ ಹಾಲಿನಂತೆಯೂ ಗಿಡಕ್ಕೆ ನೀರು ಗೊಬ್ಬರಗಳಿಲ್ಲದೆ ಬಿಡುವ ಪೀಚು ಹಣ್ಣುಗಳಂತೆಯೂ ಇರುತ್ತವೆ ; ಇದಕ್ಕೋಸ್ಕರ ಒಂದು ಕಡೆ ಸಸಿಗಳಿಗೆ ನೀರು ಗೊಬ್ಬರಗಳನ್ನು ಒದಗಿಸಿ ಕೊಡುವುದಲ್ಲದೆ, ನೀರು ಹಾಲಿನಲ್ಲಿರುವ ಜಲಾಂಶವನ್ನು ತೆಗೆದು ಅದು ಕುಡಿದರೆ ಆನಂದವನ್ನು ಕೊಡುವಂತೆ ಸಕ್ಕರೆ, ಕೇಸರಿ, ಯಾಲಕ್ಕಿ ಮುಂತಾದ ದ್ರವ್ಯ

ಗಳನ್ನು ತಂದು ಸೇರಿಸುವ ಬಗೆಯನ್ನು ಹೇಳಿಕೊಡಬೇಕು. ಅಂದರೆ, ಇಂಗ್ಲಿಷ್ ಭಾಷೆಯಲ್ಲಿ ದೊರಕುವ ಪ್ರಪಂಚದ ಸಾಹಿತ್ಯ ಸಾರವನ್ನು ಕನ್ನಡಕ್ಕೆತಂದು ಒದಗಿಸಿಕೊಡುವುದಲ್ಲದೆ, ಆ ಸಾಹಿತ್ಯವನ್ನೆಲ್ಲ ತುಲನ ಪೂರ್ವಕವಾಗಿ ವಿಮರ್ಶೆಮಾಡಿ ನಮ್ಮ ಕವಿಗಳಲ್ಲಿರುವ ಗುಣದೋಷ ಗಳೇನು ಸತ್ಕಾವ್ಯದ ಲಕ್ಷಣಗಳೇನು ಎಂಬುದನ್ನು ನಿಷ್ಪಕ್ಷಪಾತ ಬುದ್ಧಿ ಯಿಂದ ವಿಚಾರಮಾಡಿಕೊಳ್ಳಬೇಕು. ಇದಕ್ಕಾಗಿ ಇಂಥ ವಿಷಯಗಳ ಮೇಲೆ ವಿದ್ಯಾರ್ಥಿಗಳು ಬರೆದು ಕರ್ಣಾಟಕ ಸಂಘದಲ್ಲಿ ಓದುವ ಉತ್ತಮ ವಾದ ಪ್ರಬಂಧಗಳೂ ವಿದ್ವಾಂಸರು ಕೊಡತಕ್ಕ ಉಪನ್ಯಾಸಗಳೂ ಈ ಪತ್ರಿಕೆಯಲ್ಲಿ ಪ್ರಕಟವಾಗುವುವು ...

ಪ್ರಬುದ್ಧ ಕರ್ಣಾಟಕ,
೧—೧೯೧೯.

---

## ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಕನ್ನಡ

ಮೈಸೂರಿನಲ್ಲಿ ವಿಶ್ವವಿದ್ಯಾಲಯವು ಗೋಚರವಾದಾಗ ಕನ್ನಡ ಭಾಷೆಯು ವಿದ್ಯಾರ್ಥಿಗಳಿಗೆಲ್ಲರಿಗೂ ದ್ವಿತೀಯಭಾಷೆಯಾಗಿರುವುದೆಂದೂ, ಇಲ್ಲಿ ದೇಶಭಾಷೆಗೆ ಕೊಡುವ ಪ್ರೋತ್ಸಾಹವೇ ಇತರ ವಿಶ್ವವಿದ್ಯಾಲಯ ಗಳಿಗೂ ಇದಕ್ಕೂ ಇರುವ ವ್ಯತ್ಯಾಸವೆಂದೂ ಹೇಳುತ್ತಿದ್ದರು. ಈ ವಿಚಾರ ದಲ್ಲಿ ಕಲ್ಕತ್ತಾ ವಿಶ್ವವಿದ್ಯಾಲಯವು ಮೇಲ್ಪಂಕ್ತಿಯಾಗಿರುವಂತೆ ನಮಗೆ ತೋರುತ್ತದೆ. ಅಲ್ಲಿ ಪ್ರತಿಯೊಬ್ಬರೂ ಬಂಗಾಳಿ ಭಾಷೆಯನ್ನು ಕಲಿಯಲೇ ಬೇಕು. ಅಲ್ಲದೆ ಹಿಂದೂಸ್ಥಾನದ ಯಾವ ಇತರ ಭಾಷೆಯನ್ನು ಓದ ಬೇಕಾದರೂ ಅವಕಾಶವಿದೆ. ಇವುಗಳಲ್ಲಿ ಭಿಕಾರಿಯಂತೆ ಹೋಗಿರುವ ಕನ್ನಡವೂ ಒಂದು. ಅವುಗಳನ್ನು ಓದುವವರಿಗೆ ಹದಿನೈದು ರೂಪಾ ಯಿನ ವೇತನ; ಫೀಜು ಇಲ್ಲ. ಹೀಗಿರಲು ನಮ್ಮ ಭಾಷಾ ಸಾಹಿತ್ಯ ಗಳಿಗೆ ಮಹದುಪಕಾರಕವಾದ ಬಂಗಾಳಿ ಭಾಷೆಯನ್ನು ನಮ್ಮ ವಿಶ್ವ ವಿದ್ಯಾಲಯಪ್ರಾಸಾದದೊಳಕ್ಕೆ ಬರಗೊಡದೆ ಹೊರಗೇ ನಿಲ್ಲಿಸಿರ ಬಹುದೇ?

೬—೧೯೨೦.

# ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರು,

### ಎಂ.ಎ., ಎಂ.ಆರ್.ಎ.ಎಸ್.

ಕನ್ನಡಿಗರಿಗೆ ಶ್ರೀವರ್ನಾ ಆಚಾರ್ಯರು ಮೊದಲು ಕವಿಚರಿತ್ರಕಾರರು, ಆಮೇಲೆ ಕವಿಗಳು—ಶಾಸನದ ಇಲಾಖೆಯ ಅಧಿಕಾರಿಗಳು ಎಲ್ಲಕ್ಕೂ ಕೊನೆಯಲ್ಲಿ. ಇದರಿಂದ ಅವರು ಶಾಸನದ ಇಲಾಖೆಯಲ್ಲಿ ಮಾಡಿರುವ ಕೆಲಸವು ಸ್ವಲ್ಪವೆಂದು ನಾವು ಭಾವಿಸಿರುವುದಾಗಿ ತಿಳಿಯಬಾರದು. ಈ ಭಾಗದಲ್ಲಿ ಅವರ ಕೀರ್ತಿಯು ದಿಗಂತ ವಿಶ್ರಾಂತವಾಗಿದೆ. ಇಂಗ್ಲೀಷನ್ನು ಮಾತ್ರ ಬಲ್ಲ ಪಾಶ್ಚಾತ್ಯರಿಗೆ ಅವರು ಶಾಸನ ತಂತ್ರ ನಿಪುಣರಾದ ಒಬ್ಬ ಘನವಿದ್ವಾಂಸರು ; ಆದರೆ ಕನ್ನಡಿಗರಿಗೆ—ಅದರಲ್ಲಿಯೂ ಇಂಗ್ಲೀಷನ್ನು ಅರಿಯುದವರಿಗೆ—ನರಸಿಂಹಾಚಾರ್ಯರು ಕವಿಚರಿತ್ರಕಾರರು ; ಕನ್ನಡ ಸಾಹಿತ್ಯೋದ್ಯಾನಕ್ಕೆ ಕರೆದುಕೊಂಡು ಹೋಗಿ ಅದರ ಪರಿಪರಿಯಾದ ಸೊಬಗನ್ನೂ ವೈಶಾಲ್ಯವನ್ನೂ ಕಾಂತಿಯನ್ನೂ ಕನ್ನಡಿಗರಿಗೆ ತೋರಿಸಿ ಕೊಟ್ಟ ಮಹೋಪಕಾರಿಗಳು. ಕವಿಚರಿತ್ರೆಯನ್ನು ಬರೆಯದಿದ್ದರೆ ಹೊರಗೆ ಅವರ ಕೀರ್ತಿಯು ಕಡಿಮೆಯಾಗುತ್ತಿರಲಿಲ್ಲ; ಸರ್ಕಾರದ ಗೌರವವು ಕಡಿಮೆಯಾಗುತ್ತಿರಲಿಲ್ಲ ; ಕನ್ನಡಿಗರು ಅವರನ್ನು ಪೀಡಿಸುವ ಹಾಗಿರಲಿಲ್ಲ. ಹೀಗಿರಲು ಶಾಸನದ ಇಲಾಖೆಯಲ್ಲಿ ಕೆಲಸಮಾಡುವಾಗ ಸಿಕ್ಕಿದ ಸಾಮಗ್ರಿಗಳ ಜೊತೆಗೆ ತಾವು ಪ್ರಯಾಸಪಟ್ಟು ಗಳಿಸಿದ ಸಂಗತಿಗಳನ್ನು ಜೋಡಿಸಿಕೊಂಡು ಅವರು ವಿಸ್ತಾರವಾದ ಕವಿಚರಿತ್ರಗ್ರಂಥಗಳನ್ನು ಬರೆಯಬೇಕೆಂದು—ಅದರಲ್ಲಿಯೂ ಕನ್ನಡದಲ್ಲಿ ಬರೆಯಬೇಕೆಂದು—ಹೊರಟದ್ದು ಮ॥ ಆಚಾರ್ಯರ ಲೋಕೋಪಕಾರ ಬುದ್ಧಿಯನ್ನು ವ್ಯಕ್ತಗೊಳಿಸುತ್ತದೆ. ಎಂದಿಗೆ ವಿದ್ವಾಂಸರೆಲ್ಲರೂ ಇಂತಹ ಬುದ್ಧಿಯಿಂದಲೇ ತಮತಮಗೆ ಸಾಧ್ಯವಾದ ವಿಚಾರಗಳಲ್ಲಿ ಉತ್ತಮವಾದ ಅಂಶಗಳನ್ನು ತಮ್ಮ ಮಾತೃಭಾಷೆಯಲ್ಲಿ ತಿಳಿಸಬೇಕೆಂದು ಹೊರಡುವರೋ ಅಂದಿಗೆ ನಮ್ಮದೇಶವು ಕಣ್ಣುಬಿಟ್ಟಿತೆಂದು ಹೇಳಬಹುದು. ಆರುತಿಂಗಳ ಮಕ್ಕಳೂ ತಮ್ಮ ತಾಯಿಯ ಗುರುತನ್ನು ಮನಸ್ಸಿನಲ್ಲಿ ಅಚ್ಚಳಿಯದಂತೆ ಇಟ್ಟುಕೊಂಡಿದ್ದು ಆ ಚಹರೆಯನ್ನು ಕಂಡರೆ ನಲಿದಾಡು

ವುವು. ಪ್ರಕೃತದಲ್ಲಿ ನಮ್ಮ ಜನರ ಸ್ಥಿತಿಯು ಶಿಶುಗಳ ಸ್ಥಿತಿಗಿಂತಲೂ ಕಡೆಯಾಗಿದೆ. ನಮ್ಮ ತಾಯಿಯನ್ನು ನಾವು ಗುರುತಿಸಲೂ ಆರದವರು ಆಕೆಯ ಸೇವೆಯನ್ನು ಮಾಡುವುದೆಂತು?

---

## ದೇಶಭಾಷೆಯಲ್ಲಿ ಪಾಠಪ್ರವಚನಗಳು

ಈ ಪ್ರಶ್ನೆಯು ಕರ್ಣಾಟಕ ದೇಶಕ್ಕೆ ಮಾತ್ರವೇ ಅನ್ವಯಿಸುತ್ತಿಲ್ಲ. ಭರತಖಂಡದಲ್ಲಿ ದೇಶಭಾಷೆಯೆಂಬುದೆಲ್ಲೆಲ್ಲಿದೆಯೋ ಅದಕ್ಕೆ ಮೂಲೆಯ ಪಟ್ಟವು ಎಲ್ಲೆಲ್ಲಿ ಬಂದೊದಗಿದೆಯೋ ಅಲ್ಲಲ್ಲಿ ಈ ವಿಚಾರವು ಬರುತ್ತಲೇ ಇದೆ. ದೇಶಭಾಷಾಸಾಹಿತ್ಯಗಳ ಮತ್ತು ಜನಜೀವನದ ದೌರ್ಬಲ್ಯಕ್ಕೆ ಇತರಕಾರಣಗಳ ಜೊತೆಗೆ ನಮ್ಮಲ್ಲಿ ಈಗ ಪ್ರಚಾರದಲ್ಲಿರುವ ವಿದ್ಯಾಭ್ಯಾಸದ ಪದ್ಧತಿ ಸ್ವರೂಪ ಕ್ರಮಗಳೂ ಒಂದು ಕಾರಣವೆಂದು—ಪ್ರಬಲವಾದ ಕಾರಣವೆಂದು—ವಿದ್ಯಾಪೀಠದವರು ಈಚೆಗೆ ಮಂದಟ್ಟು ಮಾಡಿಕೊಂಡು, ಈಗ ಆವಶ್ಯಕವಾಗಿ ಆಗಬೇಕಾದ ಬದಲಾವಣೆಗಳನ್ನು ತರುತ್ತಿದ್ದಾರೆ. ಪ್ರೌಢತರಗತಿಗಳಲ್ಲಿಯೂ ಪಾಠಪ್ರವಚನಗಳು ದೇಶಭಾಷೆಯಲ್ಲಿಯೇ ನಡೆಯಬೇಕೆಂಬ ದೃಢ ಸಂಕಲ್ಪವುಳ್ಳ ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾನಿಲಯವು ನಮ್ಮ ನೆರೆಯಲ್ಲಿಯೇ ನಮ್ಮ ಕಣ್ಣೆದುರಿಗೇ ಸ್ಥಾಪಿತವಾಯಿತಷ್ಟೆ. ಈಗ ಕಲ್ಕತ್ತೆಯ ವಿಶ್ವವಿದ್ಯಾನಿಲಯದವರು ಇನ್ನುಮೇಲೆ ಸ್ಕೂಲ್ ಫೈನಲ್ ತರಗತಿಯವರೆಗೆ ಎಲ್ಲಾ ಪಾಠಗಳೂ ಬಂಗಾಳಿ ಭಾಷೆಯಲ್ಲಿಯೇ ನಡೆಯಬೇಕೆಂದು ತೀರ್ಮಾನಮಾಡಿದ್ದಾರೆ. ದೇಶಭಾಷೆಗೆ—ಬಂಗಾಳಿಯೊಂದಕ್ಕೆ ಮಾತ್ರವಲ್ಲ—ತಕ್ಕಸ್ಥಾನವನ್ನೂ ಗೌರವವನ್ನೂ ಕೊಡುವುದರಲ್ಲಿ ಬಂಗಾಳಾದೇಶವು ಮೇಲುಪಂಕ್ತಿಯಾಗಿದೆ. ದೇಶಭಾಷೆಯನ್ನೇ ಚೆನ್ನಾಗಿ ವ್ಯಾಸಂಗಮಾಡದೆ ಅದರಲ್ಲಿ ಓದಬೇಕು ಬರೆಯಬೇಕು ಎಂಬ ಅಭಿರುಚಿ ಹುಟ್ಟದೆ ಇರತಕ್ಕ ದೇಶದಲ್ಲಿ ದೇಶಭಾಷಾಸಾಹಿತ್ಯಗಳು ಬೆಳೆಯುವುದೆಂತು? ಅವುಗಳ ಫಲದ ಸಾರವು ದೇಶದ ರಕ್ತಕ್ಕೆ ಸೇರುವುದೆಂತು? ದೇಶವು ಧೃಷ್ಟಪುಷ್ಟವಾಗಿ ಬೆಳೆಯುವುದೆಂತು?

ದೇಶಭಾಷೆಯಲ್ಲಿ ಪಾಠಗಳನ್ನು ನಡೆಸುವುದಕ್ಕೆ ಪ್ರತಿಬಂಧಕಗಳೂ ಅಡಚಣೆಗಳೂ ಬೇಕಾದಷ್ಟು ಇವೆ—ಎಂದು ಎದುರು ಪಕ್ಷದವರು ಹೇಳುವರು. ನಿಜ, ಯಾವುದಕ್ಕೆ ಬಾಧಕಗಳಿಲ್ಲ? ಊಟಮಾಡುವುದಕ್ಕಿಲ್ಲವೇ? ಔತನದ ಊಟಮಾಡುತ್ತಿರುವಾಗ ಡಾಕ್ಟರುಗಳು ಎದುರಿಗೆ ಬಂದು 'ವಂಕಾಯಿ ವಾತಂ, ತೆಂಕಾಯಿ ಪಿತ್ತಂ' ಎಂದು ದೋಷೋದ್ಘಾಟನಕ್ಕೆ ಕುಳಿತರೆ ದಿವ್ಯ ಭೋಜನವನ್ನು ಬಿಟ್ಟು ಎದ್ದು ಹೋಗಿ ಬಿಡೋಣವೆನ್ನಿಸುವುದು. ಆದರೆ ಊಟದಲ್ಲಿ ನಾವು ಗುಣಗ್ರಾಹಿಗಳು; ವಿವೇಕಿಗಳು; ಡಾಕ್ಟರುಗಳೂ ಊಟಮಾಡಿ ತೇಗುವರು; ನಾವೂ ತೃಪ್ತಿಯಾಗಿ ಊಟಮಾಡಿ ಸುಖಪಟ್ಟುಬಿಡುವೆವು. ಹೊಟ್ಟೆ ಭಾರವಾದರೆ ಸ್ವಲ್ಪ ಹೊರಳಾಡುವೆವು. ಮುಂದೆಬರುವ—ಅಥವಾ ಬರಬಹುದೆಂದು ತಿಳಿದುಕೊಂಡಿರುವ—ತೊಂದರೆಗಳನ್ನು ಯೋಚಿಸುತ್ತ ಕುಳಿತು ಕರ್ತವ್ಯವನ್ನು ದಬ್ಬುತ್ತಿರುವುದು ವಿವೇಕಿಗಳು ಮಾಡತಕ್ಕ ಕೆಲಸವಲ್ಲ. ಆದ್ದರಿಂದ ನಮ್ಮ ದೇಶದಲ್ಲಿಯೂ ನಮ್ಮ ಕನ್ನಡಕ್ಕೆ ಈಗ ನಾವು ಕೊಟ್ಟಿರುವ ಸ್ಥಾನವು ಯಾವುದು, ಅದಕ್ಕೆ ಕೊಟ್ಟಿರುವ ಪ್ರಾಶಸ್ತ್ಯವು ಎಷ್ಟರ ಮಟ್ಟಿನದು, ನಮ್ಮಲ್ಲಿಯೂ ಅದನ್ನು ಮೇಲಿನ ತರಗತಿಗಳಲ್ಲಲ್ಲದಿದ್ದರೆ ಸ್ಕೂಲ್ ಫೈನಲ್ ತರಗತಿಯವರೆಗಾದರೂ ಇತರ ಕಡೆಗಳಲ್ಲಿ ಬಳಕೆಗೆ ಬರುತ್ತಿರುವಂತೆ ಪಾಠಹೇಳುವ ಭಾಷೆಯನ್ನಾಗಿ ಇಟ್ಟುಕೊಳ್ಳಬಾರದೇಕೆ? ಎಂಬುದನ್ನು ಸಕಲರೂ ಆಲೋಚಿಸತಕ್ಕದ್ದಾಗಿದೆ........

೧೧–೧೯೨೨

---

## ಪುಸ್ತಕ ಭಂಡಾರಗಳು ಮತ್ತು ಮೈಸೂರು

ನಮ್ಮ ದೇಶದ ಪ್ರಜೆಗಳು ಸರ್ಕಾರದ ಕಾಲನ್ನು ಬಿಟ್ಟು ತಮ್ಮ ಕಾಲಿನ ಮೇಲೆ ನಡೆಯುವುದನ್ನು ಕಲಿತುಕೊಳ್ಳಬೇಕೆಂದು ಒತ್ತಿ ಹೇಳಿ, ಪ್ರಜೆಗಳು ಆರಂಭಮಾಡುವ ಸಾರ್ವಜನಿಕವಾದ ಕಾರ್ಯಕ್ಕೆ ಸರ್ಕಾರವು ಸರಿಸಮವಾದ ಉತ್ಸಾಹ ಪ್ರೋತ್ಸಾಹಗಳನ್ನು ಕೊಡುವುದೆಂದು ತಿಳಿಸಿ ಮೈಸೂರಿನಲ್ಲಿ ನವಜೀವನವನ್ನು ತಂದವರು ಹಿಂದೆ ದಿವಾನರಾಗಿದ್ದ

ಸರ್. ಎಂ. ವಿಶ್ವೇಶ್ವರಯ್ಯನವರು. ಮೈಸೂರು ಬೆಂಗಳೂರುಗಳ ದೊಡ್ಡ ದೊಡ್ಡ ಸಾರ್ವಜನಿಕ ಪುಸ್ತಕ ಭಂಡಾರಗಳು ಹುಟ್ಟಿದ್ದು ಅವರ ಕಾಲದಲ್ಲಿಯೇ; ಸಂಚಾರ ಪುಸ್ತಕ ಭಂಡಾರಗಳ ಏರ್ಪಾಡಾದದ್ದೂ ಅವರ ಕಾಲದಲ್ಲಿಯೇ; ಇಷ್ಟೆಲ್ಲಾ ಆಗಿದ್ದರೂ, ಇಂದಿಗೂ ಸರ್ಕಾರದವರು ಮತ್ತು ಪ್ರಜೆಗಳು ಜ್ಞಾನ ಪ್ರಚಾರಕ್ಕಾಗಿ ಮಾಡಬೇಕಾದ ಕೆಲಸವು ಬಹಳವಾಗಿದೆ. ಜನರಿಗೆ ಜ್ಞಾನಲಾಭದಿಂದ ಆಗುವ ಲಾಭವೂ ಅದರ ಅಭಾವದಿಂದ ಆಗುವ ನಷ್ಟವೂ ಗೊತ್ತಾಗಿ ಆತುರವು ಹುಟ್ಟದಿದ್ದರೆ ಎಂಥ ಪುಸ್ತಕ ಭಂಢಾರಗಳಿದ್ದರೂ ಉಪಯೋಗವಿಲ್ಲ; ಆದ್ದರಿಂದ ಒಂದು ಕಡೆ ಪ್ರಜೆಗಳು — ವಿದ್ಯಾವಂತರಾದವರು — ತಮ್ಮ ಅವಿದ್ಯಾವಂತರಾದ ಭ್ರಾತೃಗಳಿಗೆ ಅದರ ರುಚಿಯನ್ನು ತೋರಿಸಬೇಕು. ಸರ್ಕಾರದವರೂ ಬರೋಡಾದಲ್ಲಿರುವಂತೆ ದೇಶಭಾಷೆಗೂ ದೇಶಭಾಷಾಪುಸ್ತಕಗಳಿಗೂ ಹೆಚ್ಚು ಪ್ರೋತ್ಸಾಹ ಕೊಟ್ಟು ಜನರಿಗೆ ಅದರಲ್ಲಿ ಆದರವನ್ನು ಹುಟ್ಟಿಸಬೇಕು. ತಾವು ಪ್ರಕಟಿಸುವ ಗ್ರಂಥಗಳು, ಅದರಲ್ಲಿಯೂ ನಮ್ಮ ದೇಶಕ್ಕೆ ಸಂಬಂಧಪಡುವ ಇಂಗ್ಲಿಷ್ ಗ್ರಂಥಗಳು, ಕನ್ನಡದಲ್ಲಿಯೂ ಇರಬೇಕೆಂಬುದನ್ನು ಮನಸ್ಸಿಗೆ ತಂದುಕೊಳ್ಳಬೇಕು; ಇದಕ್ಕೆ ಸರ್ಕಾರದ ಅಧಿಕಾರಿಗಳಲ್ಲಿ ಇದು ನಮ್ಮ ದೇಶ ನಮ್ಮ ಭಾಷೆಯೆಂಬ ಅಭಿಮಾನವು ಹೆಚ್ಚಬೇಕು. ಒಂದು ಉದಾಹರಣರೂಪವಾದ ಸೂಚನೆ:—ಈಗ ಶಾಸನದ ಇಲಾಖೆಯಲ್ಲಿ ಸಾವಿರಾರು ರೂಪಾಯಿ ಲಕ್ಷಾಂತರ ರೂಪಾಯಿ ಖರ್ಚಿನಿಂದ ಪ್ರಕಟಿತವಾದ ಗೆಜೆಟಿಯರ್ ಶಾಸನದ ಪುಸ್ತಕಗಳು (ಅವುಗಳ ಉಪೋದ್ಘಾತಗಳು) ಶಿಲ್ಪಗ್ರಂಥಗಳು ಇವೆಲ್ಲಾ ಕನ್ನಡದಲ್ಲಿದ್ದಿದ್ದರೆ ಜನರಿಗೆ ನಮ್ಮ ದೇಶ ನಮ್ಮ ಶಿಲ್ಪ ನಮ್ಮ ಸಾಹಿತ್ಯ ನಮ್ಮ ಭಾಷೆಗಳಲ್ಲಿ ಹೆಚ್ಚು ಆಸಕ್ತಿ ಹುಟ್ಟುತ್ತಿರಲಿಲ್ಲವೇ? ಹೆಚ್ಚು ಜ್ಞಾನವುಂಟಾಗುತ್ತಿರಲಿಲ್ಲವೇ?

ಈ ಸಂಬಂಧವಾಗಿ ಸ್ವಲ್ಪ ಸ್ವಜನದೂಷಣಮಾಡಿ ದೋಷವನ್ನೂ ದ್ವೇಷವನ್ನೂ ಕಟ್ಟಿಕೊಳ್ಳಬೇಕಾಗಿದೆ. ಈಗ ಇರುವ ನಾಲ್ಕಾರು ಪುಸ್ತಕ ಭಂಡಾರಗಳಲ್ಲಿಯೂ ಪಾಠಕರಿಂದ ಕೆಲವು ಅವಿವೇಕಗಳು ನಡೆಯುತ್ತಿವೆ. ಇದು ಕೇವಲ ಹುಡುಗರಿಂದ ಅವಿದ್ಯಾವಂತರಿಂದ ಮಾತ್ರವೇ ನಡೆಯು

ತ್ತಿಲ್ಲ. ಯಾವುದಾದರೊಂದು ಪತ್ರಿಕೆಯಲ್ಲಿ ಒಳ್ಳೆಯ ಚಿತ್ರಗಳಿದ್ದರೆ ಅವುಗಳನ್ನು ಹರಿದುಕೊಂಡು ಹೋಗದಿರುವುದು ಅಪರೂಪ; ಹಳೆಯ ಅಥವಾ ಶ್ಲಾಘ್ಯವಾದ ಪುಸ್ತಕಗಳಿದ್ದರೆ ಅವುಗಳನ್ನು ಹಿಂತಿರುಗಿ ಕೊಡದೆ ತಪ್ಪಿಸಿಕೊಳ್ಳುವುದೂ ಕಳೆದೆವೆಂದು ಹೇಳಿ ದುಡ್ಡುಕೊಡಲು ಹೋಗುವುದೂ ಕಂಡುಬರುತ್ತಿದೆ. ಇದಕ್ಕಿಂತ ಹೀನವಾದ ಕೆಲಸ ಮತ್ತೊಂದು ಇರಲಾರದು; ಈ ಬಗೆಯ ಅತ್ಯಾಚಾರದಿಂದ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ರಕ್ಷಿಸಲು ಒಬ್ಬ ಆಳು ನಿಯಮಿತನಾಗಿ ಅವನು ಎರಡು ಕಣ್ಣನ್ನು ಹತ್ತು ಕಣ್ಣು ಮಾಡಿಕೊಂಡು ಕಾವಲಿದ್ದರೆ ಅದಕ್ಕಿಂತ ಅವಮಾನಕರವಾದದ್ದು ಮತ್ತೊಂದಿಲ್ಲ. ಇಂಥ ಸಣ್ಣ ಚಿತ್ತ ಚಾಂಚಲ್ಯವನ್ನು ತಡೆಯಲಾರದ ನಾವು ಮಹಾರಾಜರು ದಯವಿಟ್ಟು ಒಪ್ಪಿಸಬೇಕೆಂದಿರುವ ಹೆಚ್ಚುಹೆಚ್ಚು ಸ್ವಾತಂತ್ರ್ಯವನ್ನೂ ಅಧಿಕಾರಗಳನ್ನೂ ವಹಿಸಿ ಅವುಗಳನ್ನು ನ್ಯಾಯವಾಗಿ ನಡೆಸಬಲ್ಲೆವು ಹೇಗೆ? ನಮ್ಮಿಂದ ದೇಶಕ್ಕೆ ಉಪಕಾರವಾದೀತು ಹೇಗೆ?

೧೫–೧೯೨೩

---

## ಕನ್ನಡಕ್ಕೆ ಪ್ರೋತ್ಸಾಹ: ಬಹುಮಾನ

ಕವಿತಾಶಕ್ತಿಯು ಸಿದ್ಧವಾಗಿ ಕವಿಯೊಡನೆಯೇ ಹುಟ್ಟಿಬರತಕ್ಕದ್ದೇ ಅಥವಾ ಸಾಧ್ಯವಾಗಿ ವ್ಯುತ್ಪತ್ತಿ ಅಭ್ಯಾಸಗಳಿಂದ ಸಂಪಾದನೆ ಮಾಡಿಕೊಳ್ಳಬಹುದಾದ್ದೇ ಎಂಬ ವಿಚಾರದಲ್ಲಿ ಪ್ರಾಚ್ಯ ಮತ್ತು ಪಾಶ್ಚಾತ್ಯ ಲಾಕ್ಷಣಿಕರಿಬ್ಬರಲ್ಲಿಯೂ ವಾದ ವಿವಾದಗಳಿವೆ. ಕವಿತಾಶಕ್ತಿಯೊಂದೇ ಏಕೆ, ಯಾವ ಅಪೂರ್ವ ಪ್ರಜ್ಞಾಸಾಮರ್ಥ್ಯವನ್ನು ತೆಗೆದುಕೊಂಡರೂ, ಅದು ತನಗೆ ಪಾತ್ರವಾದ ವ್ಯಕ್ತಿಯೊಡನೆಯೇ ಜನಿಸಿ ಬಂದದ್ದೆಂದೂ, ಅದರ ಸಂಪಾದನೆಗೆ ಅವನ ಪ್ರಯತ್ನವೇನೂ ಇರಲಿಲ್ಲವೆಂದೂ, ಅದರ ಅಂಶವಾದರೂ ಸ್ವತಸ್ಸಿದ್ಧವಾಗಿಲ್ಲದವರು ಅಭ್ಯಾಸದಿಂದಲೇ ಅದನ್ನು ಪಡೆಯುವುದಕ್ಕೆ ಮಾಡುವ ಪ್ರಯತ್ನವು ಕಪಿಯು ಕವಾತನ್ನು ಕಲಿಯುವಂತೆಯೂ ಗಾರ್ದಭವು ಗಾನವನ್ನು ಕಲಿಯುವಂತೆಯೂ ಆಗುತ್ತದೆ ಎಂದೂ ಹೇಳಬಹುದಾಗಿದೆ. ಆದರೆ ಆಯಾ ಶಕ್ತಿಯ ಸೂಕ್ಷ್ಮ

ವಾದ ಅಂಶವಾದರೂ ಇದ್ದ ಕಡೆಗಳಲ್ಲಿ ಅದಕ್ಕೆ ಅನುಕೂಲವಾದ ಬಾಹ್ಯ ಸಲಕರಣೆಗಳಿಂದ ಅದು ಬೆಳೆಯುವುದು ಸ್ವಭಾವ. ಬೀಜದಲ್ಲಿ ವೃಕ್ಷವು ಅಡಗಿದ್ದರೂ ಅದಕ್ಕೆ ಫಲವತ್ತಾದ ಭೂಮಿ ಮತ್ತು ನೀರುಗಳ ಆಸರೆ ಸಿಕ್ಕಿದರೆ ಅದು ದೊಡ್ಡ ಮರವಾಗುವುದು; ಎಂಥಾದ್ದೇ ಆಗಲಿ ಒಂದು ಮಾವಿನ ಗಿಡವಿದ್ದರೆ ಅದಕ್ಕೆ ಕಸಿಮಾಡಿ ಅದರಲ್ಲಿ ಸೊಗಸಾದ ಹಣ್ಣುಗಳನ್ನು ಬಿಡಿಸಬಹುದು; ಒಂದು ಕಿಡಿ ಬೆಂಕಿ ಇದ್ದರೆ ಅದಕ್ಕೆ ಬೆರಣಿಯ ಪುಡಿಯನ್ನೂ ಚಿಕ್ಕೆಗಳನ್ನೂ ಹಾಕಿ ಜ್ವಾಲೆಯನ್ನು ಎಬ್ಬಿಸಬಹುದು; ಹಾಗಲ್ಲದೆ ಒಂದು ಕಲ್ಲನ್ನು ತಂದು ನೆಟ್ಟರೆ ಅದರಿಂದ ಗಿಡವೂ ಆಗುವುದಿಲ್ಲ, ಕಸಿಯು ಹಣ್ಣೂ ಬಿಡುವುದಿಲ್ಲ, ಉರಿಯೂ ಬರುವುದಿಲ್ಲ.

ರಸಿಕರು ಓದಿ ನೋಡಿ ಪಡುವ ಆನಂದವೂ ರಾಜರು ಮತ್ತು ಪ್ರಜೆಗಳು ಕೊಡುವ ಧನರೂಪವಾದ ಪ್ರೋತ್ಸಾಹವೂ, ಹೊಸ ಕವಿಗಳನ್ನು ಉಂಟುಮಾಡಲಾರದಿದ್ದರೂ ಇರುವವರನ್ನು ಪುಷ್ಟಿಗೊಳಿಸಿ ಹೆಚ್ಚು ಕೆಲಸ ಮಾಡಿಸಬಲ್ಲುದು. ನೇಮಿಚಂದ್ರನು

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮುಕ್ಕುಂ ನೋೞ್ಪಂ ।
ಬೆಲೆಗೊಟ್ಟು ತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ ॥

ಎಣಿಸದೆ ಗುಣಮಂ ಕಾಚಿನ
ಮಣಿಯಂ ಮಾಱುವವೊಲಹಹ ನಿನಗಂ ತನಗಂ ।
ಪಣಕೆ ಕೃತಿಯೆಂಬ ಚಿಂತಾ
ಮಣಿಯಂ ಮಾಱುವನ ಬುದ್ಧಿಗಾಂ ಬೆಱಗಾದೆಂ ॥

ಎಂದು ಹೇಳಿದ್ದಾನೆ. ಆದರೆ ನೇಮಿಚಂದ್ರನು ಕವಿ. ಕವಿಗಳನ್ನು ಷೇಕ್ಸ್‌ಪಿಯರ್ ಮಹಾ ಕವಿಯು ಹುಚ್ಚರೊಡನೆ ಸೇರಿಸಿದ್ದಾನೆ. (ನಮ್ಮ ಪಾಠಕರಲ್ಲಿ ಯಾರಾದರೂ ಕವಿಗಳಿದ್ದರೆ ಅವರು ದಯವಿಟ್ಟು ಈ ಭಾಗವನ್ನು ಓದದೆ ಬಿಟ್ಟುಬಿಡಬಹುದು; ಇಲ್ಲದಿದ್ದರೆ ಆ ಮಾತನ್ನು ಹೇಳಿದವನು ಕವಿಶ್ರೇಷ್ಠನಾದ ಷೇಕ್ಸ್‌ಪಿಯರ್ ಎಂಬುದನ್ನು ತಿಳಿದು

ಕೊಂಡು ಹೇಗಾದರೂ ಸಮಾಧಾನ ಮಾಡಿಕೊಳ್ಳಬಹುದು.) ಯಾರು ಏನೇ ಹೇಳಲಿ, ನಮ್ಮ ದೇಶದ ಪ್ರಕೃತಸ್ಥಿತಿಯಲ್ಲಿ ಸಾಹಿತ್ಯಕ್ಕೆ ನಾನಾ ರೂಪವಾದ ಪ್ರೋತ್ಸಾಹವು ನಾನಾರೂಪಗಳಿಂದ ಅವಶ್ಯವಾಗಿ ಬರ ಬೇಕಾಗಿದೆ. ಇದಕ್ಕಾಗಿ ನಮ್ಮ ಶ್ರೀಮನ್ ಮಹಾರಾಜರವರೂ, ಅವರ ಸರ್ಕಾರದವರೂ ವಿಶ್ವವಿದ್ಯಾನಿಲಯದವರೂ ಯಥೇಚ್ಛವಾಗಿ ಸಹಾಯ ಮಾಡುತ್ತಿದ್ದಾರೆ. ಆದರೆ ಪ್ರಕೃತ ಕಾಲಸ್ಥಿತಿಯಿಂದ ಇದು ಸ್ವಲ್ಪ ಮಂಕಾಗಿದೆ. ಈ ಸಂದರ್ಭದಲ್ಲಿಯೇ ಅಮೆಚೂರ್ ನಾಟಕ ಮಂಡಲಿ ಸಾಹಿತ್ಯಪರಿಷತ್ತು ಮುಂತಾದ ಸಂಸ್ಥೆಗಳವರೂ ನಾನಾ ಕಾರಣಗಳಿಂದ ತಾವು ವರ್ಷ ವರ್ಷವೂ ಕೊಡುತ್ತಿದ್ದ ಬಹುಮಾನಗಳನ್ನು ನಿಲ್ಲಿಸಿರು ವಂತಿದೆ. ಹೀಗಿರಲು ಅನಂತಪುರದ ಸರಸ್ವತೀನಿಕೇತನದವರು ೨೫೦ ರೂಪಾಯಿಗಳ ಎರಡು ಬಹುಮಾನಗಳನ್ನು ಕೊಡುತ್ತೇವೆಂದು ಮುಂದೆ ಬಂದಿರುವುದು ತುಂಬ ಸಂತೋಷಪ್ರದವಾಗಿದೆ.

೧೫—೧೯೨೩

---

## ಮ॥ ಎಚ್. ವಿ. ವರದರಾಜಯ್ಯಂಗಾರ್ಯರಿಗೆ ಅಭಿನಂದನೆ

ಪರೀಕ್ಷೆಯು ವಿದ್ಯಾಬುದ್ಧಿಸಾಮರ್ಥ್ಯಗಳನ್ನು ಅಳೆಯಬಲ್ಲ ಒಂದು ವಿಧವಾದ ಸೇರು ಅಥವಾ ಕೊಳಗದಂತೆ ಭಾವಿಸಲ್ಪಟ್ಟಿರುತ್ತದೆ ಯಷ್ಟೆ. ಶಿಕ್ಷಣ ಶಾಸ್ತ್ರ ಪ್ರವೀಣರು, ಈ ಸೇರು ಒಡಕು ಸೇರು ಎಂದೂ ಇದರಲ್ಲಿ ಅಳೆಯುತ್ತಿರುವ ಕ್ರಮವು ತೃಪ್ತಿಕರವಾಗುವುದಿಲ್ಲವೆಂದೂ ಗೊಣಗುತ್ತಲೇ ಇದ್ದಾರೆ. ಆದರೂ ಮತ್ತೊಂದು ಒಳ್ಳೆಯ ಸೇರು ಸಿಕ್ಕಿ ಅದರಲ್ಲಿ ಅಳೆಯುವ ಕ್ರಮವು ಸರಿಯಾಗಿ ಏರ್ಪಟ್ಟ ಹೊರತು, ಇರುವು ದನ್ನು ಬಿಡುವುದಕ್ಕಾಗುವುದಿಲ್ಲ. ನಮ್ಮ ಕಣ್ಣುಮುಂದೆ ಬಿದ್ದಿರುವ ರಾಶಿ ಗಳನ್ನು ಅಳೆದ ಶಾಸ್ತ್ರಮಾಡಿ ಉಪಯೋಗಿಸಿಕೊಳ್ಳದೆ ಬಿಡುವುದಕ್ಕೆ ಆಗುವಂತಿಲ್ಲ. ದೊಡ್ಡ ರಾಶಿಗಳೇನೋ ಉನ್ನತ ಗಿರಿ ಶಿಖರಗಳಂತೆ

ಸ್ಥೂಲ ದೃಷ್ಟಿಗೇ ಗೊತ್ತಾಗಿಬಿಡುವುವು. ಒಂದು ಹಿಡಿ ಹೆಚ್ಚು ಕಡಿಮೆ ಇರತಕ್ಕ ಸಣ್ಣ ರಾಶಿಗಳ ನಿಷ್ಕೃಷ್ಟವಾದ ಪ್ರಮಾಣವು ಗೊತ್ತಾಗಿ ಆಗ ಬೇಕಾದದ್ದು ಅಷ್ಟರಲ್ಲೇ ಇದೆ. ಅಂತೂ ಇಂತೂ ಈ ಒಡಕು ಸೇರಿ ನಿಂದ ಏನು ಪ್ರಯೋಜನವೋ!—ಶಂಖದ ಬಾಯಲ್ಲಿ ನೀರು ಬಿದ್ದ ಹಾಗೆ, ವಸಿಷ್ಠರು ಬ್ರಹ್ಮರ್ಷಿ ಎಂದ ಹಾಗೆ, ಅದಕ್ಕೆ ಒಂದು ಪ್ರಾಮಾಣ್ಯ ದಾಯಕತ್ವವು ಬರುವುದು.

ಇದಕ್ಕೆ ಈಗಿನ ಇಂಗ್ಲಿಷ್ ವಿದ್ಯಾಭ್ಯಾಸಕ್ರಮವು ರೂಢಿಗೆ ಬಂದಾ ಗಿನಿಂದ ಎಲ್ಲಾ ವಿಧವಾದ ಉದಾಹರಣೆಗಳೂ ದೊರೆಯುತ್ತವೆ. ಪ್ರಕೃತ ದಲ್ಲಿ, ಮ|| ಎಚ್. ವಿ. ವರದರಾಜಯ್ಯಂಗಾರ್ಯರು ಒಂದು ಒಳ್ಳೆಯ ಉದಾಹರಣೆಯಾಗಿದ್ದಾರೆ. ಮ|| ವರದರಾಜಯ್ಯಂಗಾರ್ಯರು ಈಗ ಕೆಲವು ವರ್ಷಗಳ ಕೆಳಗೆ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗಮಾಡು ತ್ತಿದ್ದರು. ಆಗಲೇ ಅವರು ಒಳ್ಳೆಯ ಮೇಧಾವಿಗಳೆಂದು ಎಲ್ಲರ ಗಮ ನಕ್ಕೂ ಬಂದಿದ್ದರು. ಅವರನ್ನು ಬಿ. ಎಸ್‌ಸಿ. ಪರೀಕ್ಷೆಯಲ್ಲಿ ಅಳಿದು ದಾಯಿತು. ಅನಂತರ ಅವರು ಬೊಂಬಾಯಿಗೆ ಹೋದರು. ದೀಪವನ್ನು ತಂದಿಟ್ಟರೆ ಬೆಳಕಾಗುವುದು ಎಷ್ಟುಹೊತ್ತು? ಅಲ್ಲಿ ಅವರ ವಿದ್ಯಾ ಬುದ್ಧಿಸಾಮರ್ಥ್ಯಗಳು ಪ್ರಕಾಶಕ್ಕೆ ಬಂದು ದೊಡ್ಡ ದೊಡ್ಡ ತರಗತಿ ಗಳಿಗೆ ಪಾಠ ಹೇಳುವುದಕ್ಕಾಗಿ ನಿಯಮಿಸಲ್ಪಟ್ಟರು. ಕೊನೆಗೆ ಈ ವರ್ಷ ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಮೊದಲನೆಯವ ರಾಗಿ ಉತ್ತೀರ್ಣರಾದರು. ಬೆಳೆಯುವ ಪೈರು ಮೊಳಕೆಯಲ್ಲಿಯೇ ತಿಳಿದಿದ್ದದ್ದರಿಂದ ಇಂಥ ಫಲವು ಅನಿರೀಕ್ಷಿತವಲ್ಲದಿದ್ದರೂ ಅತ್ಯಂತ ಸಂತೋಷದಾಯಕವೇ ಸರಿ. ಮ|| ವರದರಾಜಯ್ಯಂಗಾರ್ಯರು ಮೈಸೂರು ದೇಶದವರು, ಕನ್ನಡನಾಡಿನವರು, ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿ ಗಳು, ಪ್ರಬುದ್ಧ ಕರ್ಣಾಟಕದ ಪೋಷಕರು ಮತ್ತು ಅಭಿಮಾನಿಗಳು; ಆದ್ದರಿಂದ ಅವರ ಜಯಸಂತೋಷಗಳಲ್ಲಿ ನಾವೂ ಭಾಗಿಗಳಾಗಿ ಸಂತೋ ಷಿಸಿ ಅವರನ್ನು ಅಭಿನಂದಿಸುತ್ತೇವೆ.

ಮ|| ಅಯ್ಯಂಗಾರ್ಯರು ಮುಂದೆ ದೊಡ್ಡ ಪದವಿಗೆ ಬರಬಹುದು; ಅಧಿಕಾರನಿಮಿತ್ತವಾಗಿ ಎಲ್ಲೆಲ್ಲಿಯೋ ಇರಬೇಕಾಗಬಹುದು; ಹೇಗಿ

ದ್ದರೂ, ಎಲ್ಲಿದ್ದರೂ, ತಾವು ಮೈಸೂರು ದೇಶೀಯರೆಂದೂ ಕನ್ನಡಿಗರೆಂದೂ ಮರೆಯದೆ ಅವುಗಳ ಗೌರವ ಅಭಿವೃದ್ಧಿಗಳನ್ನು ತಮ್ಮ ದೃಷ್ಟಿಪಥದಲ್ಲಿಟ್ಟುಕೊಂಡಿರಲೆಂದು ಹಾರೈಸುತ್ತೇವೆ.

೧೯—೧೯೨೫.

---

## ಕನ್ನಡಕ್ಕೆ ಒಂದು ಕಿರೀಟ

ಈಸಲ ಹಿಂದೂರಾಷ್ಟ್ರೀಯ ಸಭೆಯು ಕರ್ಣಾಟಕಕ್ಕೆ ಬರಲು, ಕನ್ನಡವೂ ಸಭೆಗೆ ಪ್ರವೇಶಮಾಡಿತು. ಸ್ವಾಗತಮಂಡಲಿಯ ಅಧ್ಯಕ್ಷರಾದ ದೇ|| ಗಂಗಾಧರರಾವ ದೇಶಪಾಂಡೆಯವರು ಅಭ್ಯಾಗತರನ್ನು ಕನ್ನಡಮಾತಿನಲ್ಲಿಯೇ ಆದರಿಸಿ ಬರಮಾಡಿಕೊಂಡರು. ಕನ್ನಡ ದೇಶವು ಶುಕಪಿಕಗಳ ತೌರೂರು ; ಆದ್ದರಿಂದ ಕನ್ನಡ ದೇಶದ ಮಾತು ಸಭಿಕರಿಗೆ ಕರ್ಣಾನಂದವನ್ನುಂಟುಮಾಡಿರಬೇಕು.—ಕನ್ನಡಿಗರಾದ ನಾವಾದರೂ ಹೀಗೆಂದು ಭಾವಿಸೋಣ! ಭಾಷಾವಾತ್ಸಲ್ಯಕೃತವಾದ ಈ ಅಪರಾಧಾಭಾಸವನ್ನು ಕನ್ನಡ ಭಾಷಾನಭಿಜ್ಞರಾಗಿದ್ದ ಕೆಲವು ಸಭಿಕರು ಖಂಡಿತವಾಗಿಯೂ ಅಭಿನಂದಿಸಿರಬೇಕು. ಏನೇ ಆಗಲಿ, ಈ ದೊಡ್ಡ ಸಭೆಯಲ್ಲಿ ಹೀಗೆ ಕನ್ನಡಕ್ಕೆ ಕೊಟ್ಟ ಪ್ರಾಶಸ್ತ್ಯವನ್ನು ಕನ್ನಡ ದೇಶೀಯರಿಗೆ ಹಾಕಿಕೊಟ್ಟ ಒಂದು ಮೇಲ್ಪಂಕ್ತಿಯನ್ನಾಗಿಯೂ ಕನ್ನಡ ಭಾಷೆಗೆ ಇಟ್ಟ ಒಂದು ಕಿರೀಟವನ್ನಾಗಿಯೂ ನಾವು ಭಾವಿಸುತ್ತೇವೆ....

೨೧—೧೯೨೫

---

## ಶ್ರೇಯಾಂಸಿ ಬಹುವಿಘ್ನಾನಿ

ದೇವರು ಅನಂತಕಲ್ಯಾಣಗುಣಪರಿಪೂರ್ಣನೇ? ಹಾಗಿದ್ದರೂ ಆ ಕಲ್ಯಾಣಗುಣಗಳಲ್ಲಿ ಕರುಣಾಮಯತೆಯು ಒಂದಾಗಿರಲಾರದು. ಕೆಲವು ವೇಳೆ ಕೌರ್ಯವಾಗಿ ತೋರುವುದೂ ಪರಿಣಾಮದಲ್ಲಿ ಕರುಣೆಯಾಗಿ ಪರಿಣಮಿಸುವುದರಿಂದ ಅಮೃತವಾಗಿ ಪರಿಣಮಿಸುವ ವಿಷದಂತೆ ಈ ಅಪ್ರಿಯ

ವಾದ ಗುಣವು ಅಸದೃಶವಾದ ಮಂಗಳಗುಣವೆಂದು ಪ್ರಪನ್ನರು ಹೇಳ ಬಹುದು. ಇದರಿಂದ, ಪ್ರಪಂಚದಲ್ಲಿ ಕಂಡುಬರುವ ವೈಷಮ್ಯ ನೈರ್ಘೃಣ್ಯಗಳು ಭಯಂಕರವಾದ ಸ್ವಪ್ನದಂತೆ ಇರುವುವೆಂದೂ ಅವು ಸ್ಥಾಯಿಯಾಗಿರುವುದಿಲ್ಲವೆಂದೂ ಹೇಳಿದಂತಾಯಿತೇ ಹೊರತು ಸಾತ್ವಿಕಮಾನವ ಜೀವನದಲ್ಲಿಯೂ ಬರುವ ಕ್ಲೇಶಕಷ್ಟಗಳಿಗೆ ಅನುಭವಕಾಲದಲ್ಲಿ ತೀಕ್ಷ್ಣ ದಂಷ್ಟ್ರಗಳಿಲ್ಲವೆಂದು ಹೇಳಿದಂತಾಗಲಿಲ್ಲ. ವೈದ್ಯನು ಮೊನಚಾದ ಶಸ್ತ್ರವನ್ನು ದೇಹದೊಳಕ್ಕೆ ಚುಚ್ಚಿ ರೋಗಿಗೆ ಹಿತವಾದ ಔಷಧವನ್ನು ರಕ್ತಕ್ಕೆ ಮಿಶ್ರಮಾಡುವಂತೆ, ದೇವರೂ ಮನುಷ್ಯನನ್ನು ಕಷ್ಟಕ್ಕೆ ಸಿಕ್ಕಿಸಿ ಆಮೇಲೆ ಸುಖಕೊಡಬೇಕೇ? ಇನ್ನೊಂದು ತೊಟ್ಟು ಕರುಣೆಯು ವೆಚ್ಚವಾದರೆ ಕರುಣಾಜಲಧಿಯು ಅರಕೆಯಾಗುತ್ತದೆಯೇ?

ಗುಣದೋಷ ಸುಖದುಃಖಗಳ ಭೇದವನ್ನೂ ಜಂಜಡವನ್ನೂ ಅನುಭವ ಮಾಡದ ಜ್ಞಾನಿಗಳ ಮಾತು ನಮಗೇಕೆ? ನಾವಂತೂ ದೇವರ ಕ್ರೌರ್ಯವನ್ನು ನಿತ್ಯವೂ ಅನುಭವಿಸುತ್ತಿರುವೆವು, ಕಣ್ಣಾರನೋಡುತ್ತಿರುವೆವು. ಅವನು ಧೃಷ್ಟರಾದ ದರೋಡೆಯ ಕಳ್ಳರಂತೆ "ಯಸ್ಯಾನುಗ್ರಹಮಿಚ್ಛಾಮಿ ತಸ್ಯ ವಿತ್ತಂ ಹರಾಮ್ಯಹಂ" ಎಂದು ಹೇಳಿಹೇಳಿ ಸರ್ವಸ್ವವನ್ನೂ ಅಪಹರಿಸುವನು. ಯಾರ ಮೇಲೆ ಮಮತೆ ಹುಟ್ಟುವುದೋ ಅವರನ್ನು ಇಹಲೋಕದಲ್ಲಿ ಹೆಚ್ಚು ದಿವಸ ಬಿಡದೆ ಬೇಗಕೊಂದು ತನ್ನಲ್ಲಿಗೆ ಕರೆದು ಕೊಂಡುಬಿಡುವನು. ದೇವತೆಗಳ ಜೊತೆಯಲ್ಲಿ ರಾಕ್ಷಸರನ್ನೂ, ಸಾತ್ವಿಕರ ಜೊತೆಯಲ್ಲಿ ತಾಮಸರನ್ನೂ, ಹೂವುಗಳ ಜೊತೆಯಲ್ಲಿ ಹುಳು ಹುಬಟೆ ಮುಳ್ಳುಗಳನ್ನೂ ಸೃಷ್ಟಿಸಿ ಗೋಳಾಡಿಸುವನು. ಕೊನೆಗೆ ಒಂದು ಒಳ್ಳೆಯ ಕೆಲಸಕ್ಕೆ ಕೈಹಾಕಿದರೆ ಅದನ್ನು ಸುಸೂತ್ರವಾಗಿ ನಡೆಯಗೊಡಿಸನು. ಬೇಕಾದಷ್ಟು ಅಡಚಣೆಗಳನ್ನು ತಂದು ಒಡ್ಡಿ "ಶ್ರೇಯಾಂಸಿ ಬಹು ವಿಘ್ನಾನಿ" ಎಂದು ಸಾರುವನು!

೨೩-೧೯೨೫

---

## ನಮ್ಮ ದೇಶದಲ್ಲಿ ಸಂಸ್ಕೃತದ ಸ್ಥಿತಿ, ಕನ್ನಡದ ಸ್ಥಿತಿ

ಮ|| ಶಾಸ್ತ್ರಿಗಳು* ಸ್ವದೇಶ ಪರದೇಶಗಳೆರಡರಲ್ಲಿಯೂ ಗಣ್ಯರಾಗಿದ್ದಾರೆ. ಅವರ ಮಾತಿಗೆ ಎಲ್ಲರೂ ಗೌರವಕೊಡುತ್ತಾರೆ. ಈ ವರ್ಷ, ಕಾಲೇಜುವ್ಯಾಸಂಗವನ್ನು ಮುಗಿಸಿಕೊಂಡು ಪಟ್ಟಾಂಚಿತರಾಗಿ ಹೊರಟ ವಿದ್ಯಾರ್ಥಿಗಳಿಗೆ ಉಪದೇಶಮಾಡುವಂಥ ಘನಕಾರ್ಯವನ್ನು ನಮ್ಮ ವಿಶ್ವವಿದ್ಯಾನಿಲಯದವರು ಇವರಿಗೆ ಒಪ್ಪಿಸಿದ್ದೇ ಅವರಲ್ಲಿ ನಮ್ಮೆಲ್ಲರಿಗೂ ಗೌರವವನ್ನುಂಟುಮಾಡುವುದಕ್ಕೆ ಸಾಕಾದಷ್ಟು ಕಾರಣವಾಗಿದೆ. ಇಂಥವರು ಸರ್ವಜನಾಪೇಕ್ಷಣೀಯವಾದ ಸಂಸ್ಕೃತದ ವಿಚಾರವಾಗಿ ತಮ್ಮ ಅಭಿಪ್ರಾಯವನ್ನು ತಿಳಿಸಿದರೆ ಅದನ್ನು ನಾವು ಲಕ್ಷ್ಯಕೊಟ್ಟು ಗಮನಿಸಬೇಕೆಂದು ಹೇಳಬೇಕೇ? ಅವರು ಅಪ್ಪಣೆ ಕೊಡಿಸಿರುವ ವಿಚಾರವು ಮದ್ರಾಸಿಗೆ ಮಾತ್ರ ಸಂಬಂಧ ಪಟ್ಟಿರುವುದಿಲ್ಲ ; ಪ್ರಕೃತದಲ್ಲಿ, ಅದನ್ನು ಮದ್ರಾಸಿನವರಿಗಿಂತ ಹೆಚ್ಚಾಗಿ ನಾವು—ಮೈಸೂರು ದೇಶದವರು—ಮನಸ್ಸಿಗೆ ತೆಗೆದುಕೊಳ್ಳಬೇಕಾಗಿದೆ. ನಮ್ಮ ಶ್ರೀಮನ್ಮಹಾರಾಜರವರು ತಮ್ಮ ಪೂರ್ವಿಕರ ಸ್ತೋತ್ರಾರ್ಹವಾದ ಮೇಲ್ಪಂಕ್ತಿಯನ್ನು ಅನುಸರಿಸಿ ಸಂಸ್ಕೃತ ವ್ಯಾಸಂಗಕ್ಕೆ ಪ್ರೋತ್ಸಾಹವನ್ನೂ ಸಂಸ್ಕೃತವಿದ್ವತ್ತಿಗೆ ಗೌರವವನ್ನೂ ಕೊಟ್ಟುಕೊಂಡು ಬರುತ್ತಿರುವುದರಿಂದ ನಮ್ಮ ಸಂಸ್ಥಾನದ—ಅಷ್ಟೇಕೆ, ದಕ್ಷಿಣ ಹಿಂದೂಸ್ಥಾನದ—ಅನೇಕ ಭಾಗಗಳಲ್ಲಿ ಇಲ್ಲಿಂದ ಪಾಂಡಿತ್ಯವನ್ನು ಸಂಪಾದಿಸಿ ಪಂಡಿತರಾಗಿ ಹೋಗಿ ತಮ್ಮ ಜ್ಞಾನಜ್ಯೋತಿಯಿಂದ ಪ್ರಕಾಶವನ್ನು ಬೀರುತ್ತಿರುವುದು ಕಂಡುಬರುತ್ತಿದೆ. ಇಂಥ ಹತ್ತಾರು ಮಂದಿಗಳ ಮಾತನ್ನು ಬಿಟ್ಟು, ಮ|| ಶಾಸ್ತ್ರಿಗಳು ಪ್ರಸ್ತಾಪಿಸಿರುವಂತೆ ನಮ್ಮ ಇಂಗ್ಲಿಷ್‌ಸ್ಕೂಲುಗಳಲ್ಲಿ ಓದುವ ಬಹುಜನ ವಿದ್ಯಾರ್ಥಿಗಳ ವಿಷಯವನ್ನು ಯೋಚನೆ ಮಾಡಿದರೆ ನಮ್ಮ ಸ್ಥಿತಿಯು ಮದ್ರಾಸಿನವರ ಸ್ಥಿತಿಗಿಂತ ಹೆಚ್ಚು ಶೋಚ

---

* ದಿವಂಗತರಾದ ರೈಟ್ ಆನರಬಲ್ ವಿ. ಯಸ್. ಶ್ರೀನಿವಾಸಶಾಸ್ತ್ರಿಗಳು.

ನೀಯವಾಗಿದೆ—ಅಥವಾ ಆಗುವಂತಿದೆ—ಎಂದು ಹೇಳಬಹುದು. ಈಗ "ಇತೋ ಭ್ರಷ್ಟಸ್ತತೋ ಭ್ರಷ್ಟಃ" ಎಂಬಂತೆ ಸಂಸ್ಕೃತ ಕನ್ನಡ ಎರಡೂ ಕೈಬಿಟ್ಟುಹೋಗುವಂತಾಗಿದೆ. ಒಂದುಕಡೆ—ವಿದ್ಯಾಭ್ಯಾಸದ ಇಲಾಖೆಯವರು ಕೆಳಗಣ (ಮಿಡಲ್) ಸ್ಕೂಲುಗಳಲ್ಲಿ ಸಂಸ್ಕೃತವನ್ನು ಐಚ್ಛಿಕ ಭಾಷೆಯನ್ನಾಗಿ ಮಾಡಿದರು. ಇದರಿಂದ ನೂರಾರು ಹುಡುಗರು ಓದುವ ಸ್ಕೂಲುಗಳಲ್ಲಿ ಸಂಸ್ಕೃತವನ್ನು ಓದುವ ಹುಡುಗರು ಒಬ್ಬಿಬ್ಬರೂ ಇಲ್ಲದಂತಾಗಿದೆ; ಇಲ್ಲಿಂದ ಕಲಿತುಕೊಂಡು ಮುಂದೆ ಹೋದರೆತಾನೇ ಹುಡುಗರು ಹೈಸ್ಕೂಲು ತರಗತಿಗಳಲ್ಲಿ ಸಂಸ್ಕೃತವನ್ನು ಓದುವುದು? ಆದ್ದರಿಂದ ಇನ್ನು ಸ್ವಲ್ಪ ಕಾಲದೊಳಗೆ ಹೈಸ್ಕೂಲಿನ ಸಂಸ್ಕೃತ ತರಗತಿಗಳಲ್ಲಿ ಪಂಡಿತರು ಬರಿಯ ಬೆಂಚುಗಳಿಗೆ ಪಾಠಹೇಳುವ ಅವಸ್ಥೆಗೆ ಬಂದು ಆ ಕಷ್ಟ ಸ್ಥಿತಿಯಿಂದ ನಿವೃತ್ತರಾಗುವ ಸ್ಥಿತಿಯು ಬರಬಹುದು. ಅಧ್ಯಯನ ಅಧ್ಯಾಪನಾದಿಗಳಲ್ಲಿ ಫಲಾಕಾಂಕ್ಷೆಯಿಲ್ಲದೆ ಕೇವಲ ಧರ್ಮವೆಂದು ಪ್ರವರ್ತಿಸುವ ಕಾಲವು ಹೋಗುತ್ತಿರುವುದರಿಂದ ಇತರ ಕಾರಣಗಳ ಜೊತೆಗೆ ಇದೂ ಸಹಾಯಮಾಡಿ ಸಂಸ್ಕೃತ ಪಾಠಶಾಲೆಗಳೂ ಬಡವಾಗಬಹುದು. ಹೀಗಾಗಿ, ಯಾವುದು ಇಲ್ಲದಿದ್ದರೆ "ಜೀವನವು ಜೀವಿಸುವುದಕ್ಕೆ ಯೋಗ್ಯವೆನ್ನಿಸುವುದಿಲ್ಲ"ವೋ ಅಂಥ ಸಂಸ್ಕೃತವನ್ನು ಎಷ್ಟು ಜನ ಓದುವರು? ಈಗ ನಿತ್ಯ ಕರ್ಮಾದಿಗಳನ್ನು ಇಟ್ಟುಕೊಂಡಿರುವವರು ಸಂಸ್ಕೃತ ಮಂತ್ರಗಳನ್ನೇ ಹೇಳುತ್ತಿದ್ದರೂ ಅವುಗಳ ಅರ್ಥವನ್ನು ತಿಳಿದುಕೊಂಡಿರಲೇಬೇಕೆಂಬ ನಿರ್ಬಂಧವೇನೂ ಇಲ್ಲದೆ ಇರುವುದರಿಂದ—ಈಗ ಪ್ರಾಕೃತವನ್ನು ಎಲ್ಲೋ ಸಾವಿರಕ್ಕೆ ಒಬ್ಬರು ವ್ಯಾಸಂಗ ಮಾಡುತ್ತಿರುವಂತೆ—ಮುಂದೂ ಭಾಷಾ ಶಾಸ್ತ್ರ, ಧರ್ಮಸಾದೃಶ್ಯ ಮುಂತಾದ ವಿಷಯುಗಳಲ್ಲಿ ಹೆಚ್ಚು ಆಸಕ್ತರಾದ ಕೆಲವರು ಸಂಸ್ಕೃತವನ್ನು ವ್ಯಾಸಂಗಮಾಡಬಹುದು. ಇದು ಸ್ವಮತ ಸ್ಥಾಪನೆಗೋಸ್ಕರ ಹೇಳುವ ಅತಿಶಯೋಕ್ತಿಯಲ್ಲ. ನಮ್ಮ ಹಿಂದೆ ಇತ್ತೆಂದು ನಮ್ಮ ತಾಯಿತಂದೆಗಳು ವರ್ಣಿಸುತ್ತಿರುವ ಸ್ಥಿತಿಯನ್ನೂ, ನಮ್ಮ ಬಾಲ್ಯದಲ್ಲಿ ನಾವೇ ನೋಡಿದ ಸ್ಥಿತಿಯನ್ನೂ ಈಗಿನ ಸ್ಥಿತಿಯನ್ನೂ ಪರಿಶೀಲಿಸಿದರೆ—ಪಟ್ಟಣವಾಸಗಳಲ್ಲಿಯೂ ಗ್ರಾಮಾಂತರಗಳಲ್ಲಿಯೂ ಸಂಸ್ಕೃತ ಪಾಠ

ಹೇಳುವವರೂ ಓದುವವರೂ ಕಡಿಮೆಯಾಗುತ್ತ ಹೋಗಿ ದೇಶವು ಕ್ರಮೇಣ ನೀರುಬತ್ತಿಹೋಗುತ್ತಿರುವ ಕೆರೆಯ ಅಂಗಳದಂತೆ ಕಾಣುತ್ತಿದೆ. ಸಂಸ್ಕೃತವೂ ಅದರ ಶಾಸ್ತ್ರಗಳೂ ಪ್ರಾಚೀನ ಭಾರತೀಯರು ಸಂಪಾದನೆ ಮಾಡಿಟ್ಟು ಹೋಗಿರುವ ಆಸ್ತಿ; ನಾವು ಅದನ್ನು ಎಂದು ಕಳೆದು ಕೊಂಡು ಅದಕ್ಕೂ—ಈಗಾಗಲೇ ಆರಂಭವಾಗಿರುವಂತೆ—"ಭವತಿ ಭಿಕ್ಷಾಂ ದೇಹಿ" ಎಂದು ಪಾಶ್ಚಾತ್ಯರ ಬಾಗಿಲಿಗೆ ಹೋಗಿ ನಿಲ್ಲುವೆವೋ ಅಲ್ಲಿಗೆ ನಮ್ಮ ಅಧಃಪತನವು ಪೂರ್ಣವಾಗುವುದು. ಇಷ್ಟುದೂರ ಯೋಚಿಸ ದಿದ್ದರೂ, ಸಂಸ್ಕೃತ ವ್ಯಾಸಂಗವು ಕಡಿಮೆಯಾಗುವುದು ಎಳೆಯ ಮಗು ವಿಗೆ ತಾಯಿಯ ಹಾಲು ಕಡಿಮೆಯಾದ ಹಾಗೆಂದು ಭಾವಿಸಿ ಸಂಸ್ಕೃತ ಪಠ್ಯಪುಸ್ತಕಗಳ ಉಪಸಭೆಯವರು ಈಗ ಎರಡು ವರ್ಷಗಳಿಂದ ಸಂಸ್ಕೃತವನ್ನು ಸ್ಕೂಲುಗಳಲ್ಲಿ ಪುನಃ ದ್ವಿತೀಯ ಭಾಷೆಯಾಗಿ ಇರ ಬೇಕೆಂದು ಸಲಹೆ ಕೊಡುತ್ತಲೇ ಬಂದರು. ಲೋಕಲ್ ಎಗ್ಸಾಮಿ ನೇರ್ಷ ಬೋರ್ಡಿನಲ್ಲಿಯೂ ಅದರ ಪ್ರಸ್ತಾಪ ಬಂದಿತು. ಆದರೂ ಫಲವೇನೂ ಆಗಲಿಲ್ಲ.

ಇದು ಒಂದು ಕಡೆ. ಮತ್ತೊಂದು ಕಡೆ ಮೈಸೂರು ವಿಶ್ವ ವಿದ್ಯಾ ನಿಲಯದ ನೂತನ ವ್ಯವಸ್ಥೆಯ ಪ್ರಕಾರ ಕನ್ನಡಕ್ಕೂ ಈ ಗತಿಯೇ ಬರ ಬೇಕಾಗಿದೆ. ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಓದನ್ನು ನಿರ್ಬಂಧವಾಗಿ ಇರಿಸುತ್ತೇವೆಂದೂ ಅದು ಮೈಸೂರುವಿಶ್ವವಿದ್ಯಾನಿಲಯದ ಅಸಾಧಾರಣ ಧರ್ಮವೆಂದೂ ಹೇಳಿಕೊಂಡು ಹೊರಟದ್ದೇನು? ಪರಿ ಣಾಮದಲ್ಲಿ ಆಗುತ್ತಿರುವುದೇನು? ಪಂಚಪಾಂಡವರು ಮಂಚದ ಕಾಲಿನಹಾಗೆ ಮೂರುಜನ ಎಂದು ಹೇಳಿ ಎರಡು ತೋರಿಸಿ ಒಂದನ್ನು— ಅದು ಒಂದೂ ಅಲ್ಲ ಸೊನ್ನೆಯೂ ಅಲ್ಲ ಹಾಗೆ—ಬರೆಯುವಂತೆ ಆಗಿದೆ ಯಲ್ಲ! ಛಾನ್ಸೆಲರಾದ ನಮ್ಮ ಮಹಾರಾಜರವರು ಹಿಂದೆ ದೇಶಭಾಷಾ ವಾತ್ಸಲ್ಯದಿಂದಲೂ ದೂರದರ್ಶಿತೆಯಿಂದಲೂ ಕನ್ನಡದ ವ್ಯಾಸಂಗಕ್ಕೆ ಅಷ್ಟೊಂದು ಪ್ರಾಶಸ್ತ್ಯವನ್ನು ಕೊಡಬೇಕೆಂದು ಸೂಚಿಸಿ ಈ ವಿದ್ಯಾಪೀಠ ವನ್ನು ಪ್ರತಿಷ್ಠಿಸಿದರೂ ಘಟನಾಪ್ರವಾಹವು ಅದಕ್ಕೆ ಕೇವಲ ವಿರುದ್ಧ ವಾಗಿ ಹೋಗುತ್ತಿರುವುದು ಆಶ್ಚರ್ಯವಾಗಿದೆ. ನಮ್ಮ ವೈಸ್‌ಛಾನ್

ಸೆಲರವರು ದೇಶಭಾಷಾವಾತ್ಸಲ್ಯಗಳಿಗೆ ತೌರೂರಾದ ಬಂಗಾಳಾ ದೇಶದವರು: ಅವರಿಗೆ ಬಂಗಾಳಿ ಭಾಷೆ ಹೇಗೋ ನಮಗೆ ಕನ್ನಡ ಹಾಗೆ; ಇದನ್ನು ಅವರಿಗೆ ಯಾರಾದರೂ ಹೇಳಿಕೊಡಬೇಕೇ? ಇಂಥ ಅಧಿಕಾರಿಗಳ ಕಾಲದಲ್ಲಿ–ವಿಶ್ವವಿದ್ಯಾನಿಲಯ ಪ್ರಾಸಾದದಲ್ಲಿ–ಕನ್ನಡಕ್ಕೆ ಕ್ಷಯರೋಗ ತಗಲುವುದುಂಟೇ? ಎಂದಿಗೂ ಇಲ್ಲ. ಒಬ್ಬೊಬ್ಬರು ಒಂದೊಂದು ಕಾರಣವನ್ನಿಟ್ಟುಕೊಂಡು ಮನಸ್ಸಿದ್ದರೂ ಮಾತನಾಡದೆ ನಮ್ಮ ಬುಡಕ್ಕೆ ನಾವೇ ನೀರು ತಿದ್ದಿಕೊಳ್ಳುತ್ತಿದ್ದೇವೆ; ಪುನರ್ವ್ಯವಸ್ಥೆಯ ಸಭೆಯಲ್ಲಿದ್ದವರು ನಮ್ಮವರೇ; ಈ ಆತ್ಮಹತ್ಯ ಸದೃಶವಾದ ತೀರ್ಮಾನವನ್ನು ಮಾಡಿದವರು ನಮ್ಮವರೇ; ನಾಳೆ ಅದನ್ನು ಸೆನೆಟ್ ಸಭೆಯಲ್ಲಿ ಕೈಯೆತ್ತಿ ಆಶೀರ್ವದಿಸಿ ಚಿರಜೀವಿಯಾಗಿ ಮಾಡುವವರೂ ಅವರೇ. ನಾವು ಕೇಳಿರುವ ಮಟ್ಟಿಗೆ ಸೆನೆಟ್ ಸಭಿಕರು ಕನ್ನಡದ ಪರವಾಗಿ ವಾದಿಸಿದರೆ ವೈಸ್ ಛಾನ್ಸೆಲರವರು ಅವರಿಗೆ ವಿರುದ್ಧವಾಗಿ ಹೋಗುವಹಾಗಿಲ್ಲ. ಆದರೆ ಇದು ಬೆಕ್ಕಿಗೆ ಗಂಟೆ ಕಟ್ಟುವಂಥ ಕೆಲಸ; ಎಲ್ಲ ಇಲಿಗಳಿಗೂ ಬೆಕ್ಕಿನ ಮೇಲೆ ಕಣ್ಣು. ಆದರೂ ಒಂದೊಂದೂ ಒಂದೊಂದು ನೆವ ಹೇಳಿ ತಪ್ಪಿಸಿಕೊಳ್ಳುತ್ತದೆ. ಕ್ಷಯರೋಗವು ಬಂದು ಸೇರುವಾಗ ಅದು ಅದೃಶ್ಯವಾಗಿ ಬರುತ್ತದೆ; ಖಾಯಿಲೆಯು ಬಂದು ನಿಂತು ಕೆಲಸವು ಎಡವಟ್ಟಾದರೆ ಅದನ್ನು ತಿದ್ದುವುದು ಕಷ್ಟವಾದೀತು. ಹಿಂದಿನ ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನು ಬದಲಾಯಿಸುವುದಕ್ಕೆ ಹೋಗಿ ಅದು ಈಗ ಹಳಸಿದ ಹಿಟ್ಟಿನಂತಾಗಿದೆ; ಅದಕ್ಕೆ ಪ್ರತಿ ನಿತ್ಯವೂ ಒಂದೊಂದು ಮಸಾಲೆಯನ್ನು ಬೆರಸುತ್ತಲೇ ಇದೆ; ಆದರೇನು, ಇದರಿಂದ ಅಡಿಗೆ ಮಾಡುವವರಿಗೆ ಸುಖವಿಲ್ಲ; ಊಟಮಾಡುವವರಿಗೆ ಹಿತವಿಲ್ಲ. ಕನ್ನಡದ ವಿಚಾರವೂ ಮುಂದೆ ಹೀಗಾದೀತು ಎಂದು ನಮಗೆ ಭಯ. ಈಗಲೇ ಕನ್ನಡ ಓದುವವರಿಲ್ಲದೆ ಕನ್ನಡಸಾಹಿತ್ಯದ ದಾರಿಯಲ್ಲಿ ಕಾಡುಕೊಂಟುಗಳನ್ನು ಏರಿಸಿಟ್ಟಂತಾಗಿದೆ! ಮುಂದೆ ಕನ್ನಡದ ಓದುಬರಹಗಳನ್ನು ಬಲ್ಲವರು ಇನ್ನೂ ಕಡಿಮೆಯಾದರೆ ನಮ್ಮ ಮೈಸೂರು ದೇಶವು "ಮಕ್ಕಳಿಲ್ಲ ಮರಿಯಿಲ್ಲ, ಹೆಸರು ತಾಯಮ್ಮ" ಎಂಬಂತೆ "ಕನ್ನಡ ಓದುವವರಿಲ್ಲ ಬರೆಯುವವರಿಲ್ಲ, ಹೆಸರು ಕನ್ನಡ ದೇಶ" ಎನ್ನುವ ಹಾಗಾಗುತ್ತದೆ; ಮೈಸೂರು ದೇಶವು ಕನ್ನಡ ದೇಶದ ಮಧ್ಯದಲ್ಲಿದೆ, ಅದರ ಜಾತಿಯು

ಶುದ್ಧವಾಗಿದೆ, ಸಂಕರವಿಲ್ಲ ಎಂದು ನಾವು ಹೇಳಿಕೊಳ್ಳುತ್ತಿರುವುದು ಬರಿಯ ಒಣ ಹೆಮ್ಮೆಯಾಗುತ್ತದೆ. ತಾಯಿಯ ಹಾಲು ಸಾಲದೆ ಮಗುವಿಗೆ ಹುಯ್ಯುವ ಹಾಲು ಕುಡಿಸುತ್ತಿರುವಾಗ, ಇರುವ ಸ್ತನ್ಯವನ್ನೂ ಬಿಡಿಸಿ ಮಗುವನ್ನು ಉಪವಾಸ ಕೆಡವುವರುಂಟೇ? ಆದ್ದರಿಂದ ಈ ವಿಚಾರದಲ್ಲಿ ಬಾಯಿ ನಡೆಯತಕ್ಕ ಪ್ರತಿಯೊಬ್ಬರೂ, ನಮ್ಮ ಜನಗಳಲ್ಲಿ ಸಾಮಾನ್ಯವಾಗಿ ಸ್ವಭಾವಸಿದ್ಧವಾಗಿ ಬಂದಿರುವ ಔದಾಸೀನ್ಯವನ್ನು ಬಿಟ್ಟು, ಯಾವ ಯಾವುದೋ ಕಾರಣಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಲೆಕ್ಕಾಚಾರಮಾಡುತ್ತ ಹಿಂದೆ ಮುಂದೆ ನೋಡಿ " ಹೋದರೆ ಹೋಗಲಿ " ಎಂದು ಉಪೇಕ್ಷೆ ಮಾಡುವುದನ್ನು ಬಿಟ್ಟು ಕನ್ನಡವು ಬಲಿಯುವುದಕ್ಕೆ ತಕ್ಕ ಏರ್ಪಾಟನ್ನು ಮಾಡಿಸುವರೆಂದು ಭಾವಿಸುತ್ತೇವೆ.

ಈ ವಿಚಾರದಲ್ಲಿ ಆಸಕ್ತಿ ವಹಿಸಬೇಕಾದವರು ಕೇವಲ ಮೈಸೂರು ದೇಶೀಯರೇ ಅಲ್ಲ: ಇದನ್ನು ಕರ್ಣಾಟಕದ ಸಕಲ ಭಾಗಗಳವರೂ ಯೋಚಿಸಿ, ಮಾಡತಕ್ಕದ್ದನ್ನು ಮಾಡಬೇಕಾಗಿದೆ. ಈಗ ಕರ್ಣಾಟಕಕ್ಕೆಲ್ಲಾ ಒಂದು ವಿಶ್ವವಿದ್ಯಾಲಯವು ಬೇಕೆಂದೂ ಅದು ಮೈಸೂರು ವಿಶ್ವವಿದ್ಯಾನಿಲಯವೇ ಏಕೆ ಆಗಬಾರದೆಂದೂ ವಿಚಾರವು ನಡೆಯುತ್ತಿದೆಯಷ್ಟೆ; ಇದರ ಸಾಧ್ಯಾಸಾಧ್ಯತೆಯು ಹೇಗಾದರೂ ಇರಲಿ; ಒಂದು ವೇಳೆ ಸಾಧ್ಯವಾಗಿ, ಅಷ್ಟು ಹೊತ್ತಿಗೆ ನಮ್ಮಲ್ಲಿ ಕನ್ನಡವು ಗಗನಕುಸುಮವಾಗಿ, ಇತರ ಪ್ರಾಂತಗಳ ಕರ್ಣಾಟಕರು ನಮ್ಮ ವಿಶ್ವವಿದ್ಯಾನಿಲಯದೊಳಕ್ಕೆ ಹಸಿದು ಬಂದರೆ ಗೋಕುಲಾಷ್ಟಮಿಯು ಶಿವರಾತ್ರಿಯ ಮನೆಗೆ ಊಟಕ್ಕೆ ಹೋದಹಾಗಾಗುವುದಿಲ್ಲವೇ ?

ಕನ್ನಡವನ್ನು ಐಚ್ಛಿಕವಾಗಿ ಮಾಡಿ ಅದಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿದ್ದೇವೆನ್ನಬಹುದು; ಇದು ಖಂಡೇರಾಯನನ್ನು ಗಿಣಿಯ ಹಾಗೆ ಸಾಕಿದಂತೆಯೇ ಹೊರತು ಮತ್ತೆ ಬೇರೆ ಅಲ್ಲ; ಈ ಅಂಶಕ್ಕೆ ಪ್ರಾಮಾಣ್ಯವನ್ನು ಒದಗಿಸುವುದಕ್ಕಾಗಿಯೇ ಮ|| ಶಾಸ್ತ್ರಿಗಳ ಬೆಂಬಲವನ್ನು ಇಟ್ಟುಕೊಂಡು ಈ ಗೋಳಾಟವನ್ನು ಮೊದಲ ಮಾಡಿದ್ದು.

ಕನ್ನಡಕ್ಕೆ ಪ್ರಾಶಸ್ತ್ಯ ಕೊಡಲು ಇರುವ ಒಂದು ಮುಖ್ಯವಾದ ಅಡ್ಡಿ ಯಾವುದೆಂದರೆ—" ಮೈಸೂರು ದೇಶದಲ್ಲಿ ಇಷ್ಟೊಂದು ಭಾಷೆಗಳಿವೆಯಲ್ಲ, ಇವುಗಳಿಗೆ ಅನ್ಯಾಯ ಮಾಡಿದಂತಾಗುವುದಿಲ್ಲವೇ, ಇವು

ಮೂಲೆಗೆ ಬಿದ್ದು ಹೋಗುವುದಿಲ್ಲವೇ” ಎಂದು ಆಕ್ಷೇಪಿಸುತ್ತಿರುವವರ ಕೂಗು ;—ಹೊಟ್ಟೆಯಲ್ಲಿ ಹುಟ್ಟಿ ಹೆಸರು ಹೇಳುವ ಮಗನಿಗೆ ಅನ್ನ ಹಾಕಬೇಕಾದರೆ ಭಿಕ್ಷಾನ್ನದ ಹುಡುಗರಿಗೆಲ್ಲಾ ಹೊಟ್ಟೆ ತುಂಬಿದೆಯೋ ಇಲ್ಲವೇ ಎಂದು ವಿಚಾರಮಾಡುವಂಥ ಪ್ರಕರಣ. “ಸರ್ವೇ ಜನಾಸ್ಸು ಖಿನೋ ಭವಂತು ”ಎಂಬ ಪಾರಮಾರ್ಥಿಕ ಬುದ್ಧಿಯು ಸ್ತುತ್ಯವಾದದ್ದೇ; ಆದರೆ ಕನ್ನಡ ದೇಶದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡದೆ ಹೋದರೆ ಮೆಕ್ಸಿಕೋ ದೇಶದವರೋ ನ್ಯೂಜೀಲ್ಯಾಂಡ್‌ನವರೋ ಕೊಡುತ್ತಾರೆಯೋ? ಅಲ್ಲದೆ ಎಷ್ಟು ದೇಶಭಾಷೆಗಳಿಗಾದರೂ ಏಕೆ ಪ್ರಾಶಸ್ತ್ಯ ಕೊಡಬೇಕು? ಈಗ ಮೈಸೂರು ದೇಶದಲ್ಲಿ—ಅವರವರ ಮನೆಯ ಮಾತು ಯಾವುದಾದರೂ ಆಗಿರಲಿ—ಕನ್ನಡವನ್ನು ಅರಿಯದವರು ಎಷ್ಟು ಜನರಿದ್ದಾರೆ? ಬಹು ಸ್ವಲ್ಪ. ನಮ್ಮ ದೇಶದಲ್ಲಿ ಎಲ್ಲರೂ ಕನ್ನಡವನ್ನು ಕಲಿಯಬೇಕೆಂದು ನಿರ್ಬಂಧಪಡಿಸಿದರೆ ಇಂಥವರ ಮಕ್ಕಳು ಮೊದಲಿನಿಂದ ಕನ್ನಡವನ್ನೇ ಆರಂಭಿಸುತ್ತಾರೆ. ಬೇಕಾದರೆ, ಇಂಥವರೆಲ್ಲರೂ ತಕ್ಕಷ್ಟು ಕನ್ನಡವನ್ನು ಕಲಿಯಲು ಸಾಕಾದಷ್ಟು ಅವಕಾಶ ಕೊಟ್ಟು ೧೯೩೫ ನೆಯ ಇಸವಿಯಿಂದ ಕನ್ನಡವನ್ನು ನಿರ್ಬಂಧವಾಗಿ ಎಲ್ಲರೂ ಓದಬೇಕು ಎಂದು ವಿಧಿಸಬಹುದು. ಇದರಿಂದ ನಮ್ಮ ದೇಶದ ತಮಿಳರೂ ತೆಲುಗರೂ ತಮ್ಮ ಮಾತನ್ನೇನು ಮರೆಯುವುದಿಲ್ಲ; ತಮ್ಮ ಮಾತಿನ ಮೇಲೆ ಅಷ್ಟು ಮಮತೆ ಇದ್ದರೆ ಮನೆಯಲ್ಲಿಯೇ ಹೆಚ್ಚಾಗಿ ಓದಿಕೊಳ್ಳುತ್ತಾರೆ; ಸಾಲದಿದ್ದರೆ ತಮಿಳು ವಿಶ್ವವಿದ್ಯಾಲಯವನ್ನೋ ಆಂಧ್ರ ವಿಶ್ವವಿದ್ಯಾಲಯವನ್ನೋ ಆಶ್ರಯಿಸುತ್ತಾರೆ! ಇಲ್ಲದಿದ್ದರೆ ಇವರ ಭಾಷೆಗಳನ್ನು ಐಚ್ಛಿಕವಾಗಿಡೋಣ; ಅಂಥ ಆ ಸಕ್ತಿ ಇರುವವರು ಅವುಗಳನ್ನು ತೆಗೆದುಕೊಂಡು ಪಂಡಿತರಾಗಲಿ! ಭಾಷಾವ್ಯವಸ್ಥೆಯನ್ನನುಸರಿಸಿ ಹೊಸ ಹೊಸ ವಿದ್ಯಾಪೀಠಗಳು ಹುಟ್ಟುತ್ತಿರುವಾಗ ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡದಿದ್ದರೆ ಅಸ್ವಾಭಾವಿಕವೂ ದೇಶ ಕಾಲ ವಿರುದ್ಧವೂ ಆಗುತ್ತದೆ.

ಕಳೆ ಕೀಳದಿದ್ದರೆ ಪೈರು ಹೇಗೆ ಬೆಳೆದೀತು?

೨೪—೧೯೩೫.

---

## ಕನ್ನಡದ ಪುಣ್ಯ

ಹಿಂದಿನ ಸಂಚಿಕೆಯಲ್ಲಿ, ಮೈಸೂರು ವಿಶ್ವವಿದ್ಯಾನಿಲಯ ಪ್ರಾಸಾದದ ಹೊಸಲಿನ ಮೇಲೆ ನಿಲ್ಲಿಸಿದ್ದ ಕನ್ನಡವನ್ನು ಒಳಕ್ಕೆ ಕರೆದಂದು ಅದಕ್ಕೆ ಸರಿಯಾದ ಸ್ಥಾನವನ್ನು ಕೊಟ್ಟು ಗೌರವಿಸಬೇಕೆಂದು ಗೋಳಾಡಿದ್ದೆವಷ್ಟೆ. ಈಚೆಗೆ ನಡೆದ ಸೆನೆಟ್ ಸಭೆಯಲ್ಲಿ ಅದನ್ನು ಒಳಗೆ ಕರೆದುಕೊಂಡು ಕೂರಿಸಬೇಕೆಂದು ತೀರ್ಮಾನವಾಯಿತು. ಅದಕ್ಕೆ ಸಿಂಹಾಸನ ದೊರೆಯದಿದ್ದರೂ ಕೂರ್ಚಾಸನವಾದರೂ ದೊರೆಯಿತು. ಆ ತೀರ್ಮಾನದ ಪ್ರಕಾರ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕನ್ನಡ ಭಾಷಾ ಸಾಹಿತ್ಯಗಳ ವ್ಯಾಸಂಗವೂ ಆವಶ್ಯಕವೆಂದೂ, ಬಿ.ಎ. ಮುಂತಾದ ಮಿಕ್ಕ ಎಲ್ಲಾ ಮೇಲ್ತರಗತಿಯ ಪರೀಕ್ಷೆಗಳಿಗೂ ಕನ್ನಡ ಪಠ್ಯಪುಸ್ತಕಗಳ ವ್ಯಾಸಂಗದ ಮೇಲೆ ಉಪನ್ಯಾಸ ಲೇಖನಗಳು ಇರತಕ್ಕದ್ದೆಂದೂ ನಿಶ್ಚಿತವಾಯಿತು. ಆರ್ಯದ್ರಾವಿಡ ಸಂಸ್ಕೃತಿಗಳಿಗಿಂತ ಪೂರ್ತಿಯಾಗಿ ಬೇರೆಯಾದ ಸಂಸ್ಕೃತಿಯುಳ್ಳ ಮುಹಮ್ಮದೀಯ ಪ್ರಜೆಗಳ ಆನುಕೂಲ್ಯಕ್ಕಾಗಿ ಉರ್ದುವು ಇರಬಹುದೆಂದೂ ಒಪ್ಪಲಾಯಿತು. ಹೊಸಲಿನ ಮೇಲೆ ನಿಲ್ಲಿಸಿದ್ದನ್ನು ಹೊರಕ್ಕೆ ತಳ್ಳಿ ಉಪವಾಸ ಕೆಡವಿ ಕ್ರಮವಾಗಿ ನಿರ್ನಾಮ ಮಾಡುವ ಹೆದರಿಕೆ ಇಲ್ಲದೆ ಇಷ್ಟರಮಟ್ಟಿಗೆ ಆಯಿತಲ್ಲಾ ಎಂಬುದಿಷ್ಟೇ ಸಂತೋಷ. "ಜೀವನ್ ಭದ್ರಾಣಿ ಪಶ್ಯತಿ!"

೨೫—೧೯೨೬

---

## ಸರಸ್ವತಿಯ ಮನೆಯಲ್ಲಿ ಕಳವು

ಕರ್ಣಾಟಕ ಕಲಾಪ್ರಾಸಾದದ ಮೇಲೆ ನಿಂತಿದ್ದ ಕಲಶಗಳಲ್ಲಿ ದೊಡ್ಡದೊಡ್ಡ ಎರಡು ಸುವರ್ಣ ಕಲಶಗಳು ಬಿದ್ದುಹೋದುವು! ಕಾಲನು ಸರಸ್ವತಿಯ ಕಂಠಾಭರಣದಿಂದ ಎರಡು ಅಮೂಲ್ಯವಾದ ರತ್ನಗಳನ್ನು ಕಳವು ಮಾಡಿಬಿಟ್ಟನು. ಒಂದು ದೃಶ್ಯ ಜಗತ್ತನ್ನೂ ಮತ್ತೊಂದು ಶ್ರವ್ಯ ಜಗತ್ತನ್ನೂ ಬೆಳಗುತ್ತಿದ್ದದ್ದರಿಂದ, ಈಗ ಕಲಾಪ್ರಪಂಚವೇ ಕಣ್ಣುಕಿವಿಗಳಿಲ್ಲದಂತಾಗಿ ಶೂನ್ಯವೆನಿಸುತ್ತಿದೆ. ಈ ವರ್ಷದ ಗೋಕುಲಾಷ್ಟ

ಮಿಯಲ್ಲಿ ಜೀವವಿರಲಿಲ್ಲ ; ಕೃಷ್ಣನ ಮುಖದಲ್ಲಿ ಕಳೆಯಿರಲಿಲ್ಲ; ಅವನ ಮುರುಳಿಯು ಮೌನವನ್ನವಲಂಬಿಸಿತು. ವಿನಾಯಕನನ್ನು ನೋಡಿದರೆ ಅಳುತ್ತಿರುವ ವಿದೂಷಕನ ಜ್ಞಾಪಕ ಬರುತ್ತಿತ್ತು; ಅವನಲ್ಲಿ ಪ್ರೀತಿ ಹುಟ್ಟಲಿಲ್ಲ ; ಭಕ್ತಿಹುಟ್ಟಲಿಲ್ಲ. ಈ ಸಲದ ನವರಾತ್ರಿಯೂ ಹಾಗೆಯೇ—ಶಾರದೆಯ ವೀಣಾನಾದವು ನಿಂತುಹೋಯಿತು. ರತ್ನಾವಳಿಯಿಂದ ರಂಜಿಸುತ್ತಿದ್ದ ದೃಶ್ಯಪ್ರಪಂಚವು ಅದೃಶ್ಯವಾಯಿತು !

ಇದುವರೆಗೂ ಮೈಸೂರು ಪಟ್ಟಣದಲ್ಲಿ ಚಾತುರ್ಮಾಸವು ಸಂಗೀತೋದ್ಯಾನಕ್ಕೆ ವಸಂತಋತುವಿನಂತಿರುತ್ತಿತ್ತು. ಗೋಕುಲಾಷ್ಟಮಿಯು ಆರಂಭವಾಯಿತೆಂದರೆ ಶೇಷಣ್ಣನವರ ಮನೆಯಲ್ಲಿ ಸಂಗೀತದ ಸಮಾರಾಧನೆಗೆ ಆರಂಭ. ಆ ಸಮಾರಾಧನಪರಂಪರೆಗೆ ಆಹ್ವಾನವಿಲ್ಲದೆ ಹೋಗುವುದು ಸಾರ್ವತ್ರಿಕವಾದ ಶಿಷ್ಟ ಸಂಪ್ರದಾಯ. "ಹಣ್ಣಿಲ್ಲ ಕಾಯಿಲ್ಲ, ಬಾ ನನ್ನ ಗುಡಿಗೆ; ತೀರ್ಥವಿಲ್ಲ ಪ್ರಸಾದವಿಲ್ಲ ಹೋಗು ನಿನ್ನ ಮನೆಗೆ" ಎಂದು ಭಕ್ತಾದಿಗಳಿಗೆ ದೇವರು ಹೇಳುತ್ತಾನಂತೆ. ಶೇಷಣ್ಣನವರಿಗೆ ದೇವರ ಈ ಸಂಕುಚಿತ ಸ್ವಭಾವವಿರಲಿಲ್ಲ. ಕೈಬೀಸಿಕೊಂಡು ತಮ್ಮ ಮಂದಿರಕ್ಕೆ ಬರುವವರಿಗೆ ಅವರು ಅದೆಂತಹ ಪ್ರಸಾದವನ್ನು ವಿನಿಯೋಗ ಮಾಡಿಸುತ್ತಿದ್ದರು ! ಅದರ ಮಾಧುರ್ಯವನ್ನು ಸವಿದು ಮೈಸೂರಿನಲ್ಲಿ ಅನೇಕರು ರಸಜ್ಞರಾದರು. ಸಂಗೀತವನ್ನು ಕೇಳಬೇಕೆಂದು ಯಾರಾದರೂ ಅವರ ಮನೆಗೆ ಹೋದರೆಂದರೆ ಶೇಷಣ್ಣನವರು ಹಿಡಿದಿದ್ದ ಕೆಲಸವನ್ನಾದರೂ ಬಿಟ್ಟು ಅವರನ್ನು ತೃಪ್ತಿಗೊಳಿಸುತ್ತಿದ್ದರು. ವಿದ್ಯಾರ್ಥಿ ಮಂಡಲಿಗಂತೂ, ವಿಶ್ವವಿದ್ಯಾನಿಲಯದಲ್ಲಿ ಒಂದು ಸಂಗೀತ ಶಾಖೆಯನ್ನು ಏರ್ಪಡಿಸಿದ್ದರೂ ಅದು ಶೇಷಣ್ಣನವರ ಮಂದಿರದಷ್ಟು ಶಿಕ್ಷಣದಾಯಕವಾಗುತ್ತಿರಲಿಲ್ಲ. ವಿನಾಯಕನ ಹಬ್ಬ ಬಂದಿತೆಂದರೆ ಅವರನ್ನು ಕರೆಯದಿದ್ದ ವಿದ್ಯಾರ್ಥಿಮಂಡಲಿ ಯಾವುದು ? ಎಲ್ಲಿಗೇ ಆಗಲಿ ಸಂತೋಷದಿಂದ ಒಪ್ಪಿ ಬಂದು ಅವರು ಆನಂದವನ್ನು ಸೂಸದಿದ್ದ ಸ್ಥಳವಾವುದು ? ನವರಾತ್ರಿ ಬಂದಿತೆಂದರೆ ಅರಮನೆಯಲ್ಲಿ ತಮ್ಮ ತಮ್ಮ ವಿದ್ವತ್ತನ್ನು ಪ್ರದರ್ಶಿಸುವುದಕ್ಕಾಗಿ ಬರುತ್ತಿದ್ದ ನಾನಾದೇಶದ ಸಂಗೀತಶಾಸ್ತ್ರಜ್ಞರು, ಕಲಾಭಿಜ್ಞರು, ಶೇಷಣ್ಣನವರ ಮಂದಿರದಲ್ಲಿ

ಮೊದಲು ತಮ್ಮ ಕಾಣಿಕೆಯನ್ನು ಅರ್ಪಿಸುತ್ತಿದ್ದರು. ಇದರ ಒರೆಯ ಮೇಲೆ ಅವರವರ ಬಣ್ಣವು ಗೊತ್ತಾಗುತ್ತಿದ್ದದ್ದರಿಂದ ಪ್ರತಿಯೊಬ್ಬರೂ ತಮ್ಮ ಕೌಶಲ್ಯ ಸಾಮರ್ಥ್ಯಗಳ ಉತ್ತಮೋತ್ತಮವಾದ ಭಾಗದಿಂದ ಒಂದೊಂದು ತುಂಡನ್ನು ಅಲ್ಲಿ ಸಮರ್ಪಿಸುತ್ತಿದ್ದರು. ಶೇಷಣ್ಣನವರ ಅನುಗ್ರಹದಿಂದ ಈ ಸಮರ್ಪಣೆಯ ಪ್ರಸಾದವು ಎಲ್ಲರಿಗೂ ದೊರೆಯುತ್ತಿತ್ತು. ಇದು ಮೈಸೂರಿನವರಿಗೆ, ಏನು ಕೊಟ್ಟರೂ ಮತ್ತೊಂದು ಕಡೆ ಲಭ್ಯವಾಗದ ಅಮೂಲ್ಯವಸ್ತು. ಅವರ ಈ ವಿಧವಾದ ಅನುಗ್ರಹದಿಂದಲೂ ಔದಾರ್ಯದಿಂದಲೂ ಮೈಸೂರಿನ ಪ್ರಜೆಗಳಲ್ಲಿ ಒಂದು ಜಾತಿಯ ಜಿಪುಣತೆಯೂ ಧೋರಣೆಯೂ ಬಂದುವು. ಸಂಗೀತವೆಂದರೆ ಎಷ್ಟು ಆಶೆಯೋ ಅಷ್ಟು ಅಲಕ್ಷ್ಯ; ಶೇಷಣ್ಣನವರೆಂದರೆ ಎಷ್ಟು ಗೌರವವೋ ಅಷ್ಟು ಅನಾದರ—ಹೀಗಾಯಿತು. ಪರಸ್ಥಳದವರು ಬಂದರೆ, ಮೈಸೂರಿನ ಸಭಾಸದರ ಮುಂದೆ ಘನವಾದ ಕಛೇರಿ ನಡೆಸಿ ಮೆಚ್ಚಿಸುವುದು ಕಷ್ಟವಾಯಿತು. ನಮ್ಮವರ ಸಂಗೀತವನ್ನು ದುಡ್ಡುಕೊಟ್ಟು ಕೇಳಬೇಕೆಂಬ ಸಂಸ್ಕಾರವು ಹುಟ್ಟದೆ ಹೋಯಿತು.

ಕರ್ಣಾಟಕ ನಾಟಕರಂಗವು ಇನ್ನೂ ಅನಾಗರಿಕ ಸ್ಥಿತಿಯಲ್ಲಿದೆ ಎಂದು ಪಾಶ್ಚಾತ್ಯದೇಶಗಳಿಗೆ ಹೋಗಿ ಬಂದವರು ಹೇಳುತ್ತಾರೆ. ಒಂದನ್ನೊಂದಕ್ಕೆ ಹೋಲಿಸಿ ನೋಡುತ್ತ ಹೋದರೆ ಹಾಗೆ ತಾನೆ! ಆದರೆ ಮೈಸೂರಿನವರಿಗೆ ಮಾತ್ರ ಮಾದರಿಯ ನಾಟಕವೆಂದರೆ "ವರದಾಚಾರೀ ನಾಟಕ"ವೆಂದು ಸಿದ್ಧವಾಗಿ ಹೋಗಿತ್ತು. ನಿಜವಾಗಿಯೂ ನೋಡಿದರೆ, ವರದಾಚಾರ್ಯರು ಅಪರಿಮಿತವಾದ ಧನಬಲದಿಂದ ಪಾಶ್ಚಾತ್ಯದೇಶಗಳಲ್ಲಿ ಒದಗಿಸಿಕೊಳ್ಳುತ್ತಿರಬಹುದಾದ ರಂಗಪರಿಕರಗಳನ್ನು ಹೊರತು ಮಿಕ್ಕ ಕಲಾಕೌಶಲ ಚಮತ್ಕಾರಗಳೆಲ್ಲದರಿಂದಲೂ ರಂಗವನ್ನು ವಿಭೂಷಿಸಿದ್ದರು. ನಾಟಕ ರಂಗವು ಇಷ್ಟು ಉತ್ತಮ ಸ್ಥಿತಿಗೆ ಬಂದದ್ದಕ್ಕೂ, ಅಭಿನಯದ ಮಟ್ಟವು ಇಷ್ಟು ಎತ್ತರವಾದದ್ದಕ್ಕೂ ನಾಟಕದ ಹಾಡುಗಳಲ್ಲಿ ಈ ವ್ಯಕ್ತಿತ್ವ ವಿಶೇಷವು ಬರುವುದಕ್ಕೂ ಎಷ್ಟು ಮಟ್ಟಿಗೆ ಅವರ ಅಭಿರುಚಿ ಸಾಮರ್ಥ್ಯಗಳು ಕಾರಣವೆಂಬುದನ್ನು ಈಗ ಸುಮಾರು ಮುವ್ವತ್ತು ವರ್ಷಗಳಿಂದ ಮೈಸೂರಿನಲ್ಲಿ ನಾಟಕವನ್ನು

ನೋಡುತ್ತಿರುವವರು ಬಲ್ಲರು. ಇಂಗ್ಲೆಂಡ್ ಮುಂತಾದ ಪಾಶ್ಚಾತ್ಯ ದೇಶಗಳಲ್ಲಿ ಸೊಗಸಾದ ಹೊಸದೊಂದು ರೂಪಕವು ಪ್ರದರ್ಶನೆಗೆ ಬರುವುದು ಆರಂಭವಾಯಿತೆಂದರೆ ಅದು ಒಂದೇ ನೂರಾರು ಸಲ ನಡೆಯುವುದುಂಟು. ಹೀಗೆ ನೂರಾರು ಸಲವಲ್ಲದಿದ್ದರೆ ಹತ್ತಾರು ಸಲವಾದರೂ ಒಂದೇ ನಾಟಕವನ್ನು ಪ್ರದರ್ಶಿಸುವ ಆವಶ್ಯಕತೆಯೂ ವರದಾಚಾರ್ಯರ ಯಾಜಮಾನ್ಯದಲ್ಲಿಯೇ ಆರಂಭವಾದದ್ದು. ಅವರ ಪ್ರಹ್ಲಾದ ಚರಿತ್ರೆಯು ಈ ಗೌರವವನ್ನು ಪಡೆದದ್ದು ಅನೇಕರಿಗೆ ಇನ್ನೂ ಜ್ಞಾಪಕವಿದೆ. ಜನಗಳಿಗೆ ಆಗ ಅದೊಂದು ಹುಚ್ಚುಹಿಡಿದು ಹೋಗಿತ್ತು. ಆ ನಾಟಕವನ್ನು ನೋಡದವರೂ ಅದರ ಹಾಡುಗಳನ್ನು ಅರಿಯದವರೂ ಅಪ್ರಯೋಜಕರೆನ್ನಿಸಿಕೊಳ್ಳುತ್ತಿದ್ದರು.

ಶೇಷಣ್ಣನವರೂ ವರದಾಚಾರ್ಯರೂ ಅವರವರ ಭಾಗದಲ್ಲಿ ಕವನ ಮಾಡುವ ಸಾಮರ್ಥ್ಯವನ್ನು ಪಡೆದಿದ್ದರು; ಆದ್ದರಿಂದ ಅವರ ಸ್ವರ್ಗಗಮನದಿಂದ ಸಂಗೀತ ಪ್ರಪಂಚಕ್ಕೂ ನಾಟ್ಯಪ್ರಪಂಚಕ್ಕೂ ನಷ್ಟವಾದಂತೆ ಕನ್ನಡ ಸಾಹಿತ್ಯ ಪ್ರಪಂಚಕ್ಕೂ ನಷ್ಟ ಸಂಭವಿಸಿದೆ.

ಕಲ್ಪವೃಕ್ಷಗಳು ಇರುವವರೆಗೂ ಫಲಬಿಟ್ಟು ಬಿದ್ದುಹೋದುವು. ಆದರೆ ಅವುಗಳ ಬುಡದಲ್ಲಿ ಮೊಳಕೆಗಳು ಹುಟ್ಟಿಕೊಂಡಿವೆ. ಅವುಗಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತ ಅವು ಅಭಿವೃದ್ಧಿಗೆ ಬರುವಂತೆ ಪ್ರೋತ್ಸಾಹಕೊಟ್ಟು ಋಣಮುಕ್ತರಾಗುವುದು ಕನ್ನಡಿಗರ—ಮೈಸೂರಿನವರ—ಧರ್ಮ.

* * *

ಈ ಸಲದ ವಸ್ತುಕೋಶದ ತುಂಬ ಬರಿಯ ಚರಮವಾಕ್ಯಗಳೇ ಆದುವು. ಚರಮವಾಕ್ಯಗಳಾದರೂ, ಮೇಲೆ ಕಂಡಂಥ ಮಹನೀಯರ ಸ್ಮರಣೆಯು ಶುಭಕರವೆಂದೇ ನಮ್ಮ ಭಾವನೆ. ಅವರ ಹಾಗೆ ಬಾಳಿ ಸತ್ತವರ ಸಾವು ಒಂದು ಸಾವೇ? ಅವರು ಸ್ವರ್ಗಸ್ಥರಾಗಿದ್ದರೂ ಕೀರ್ತಿಶೇಷರಾಗಿ ನಮ್ಮಲ್ಲಿ ಇದ್ದೇ ಇರುತ್ತಾರೆ. ಅಚ್ಚಕಸ್ತೂರಿಯೂ ಪಚ್ಚಕರ್ಪೂರವೂ ಕರಗಿಹೋದರೆ ಅದೃಶ್ಯವಾಗುವುವೇ ಹೊರತು ನಷ್ಟವಾಗಿ ಹೋದಂತಾಯಿತೇ?

೨೭–೧೯೨೬

# ಅರ್ಧನಾರೀಶ್ವರ ಚಿತ್ರ

ಈ ಚಿತ್ರವನ್ನು ನೋಡಿದ ಕೂಡಲೆ ಕಾಳಿದಾಸನ ಒಂದೆರಡು ಶ್ಲೋಕಗಳು ಜ್ಞಾಪಕಕ್ಕೆ ಬಂದುವು. ಇವು ಪರಶಿವನ ಸ್ವಭಾವ ವರ್ಣನೆಯೂ ಹೌದು, ಕಾಳಿದಾಸನ ಗುಣವರ್ಣನೆಯೂ ಹೌದು. ಸಾಹಿತ್ಯದಲ್ಲಿ—ಸಂಸ್ಕೃತ ಸಾಹಿತ್ಯದಲ್ಲಿಯೂ—ಇಂಥ ಮನೋಹರವಾದ ವಚನಗಳು ಅಪೂರ್ವ. ಆದ್ದರಿಂದ ಅವುಗಳನ್ನು ಇಲ್ಲಿ ಪ್ರಸ್ತಾಪಿಸುವೆವು.

ಕಾಳಿದಾಸನ ನಾಟಕಗಳ ಆದಿಯಲ್ಲಿ ಬರುವ ಮಂಗಳ ಶ್ಲೋಕಗಳೆಲ್ಲ ಈಶ್ವರಸ್ತುತಿ ರೂಪವಾಗಿವೆ. ಅವುಗಳಲ್ಲಿ

ಏಕೈಶ್ವರ್ಯೇ ಸ್ಥಿತೋಽಪಿ ಪ್ರಣತಬಹುಫಲೇ ಯಸ್ಸ್ವಯಂ ಕೃತ್ತಿವಾಸಾಃ
ಕಾಂತಾಸಮ್ಮಿಶ್ರದೇಹೋಽಪ್ಯವಿಷಯಮನಸಾಂ ಯಃ ಪರಸ್ತಾದ್ ಯತೀನಾಂ ।
ಅಷ್ಟಾಭಿರ್ಯಸ್ಯ ಕೃತ್ಸ್ನಂ ಜಗದಪಿ ತನುಭಿರ್ಬಿಭ್ರತೋ ನಾಭಿಮಾನಃ
ಸನ್ಮಾರ್ಗಾಲೋಕನಾಯ ವ್ಯಪನಯತು ಸ ವಸ್ತಾಮಸೀಂ ವೃತ್ತಿಮೀಶಃ ॥

ಎಂಬುದು ಒಂದು. ಇದರಲ್ಲಿ ಎರಡನೆಯ ಪಾದವು ಅರ್ಧನಾರೀಶ್ವರನ ವರ್ಣನೆಯಾಗಿದೆ. ಕಾಂತೆಯನ್ನು ತನ್ನ ದೇಹದಲ್ಲಿಯೇ ಸೇರಿಸಿಕೊಂಡಿದ್ದರೂ ಶಿವನು ವಿಷಯಗಳಿಗೆ ಮನಸ್ಸು ಕೊಡದೆ ತಪಸ್ಸು ಮಾಡುವ ಸಂಯಮಿಗಳಲ್ಲಿ ಅಗ್ರಗಣ್ಯನಾಗಿ ಆರ್ಯ ಧರ್ಮಾನುಯಾಯಿಗಳಿಗೆ ಉಚ್ಚಾದರ್ಶನಾಗಿದ್ದಾನೆ. ಈ ವಿಧವಾದ ಸಂಯಮವನ್ನೇ ಶ್ರೀಕೃಷ್ಣನು ಸಂಗರಾಹಿತ್ಯ, ನಿಷ್ಕಾಮಕರ್ಮ, ಎಂದು ಭಗವದ್ಗೀತೆಯಲ್ಲಿ ಬೋಧಿಸಿರುವುದು. ತಾಮಸೀವೃತ್ತಿಯು ಹೋಗಿ ಜ್ಞಾನದಾಯಕವಾದ ಸತ್ವಗುಣವು ಅಭಿವೃದ್ಧಿಯಾಗಬೇಕಾದರೆ ವಿಷಯ ದಾಸತ್ವವು ಹೋಗಬೇಕು, ವಿಷಯಸನ್ನಿಧಿಯಲ್ಲಿಯೂ ಔದಾಸೀನ್ಯದಿಂದಿರಬಲ್ಲ ಸಂಯಮವಿರಬೇಕು. ಇದು

ಶಬ್ದಾದೀನ್ ವಿಷಯಾನ್ ಭೋಕ್ತುಂ ಚರಿತುಂ ದುಶ್ಚರಂ ತಪಃ ।
ಪರ್ಯಾಪ್ತೋಽಸಿ ಪ್ರಜಾಃ ಪಾತುಂ ಔದಾಸೀನ್ಯೇನ ವರ್ತಿತುಂ ॥

ಎಂದು ರಘುವಂಶದಲ್ಲಿ ವಿಷ್ಣುವನ್ನು ವರ್ಣಿಸಿರುವಂತೆ ದೇವಾಧಿದೇವತೆಗಳಿಗೆ ಮಾತ್ರ ಸಾಧ್ಯ. ಆದರೂ ಮನುಷ್ಯನು ಪಶುಸ್ವಭಾವ

ವನ್ನು ಬಿಟ್ಟು ಮನುಷ್ಯನಾಗಿ, ನರಶ್ರೇಷ್ಠನಾಗಿ, ದಿವ್ಯಗುಣಕ್ಕೆ ಅಧಿಕಾರಿಯಾಗಬೇಕಾದರೆ ಸಂಯಮದಿಂದಲೇ. ಎಷ್ಟೆಷ್ಟು ಮಟ್ಟಿಗೆ ಸಂಯಮವನ್ನು ಸಂಪಾದಿಸಿದರೆ ಅಷ್ಟಷ್ಟು ಮಟ್ಟಿಗೆ ಮನುಷ್ಯನು ದೇವರಾಗುವನು.

ಅರ್ಧನಾರೀಶ್ವರ ಚಿತ್ರದಲ್ಲಿ ಬಲಗಡೆ ಕಂಠಾಭರಣವಾಗಿಯೂ ನಾಗಮುರಿಗೆಯಾಗಿಯೂ ಸರ್ಪಗಳು ಇವೆಯಷ್ಟೆ. ಇವು ಹೆಡೆಬಿಟ್ಟು ಕೊಂಡು ಸ್ತ್ರೀ ಭಾಗದಿಂದ ವಿಮುಖವಾಗಿರುವುದನ್ನೂ ಕಂಕಣ ಸ್ಥಾನದಲ್ಲಿ ನಾಗಾಭರಣಗಳು ಇಲ್ಲದಿರುವುದನ್ನೂ ನೋಡಿದರೆ

ಹಿತ್ವಾ ತಸ್ಮಿನ್ ಭುಜಗವಲಯಂ ಶಂಭುನಾ ದತ್ತಹಸ್ತಾ
ಕ್ರೀಡಾಶೈಲೇ ಯದಿ ಚ ವಿಚರೇತ್ ಪಾದಚಾರೇಣ ಗೌರೀ ।
ಭಂಗೀಭಕ್ತ್ಯಾ ವಿರಚಿತವಪುಃ ಸ್ತಂಭಿತಾಂತರ್ಜಲೌಘಃ
ಸೋಪಾನತ್ವಂ ಕುರು ಮಣಿತಟಾರೋಹಣಾಯಾಗ್ರಯಾಯೀ ॥

ಎಂಬ ಮೇಘಸಂದೇಶದ ಶ್ಲೋಕವು ಜ್ಞಾಪಕಕ್ಕೆ ಬರುತ್ತದೆ. ಶ್ಮಶಾನವಾಸಿಯಾದ ಶಿವನೂ ಪಂಚಾಗ್ನಿ ಮಧ್ಯದಲ್ಲಿ ತಪಸ್ಸು ಮಾಡಿದ ಪಾರ್ವತಿಯೂ ಈಗ ಪೂರ್ವಸ್ಥಿತಿಯನ್ನು ಬಿಟ್ಟು ಹಿಮಾಲಯದಲ್ಲಿ ಬೆಳ್ಳಿಯ ಬೆಟ್ಟದ ಮೇಲೆ ತಂಪಾಗಿದ್ದುಕೊಂಡಿದ್ದಾರೆ. ಶಿವನು ಶಂಕರನ ಸೌಮ್ಯರೂಪವನ್ನು ಧಾರಣೆ ಮಾಡಿ ಕುಸುಮಕೋಮಲೆಯಾದ "ಗೌರಿ"ಯ ಕೈ ಹಿಡಿದು ಆಯಾಸವಾಗದಂತೆ ಅವಳನ್ನು ಹೆಜ್ಜೆ ಇಡಿಸುತ್ತಾ ಕ್ರೀಡಾ ಶೈಲದಲ್ಲಿ ಸಂಚಾರ ಮಾಡುತ್ತಿದ್ದಾನೆ. ಗೌರಿಯು ಬಹು ಭೀರು. ಅವಳು ಅಂಜಿಕೊಂಡಾಳೆಂದು ಶಿವನು ಎಷ್ಟೋ ಪ್ರೇಮದಿಂದ ತನ್ನ ನಾಗಕಂಕಣಗಳನ್ನು ತೆಗೆದು ಹಾಕಿ ಅವಳಿಗೆ ಕರಾವಲಂಬನವನ್ನು ಕೊಟ್ಟು ಸಂತೋಷದಿಂದ ತಿರುಗಾಡುತ್ತಿದ್ದಾನೆ. ಈ ಮೃದುವಾದ ಆಕಾರ ರೂಪ ಭಾವಾದಿಗಳಿಗೆ ತಕ್ಕ ಸನ್ನಿವೇಶ. ಗೌರಿಯು ಸುಲಭವಾಗಿ ಹತ್ತುವುದಕ್ಕೆ ಅನುಕೂಲವಾಗುವಂತೆ ಮೇಘವು ಅವರ ಮುಂದೆ ಘನೀಭೂತವಾಗಿ ಮೆಟ್ಟಿಲು ಮೆಟ್ಟಿಲಾಗಿ ನಿಂತು ಜಗತ್ಪಿತೃಗಳ ಪಾದಧೂಳಿಯಿಂದ ಪುನೀತವಾಗಬೇಕೆಂದು ಯಕ್ಷನು ಸೂಚಿಸುತ್ತಾನೆ! ಶುಭ್ರವಾದ ಹಿಮಾಲಯದ ಮೇಲೆ ರಜತಾದ್ರಿ ಶಿಖರದಲ್ಲಿ

'ಗೌರಿ' ಯನ್ನು ನಡೆಸುತ್ತಾ ಮಂಜಿನ ಮೆಟ್ಟಿಲುಗಳನ್ನು ಹತ್ತುತ್ತಿರುವ ಜ್ಯೋತಿರ್ಮಯನಾದ ಶಂಕರನನ್ನು ನೋಡಿ! ರಸಿಕನಾದ ಕಾಳಿದಾಸನು ವಿರಹಿಯಾದ ಯಕ್ಷನೊಡನೆ ನಮಗೆ ಸ್ನೇಹವನ್ನು ಉಂಟುಮಾಡಿ ಅವನ ಜೊತೆಯಲ್ಲಿ ಗೌರೀಶಂಕರರ ನಿರಾತಂಕವಾದ ಪ್ರೇಮಸಂಸಾರದಲ್ಲಿ ನಮ್ಮನ್ನು ಅತಿಥಿಗಳನ್ನಾಗಿ ಮಾಡಿರುವನು. ಆ ಸನ್ನಿವೇಶವು ಮನಸ್ಸಿನಲ್ಲಿ ಚಿತ್ರಿತವಾದ ಕೂಡಲೆ ಆತ್ಮವು ಸ್ನಿಗ್ಧವೂ ಶೀತಲವೂ ಶಾಂತವೂ ಆಗುವುದು.

೨೮–೧೯೩೬

---

## ಶ್ರೀಕೃಷ್ಣರಾಜ ರಜತಮಹೋತ್ಸವ

ಈಗ ಕೆಲವು ದಿವಸಗಳಿಂದ ಕನ್ನಡಿಗರ ಕಿವಿ ಕಣ್ಣು ಮನಗಳಲ್ಲಿ ತಾನೇ ತಾನಾಗಿ ತುಂಬಿಕೊಂಡಿರುವುದು, ಶ್ರೀಮನ್ನಾಲ್ವಡಿ ಕೃಷ್ಣರಾಜ ವೊಡೆಯರ ಆಳಿಕೆಯ ರಜತಮಹೋತ್ಸವ. ಕನ್ನಡಿಗರ ಪುಣ್ಯೋದಯದಿಂದ ಮೈಸೂರು ದೇಶದಲ್ಲಿ ಬಹುಕಾಲಕ್ಕೆ ಲಭ್ಯವಾದ ಈ ಮಹೋತ್ಸವದಲ್ಲಿ ಉತ್ಸಾಹ ಪಡದವರಿಲ್ಲ; ಸಂಭ್ರಮ ಸಡಗರ ಪಡದವರಿಲ್ಲ; ಆನಂದ ಪಡದವರಿಲ್ಲ; ಭರತಖಂಡದ ಯಾವ ಪತ್ರಿಕೆಯನ್ನೇ ನೋಡಲಿ ಅದರ ವರ್ಣನೆ! ಉತ್ಸವವು ಕಳೆದು ಒಂದು ತಿಂಗಳಾದರೂ ವರ್ಣನೆಗಳೂ ಪ್ರಶಂಸೆಗಳೂ ಇನ್ನೂ ಬರುತ್ತಲೇ ಇವೆ—ಸೊಗಸಾದ ಸಂಗೀತದ ಕಛೇರಿ ನಿಂತಮೇಲೂ ಬಹಳ ಹೊತ್ತು ಕಿವಿ ಮನ ಹೃದಯಗಳಲ್ಲಿ ಸೂಕ್ಷ್ಮವಾಗಿ, ಆದರೆ ಮಧುರತರವಾಗಿ, ನಾದಗೊಡುತ್ತಿರುವ ಗಾನದಂತೆ.

ಈಗ್ಗೆ ನಲವತ್ತನಾಲ್ಕು ವರ್ಷಗಳ ಕೆಳಗೆ ಶ್ರೀಮರ್ಮ ಮಹಾರಾಜರವರು ಜನ್ಮಿಸಿದಾಗ ಅವರೊಡನೆಯೇ ಹೊಸಗನ್ನಡದ ಕಲಾಸಾಹಿತ್ಯಾದಿಗಳು ಹುಟ್ಟಿದುವೆಂದೂ, ಅವರು ವರ್ಧಿಸುತ್ತ ಬಂದ ಹಾಗೆಲ್ಲಾ ವರ್ಧಿಸುತ್ತ ಬಂದುವೆಂದೂ ಹೇಳಬಹುದು. ಅವರು ರಾಜ್ಯಸೂತ್ರವನ್ನು ಧರಿಸಿದಾಗಿನಿಂದಂತೂ ಅದು ಇನ್ನೂ ಸ್ಪಷ್ಟತರವಾಗಿ ಗೋಚರವಾಗುತ್ತ ಬಂದಿದೆ. "ನವೇ ತಸ್ಮಿನ್ ಮಹೀಪಾಲೇ ಸರ್ವಂ ನವಮಿವಾಭವತ್."

ಎಂದು ಶ್ರೀರಾಮನ ಮುತ್ತಾತನ ವಿಚಾರವಾಗಿ ಕಾಳಿದಾಸನು ಕಾವ್ಯದಲ್ಲಿ ಹೇಳಿದ್ದನ್ನು ಸುಮಾರು ೧೫೦೦ ವರ್ಷಗಳ ಮೇಲೆ ನಮ್ಮ ಪ್ರಭುಗಳ ವಿಚಾರದಲ್ಲಿ ಕನ್ನಡಿಗರು ಪ್ರತ್ಯಕ್ಷವಾಗಿ ಕಂಡಂತಾಯಿತು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಹೊಸಗನ್ನಡ ಜಗತ್ತಿಗೆ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಳಿಕೆಯಲ್ಲಿ ಉಷಃಕಾಲ ತೋರಿ, ಶ್ರೀಮಚ್ಚಾಮರಾಜ ಒಡೆಯರವರ ಕಾಲಕ್ಕೆ ಅರುಣೋದಯವಾಗಿ, ಶ್ರೀ ಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಉದಯದೊಡನೆ ಸೂರ್ಯೋದಯವಾಯಿತೆಂದು ಹೇಳಬಹುದು. ಈ ಬೆಳಕಿನಲ್ಲಿ ಸೃಷ್ಟಿಯ ಅಂದಚಂದಗಳು ಬೆಳಗುತ್ತಿರಲು, ನಾವು ಕಣ್ಣನ್ನು ಪಡೆದು, ಅವುಗಳನ್ನು ನೋಡಿ ನಲಿಯುವವರಾಗಿದ್ದೇವೆ. ನಾವು ಈ ಮಾತುಗಳನ್ನು ಬರೆಯಬಲ್ಲವರಾಗಿರುವುದೂ, ವರ್ಷಕ್ಕೆ ಸುಮಾರು ಐವತ್ತು ಲಕ್ಷ ರೂಪಾಯಿಗಳಂತೆ ವೆಚ್ಚ ಮಾಡಿ, ಶ್ರೀಮನ್ಮಹಾರಾಜರವರ ಸರ್ಕಾರದವರು ಮಾಡುತ್ತಿರುವ ವಿದ್ಯಾದಾನದ ಫಲವೆಂಬುದನ್ನು ಕೃತಜ್ಞತೆಯಿಂದ ಮನಸ್ಸಿಗೆ ತಂದುಕೊಳ್ಳುತ್ತೇವೆ. ಕನ್ನಡದ ಅಭಿವೃದ್ಧಿಗೇ ಎಂದು ಏರ್ಪಡಿಸಿದ್ದ "ಭಾಷೋಜ್ಜೀವಿನೀ" ಪಾಠಶಾಲೆ, ದಕ್ಷಿಣದೇಶಕ್ಕೆಲ್ಲಾ ಸಂಸ್ಕೃತ ವಿದ್ವಾಂಸರನ್ನು ಸಂಪಾದನೆ ಮಾಡಿಕೊಟ್ಟಿರುವ "ಸಂಸ್ಕೃತ ಮಹಾಪಾಠಶಾಲೆ", ಮೈಸೂರಿನ ಭಾಷಾ ಸಾಹಿತ್ಯಗಳು ಮತ್ತು ಮೈಸೂರಿಗೆ ಬೇಕಾದ ಜ್ಞಾನವಿಶೇಷಾದಿಗಳು ಇವುಗಳನ್ನು ಅಭಿವೃದ್ಧಿಪಡಿಸಲು ಏರ್ಪಟ್ಟ "ವಿಶ್ವವಿದ್ಯಾನಿಲಯ", ಪ್ರಜಾಸಾಮಾನ್ಯರ ಅಂಧಕಾರವನ್ನು ಹೋಗಲಾಡಿಸಿ ಅವರನ್ನು ಧೃಷ್ಟರನ್ನೂ ಪುಷ್ಟರನ್ನೂ ಮಾಡುತ್ತಿರುವ ಸಾವಿರಾರು ಸ್ಕೂಲುಗಳು ಇವು "ಕನ್ನಡದ ಕಣ್ಣದು–ಮೈಸೂರು" ಎಂದು ಹೇಳುವಹಾಗೆ ಮಾಡಿವೆ. ಶ್ರೀಮನ್ಮಹಾರಾಜರವರು ಈ ಸಂಸ್ಥೆಗಳಿಗೆ ಅಧಿಷ್ಠಾತೃ ದೇವತೆಯಾಗಿ ಸಂಸ್ಥಾನದ ವಿದ್ಯಾರಥದ ಸಾರಥ್ಯವನ್ನು ಕೈಕೊಂಡು ನಡಸಲು, ಪ್ರಜೆಗಳಿಗೆ ಪೂರ್ವ ಪಶ್ಚಿಮ ಜ್ಞಾನಭಾಂಡಾರಗಳೆರಡೂ ದೊರೆತುವು. ಕನ್ನಡಿಗರು ಅವುಗಳನ್ನು ಸೂರೆಗೊಂಡರು. ಇವುಗಳೊಡನೆ ಇಂಗ್ಲೀಷಿನ ಪ್ರಾಬಲ್ಯದ ಪ್ರವಾಹದಲ್ಲಿ ಎಲ್ಲರೂ ತೇಲಿಹೋಗುತ್ತಿರುವಾಗ, ಮೈಸೂರು ದೇಶದವರೆಲ್ಲರಿಗೂ ಕನ್ನಡದಲ್ಲಿ ಇರಬೇಕಾದ ಮಮತೆಗೆ ಮೇಲ್ಪಂಕ್ತಿ

ಹಾಕಿಕೊಟ್ಟಂತೆ ಮಹಾಸ್ವಾಮಿಯವರು ವಿಶೇಷ ಸಂದರ್ಭ ಬಂದಾಗ ಕನ್ನಡದಲ್ಲಿ ಭಾಷಣಮಾಡುವ ಪದ್ಧತಿಯನ್ನು ಆಚರಣೆಗೆ ತಂದರು. ಇದರಿಂದ, ಮೈಸೂರಿನವರಾದರೂ ಕನ್ನಡದ ಶತ್ರುಗಳಾಗಿದ್ದವರ ರೆಕ್ಕೆ ಪುಕ್ಕಗಳು ಉದುರಿಹೋದುವು; ಕನ್ನಡದ ಅಭಿಮಾನಿಗಳಿಗೆ ಚತುರ್ಭುಜವಾಯಿತು. ಇಂಗ್ಲಿಷಿನ ಸಾರವನ್ನು ಸೆಳೆದುಕೊಂಡರೂ ತನ್ನನ್ನು ತಾನು ಮರೆಯಬಾರದೆಂಬುದನ್ನು ಉದಾಹರಣೆಯಿಂದ ಕನ್ನಡಕ್ಕೂ ಕನ್ನಡಿಗರಿಗೂ ಹೇಳಿಕೊಟ್ಟಂತಾಯಿತು.

ಕನ್ನಡವು ಕಣ್ಣುಬಿಟ್ಟದ್ದು ಈ ಕಾಲದಲ್ಲಿಯೇ! ಕಾವ್ಯಮಂಜರೀ ಕಾವ್ಯಕಲಾನಿಧಿಗಳಿಂದ ಹಳಗನ್ನಡಸಾಹಿತ್ಯವು ಹೊರಪಟ್ಟು, ಕರ್ಣಾಟಕ ಗ್ರಂಥಮಾಲೆ ಕರ್ಣಾಟಕಚಂದ್ರಿಕೆ ಮುಂತಾದವುಗಳಲ್ಲಿ ಹೊಸ ಕನ್ನಡ ಸಾಹಿತ್ಯವು ಹುಟ್ಟಿದ್ದು ಈ ಪ್ರಭುಗಳ ಕಾಲದಲ್ಲಿ. ಈ ಕಾಲದಲ್ಲಿಯೇ, ವಿದೇಶೀಯರಾದರೂ ವಿಲಕ್ಷಣ ಜ್ಞಾನ ಶಕ್ತಿ ಸಂಪನ್ನರಾದ ರೈಸ್ ಕಿಟ್ಟೆಲ್ ಮುಂತಾದ ಮಹನೀಯರು ಕನ್ನಡ ದೇಶದಲ್ಲಿ ಜ್ಞಾನ ಸೋಪಾನವನ್ನು ಕಟ್ಟಿ ಮೈಸೂರು ದೇಶದ ಪ್ರಾಚೀನಚರಿತ್ರೆ ಸಾಹಿತ್ಯಾದಿಗಳನ್ನು ಆಮೂಲಾಗ್ರವಾಗಿ ಶೋಧಿಸಿ ಕನ್ನಡಿಗರಿಗೆ ಆತ್ಮಗೌರವವನ್ನೂ ಸಮಾನಸ್ಕಂಧರಲ್ಲಿ ಸನ್ಮಾನವನ್ನೂ ತಂದರು. "ಪಂಪಭಾರತ" "ಕವಿರಾಜಮಾರ್ಗ" "ಶಬ್ದಾನುಶಾಸನ" ಮುಂತಾದ ಗ್ರಂಥಗಳೂ ಶಾಸನರಾಶಿಗಳೂ ಹೊರಕ್ಕೆ ಬಂದು, ಕನ್ನಡ ಸಾಹಿತ್ಯ ಚರಿತ್ರೆಗೆ ಮೂಲವಾಗಿ, "ಕವಿಚರಿತೆ"ಯಂಥ ದೊಡ್ಡ ಗ್ರಂಥಗಳು ಬರುವಂತಾಯಿತು. ಇದರಿಂದ ಕನ್ನಡಕ್ಕೂ ಹೆಮ್ಮೆಪಡಬಹುದಾದಷ್ಟು ವಿಸ್ತಾರವೂ ಘನವೂ ಆದ ಸಾಹಿತ್ಯವಿದೆಯೆಂದು ತಿಳಿದುಬಂದಿತು.

ಹೊಸಗನ್ನಡವು ಬಂದು ಎಷ್ಟೋ ದಿನವಾಗಿದ್ದರೂ, ಪಾಶ್ಚಾತ್ಯ ಸಾಹಿತ್ಯ ಸಂಸರ್ಗದಿಂದ ಬಂದ ನವೀನಮಾರ್ಗದ ಹೊಸಗನ್ನಡ ಸಾಹಿತ್ಯವು ವಿಧವಿಧವಾದ ರೂಪವನ್ನು ತಾಳಿ ವಿಜೃಂಭಿಸಲಾರಂಭಿಸಿರುವುದೂ ಈ ಕಾಲದಲ್ಲಿಯೇ! ಗದ್ಯವು ಹುಟ್ಟಿ, ಪ್ರಾಚೀನ ಭಾರತೀಯ ಕಾವ್ಯ ಪ್ರಪಂಚಕ್ಕೆ ಅಪರಿಚಿತವಾದ ಸರಳವೂ ಶುದ್ಧವೂ ಹೃದ್ಯವೂ ಆದ ಗದ್ಯವು ಹುಟ್ಟಿ, ಅದರಲ್ಲಿ ಚರಿತ್ರೆ ಜೀವನಚರಿತ್ರೆ ಪ್ರಬಂಧ ವಿಮರ್ಶೆ ಮುಂತಾದ

ಗ್ರಂಥಭೇದಗಳು ರೂಪುಗೊಂಡುವು. ಹಳಗನ್ನಡ ಗದ್ಯದ ತೊಡರು ಶೈಲಿ ಹೋಗಿ, ಹೊಸ ವಿಷಯಕ್ಕೆ ತಕ್ಕ ಹೊಸ ಶೈಲಿ ಒದಗಿ, ಆರ್ಯ ಕೀರ್ತಿಯ ಗಂಡುಶೈಲಿಯಿಂದ ಹಿಡಿದು ವೆಂಕಟಾಚಾರ್ಯರ ನವೀನ ಕಾದಂಬರೀಶೈಲಿ, ಪುಟ್ಟಣ್ಣನವರ ಮನೆಮಾತಿನ ಶೈಲಿ, ಶ್ರೀನಿವಾಸರ ಸಣ್ಣ ಕಥೆಯ ಸುಖಶೈಲಿಯುವರೆಗೆ ವಿಂಗಡಿಸಲಾರದಷ್ಟು ವಿಧವಿಧವಾದ ಶೈಲಿಗಳು ಬಂದುವು. ಜಲಪಾತಗಳಂತೆಯೂ, ವಿಷಝರಿಗಳಂತೆಯೂ, ವಿದ್ಯುದ್ವಾಹಿನಿಗಳಂತೆಯೂ, ಕೆರೆ ಕಟ್ಟಿ ಕಾಲುವೆಗಳಂತೆಯೂ ನಾನಾ ವಿಧವಾದ ಗುಣಪ್ರಯೋಜನಗಳುಳ್ಳ ಪತ್ರಿಕಾಕಾರ್ಯವು ಜನ್ಮವೆತ್ತಿ ಬೆಳೆಯಿತು. ಕನ್ನಡದೇಶದ ಪತ್ರಿಕಾಕಾರ್ಯದಲ್ಲಿ ಪಿತಾಮಹರೆನ್ನಬಹುದಾದ ಮ॥ ವೆಂಕಟಕೃಷ್ಣಯ್ಯನವರು ಕನ್ನಡ ಮಾಸಪತ್ರಿಕೆಗಳಿಗೆ ಮೂಲವಾದ "ಹಿತಬೋಧಿನಿ"ಯನ್ನು ಹೊರಡಿಸಿದರು. ಅದು ಸುಮಾರು ಮೂವತ್ತೇಳು ವರ್ಷದ ಹಿಂದಿನ ಮಾತು—ಅಲ್ಲಿಂದೀಚೆಗೆ, ನಂದಿನೀಧೇನುವಿನಿಂದ ಜನಿಸಿದ ಜನಸ್ತೋಮದಂತೆ ಪತ್ರಿಕೆಗಳು ಬಂದುವು, ಬರುತ್ತಿವೆ.

ಗದ್ಯದಂತೆ ಪದ್ಯಕಾವ್ಯ ನಾಟಕಗಳೂ ಹುಟ್ಟಿದುವು. ನಾಟಕದಲ್ಲಿ ಬಸಪ್ಪ ಶಾಸ್ತ್ರಿಗಳ ಶಾಕುಂತಲನಾಟಕ ಮೊದಲು ಮಾಡಿಕೊಂಡು ಸಂಸ್ಕೃತ ಇಂಗ್ಲೀಷು ತೆಲುಗು ಬಂಗಾಳಿ ಮುಂತಾದ ಭಾಷೆಗಳ ನಾಟಕಗಳ ಭಾಷಾಂತರಗಳೂ, ವಿದ್ವಾಂಸರೂ ನಟಶ್ರೇಷ್ಠರೂ ಸ್ವಂತವಾಗಿ ಅಥವಾ ಆಧಾರದಮೇಲೆ ಬರೆದ ನಾಟಕಗಳೂ, ಇಂಗ್ಲಿಷಿನ ಆಧುನಿಕ ನಾಟಕಗಳ ಮಾದರಿಯ ಮೇಲೆ ಬರೆದ, ನಗುವಿನಿಂದ ಹೊಟ್ಟೆಯೊಡಿಸಿ ಸಂಕಟದಿಂದ ಹೃದಯವನ್ನು ಸೀಳುವ ಮತ್ತು ಅಪೂರ್ವವಾದ ಉಪಜ್ಞತೆಯುಳ್ಳ ಮ॥ ಕೈಲಾಸಂರವರ ನಾಟಕಗಳೂ ಬಂದಿವೆ. ಪದ್ಯದಲ್ಲಿ "ಮಹತ್ವವೂ ಭಾರವತ್ವವೂ'' ಉಳ್ಳ ಕಾವ್ಯಗಳು ಹೋದುವು—ಕುಕ್ಕೆ ಮೊರಗಳಲ್ಲಿ ತುಂಬುವ ತಿಂಡಿಗಳೂ ಅದನ್ನು ತಿನ್ನುವ ಉದರವೀರರೂ ಹೋದಂತೆ ಹೋದುವು; ಅಂತರಿಕ್ಷವನ್ನು ಮುಟ್ಟುತ್ತ ನಿಂತಿದ್ದ ಮಹಾ ವೃಕ್ಷಗಳು ಹೋದಂತೆ ಹೋದುವು. ಆ ಸ್ಥಾನದಲ್ಲಿ ಹೊಸ ಕಾವ್ಯಗಳು ನಗುತ್ತ ನಲಿಯುತ್ತ ಬಂದುವು.—ತಳತಳನೆ ಹೊಳೆಯುವ ಪುಟ್ಟ

ದುಂಡು ತಟ್ಟೆಗಳೂ, ಅವುಗಳಲ್ಲಿ ನಾನಾ ಬಣ್ಣಗಳ ರಸವತ್ತಾದ ನಾಜೂಕು ತಿಂಡಿಗಳೂ, ಅವುಗಳನ್ನು ತಿನ್ನುವುದಕ್ಕೆ ರಸಿಕಶಿರೋಮಣಿಗಳೂ ಬಂದಂತೆ ಬಂದುವು; ಹಸುರಾದ ಹುಲ್ಲುಗಾವಲಿನಿಂದಲೂ ಸುತ್ತು ಸುತ್ತಾದ ಸೀಳುದಾರಿಗಳಿಂದಲೂ, ಕತ್ತರಿಸಿದ ಗಿಡಗಳಿಂದಲೂ ಬಗೆ ಬಗೆಯಾದ ಹೂ ಬಳ್ಳಿಗಳಿಂದಲೂ ಪರಿಶೋಭಿತವಾದ ಉದ್ಯಾನಗಳು ಬಂದಂತೆ ಬಂದುವು. ಗದ್ಯದಲ್ಲಿ ಹೇಗೆ ವೈವಿಧ್ಯ, ಜೀವಕಳೆ, ರಸಿಕತೆ, ಸರಳತೆ, ನವೀನತೆಗಳು ಬಂದುವೋ ಪದ್ಯದಲ್ಲಿಯೂ ಹಾಗೆಯೇ, ಇನ್ನೂ ಸ್ವಲ್ಪ ಅತಿಶಯವಾಗಿಯೇ ಬಂದುವು.

ಇವುಗಳಿಗೆ ಶ್ರೀಮರ್ಜ ಮಹಾರಾಜರವರೂ ಅವರ ಸರ್ಕಾರವೂ, ತಿಳಿದಂತೆಯೂ ತಿಳಿಯದಂತೆಯೂ, ಮುಕ್ತಹಸ್ತದಿಂದ ಉತ್ತೇಜನ ಕೊಡುತ್ತಿದ್ದಾರೆ. ಪ್ರಬುದ್ಧ ಕರ್ಣಾಟಕವೂ ಹೀಗೆ ಪಡೆದಿರುವ ಸಹಾಯವನ್ನು ಇಲ್ಲಿ ಕೃತಜ್ಞತೆಯಿಂದ ಪ್ರಕಾಶಪಡಿಸಲಪೇಕ್ಷಿಸುವೆವು. ಆದರಂತೆ ಪ್ರಬುದ್ಧ ಕರ್ಣಾಟಕದ ಸಂಪಾದಕವರ್ಗಕ್ಕೆ ಸೇರಿದ ನಮ್ಮ ಮಿತ್ರರೊಬ್ಬರೂ ತಾವು ಬರೆದ ಒಂದು ಗ್ರಂಥಕ್ಕಾಗಿ ಮಹಾಸ್ವಾಮಿಯವರಿಂದ ಸನ್ಮಾನಿತರಾಗಿದ್ದಾರೆ.

ಶ್ರೀಮರ್ಜ ಮಹಾರಾಜರವರ ರಸಿಕತೆಯಿಂದ ಸೃಷ್ಟವಾದ ಸೌಂದರ್ಯ ಪ್ರಪಂಚವು ಸಾಹಿತ್ಯ ಸಾಮ್ರಾಜ್ಯದಲ್ಲಿಯೇ ಮುಗಿದಿಲ್ಲ. ಅದು ಸಾಕ್ಷಾತ್ತಾಗಿ, ಪ್ರಕಾಶವಾಗಿ ಕಂಡುಬರುತ್ತಿರುವುದು ಲಲಿತಕಲಾ ಪ್ರಪಂಚದಲ್ಲಿ—ವಾಸ್ತುಶಿಲ್ಪ ಸಂಗೀತಾದಿಗಳಲ್ಲಿ. ಈ ಇಪ್ಪತ್ತೈದು ವರ್ಷಗಳೊಳಗೆ ಮೈಸೂರುನಗರ ಒಂದರಲ್ಲಿಯೇ ಅರಮನೆ ಮೊದಲು ಮಾಡಿಕೊಂಡು ಕಟ್ಟಿರುವ ನಾನಾ ಸೌಧಗಳೂ ವಿಶಾಲವಾದ ಬೀದಿಗಳೂ ಸುಂದರವಾದ ಉದ್ಯಾನಗಳೂ ನೋಟಕರನ್ನು ಎಲ್ಲಾ ಕಡೆಯಿಂದಲೂ ಯಾವಾಗಲೂ ಸೆಳೆದು ತರುವಂತಾಗಿದೆ. "ಹೊಸದಾಗಿ ದಾನಮಾಡುವುದಕ್ಕಿಂತ ಹಿಂದೆ ಕೊಟ್ಟಿದ್ದನ್ನು ನಡೆಸಿಕೊಂಡು ಬರುವುದು ಶ್ರೇಯಸ್ಸು."— ದಾನಾಚ್ಛ್ರೇಯೋನುಪಾಲನಂ— ಎಂಬುದೊಂದು ಪ್ರಾಚೀನವಾದ ಹೇಳಿಕೆಯಿದೆ. (ಶಾಸನಗಳನ್ನು ಹಾಕಿಕೊಟ್ಟವರು ಇದನ್ನು ಬೇಜಾರಿಲ್ಲದೆ ಹೇಳಿದ್ದಾರೆ.) ನಮ್ಮ ದೇಶದಲ್ಲಿ,

ಭರತಖಂಡದಲ್ಲಿ, ಬಹು ಪ್ರಸಿದ್ಧಗಳಾದ ವಾಸ್ತುರತ್ನಗಳನ್ನು ಕಾಪಾಡಿಕೊಂಡು ಸುಸ್ಥಿತಿಯಲ್ಲಿ ಇಡಲು ಏರ್ಪಾಡು ಆಗಿದೆ. ಇವುಗಳ ಸೌಂದರ್ಯವನ್ನು ವರ್ಣಿಸಿ ಶಾಸನದ ಇಲಾಖೆಯವರು ಇಂಗ್ಲೀಷಿನಲ್ಲಿ ಪುಸ್ತಕಗಳನ್ನು ಪ್ರಕಟಿಸಿದ್ದಾರೆ—ಕನ್ನಡಿಗರು ಕೇಳುವ ಹಾಗಾದರೆ ಕನ್ನಡದಲ್ಲಿಯೂ ಬರೆಯಿಸಬಹುದು. ಮಕ್ಕಳು ಅಳದಿದ್ದರೆ ತಾಯಿಯೂ ಹಾಲು ಕೊಡಳು. ಪ್ರಬುದ್ಧ ಕರ್ಣಾಟಕವು ಈ ಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ಹೋಗಲಾಡಿಸಬೇಕೆಂದು "ಮೈಸೂರು ದೇಶದ ವಾಸ್ತುಶಿಲ್ಪ" ವನ್ನು ಪ್ರಕಟಿಸುತ್ತಾ ಅದರಲ್ಲಿ ಒಂದು ಭಾಗವನ್ನು ಮುಗಿಸಿರುವುದು ಕನ್ನಡಿಗರಿಗೆ ವೇದ್ಯವಾಗಿದೆ. ಚಿತ್ರಕಲೆಯಲ್ಲಿ, ರಾಜಾರವಿವರ್ಮರು ಕೊನೆಕೊನೆಗೆ ಬರೆದ ಅನೇಕ ರಾಮಾಯಣ ಭಾರತ ದೃಶ್ಯಗಳು ಶ್ರೀಮನ್ಮಹಾರಾಜರವರ ಅಪೇಕ್ಷೆಯಂತೆ ಕೈಕೊಂಡವುಗಳೆಂಬುದು ಮೈಸೂರಿನವರಲ್ಲದ ಅನೇಕರಿಗೆ ತಿಳಿಯದ ವಿಷಯ. ಈಗ ಚಿತ್ರಕಲಾಪ್ರಪಂಚದಲ್ಲಿ ಜಗತ್ಪ್ರಸಿದ್ಧರೂ "ಅಭಿನವಕರ್ಣಾಟಕ ಕಲಾಸಂಪ್ರದಾಯ" ದ ಸ್ಥಾಪಕರೂ ಆಗಿರುವ ಮ|| ವೆಂಕಟಪ್ಪನವರು ಮಹಾಪ್ರಭುಗಳವರ ಆಶ್ರಯದಲ್ಲಿಯೇ ಶಿಕ್ಷಣವನ್ನು ಪಡೆದವರು. ಕನ್ನಡಿಗರಿಗೆ ಪ್ರಬುದ್ಧಕರ್ಣಾಟಕದ ಮೂಲಕ ಅವರ ಪರಿಚಯವನ್ನೂ ಈಗಾಗಲೇ ಸ್ವಲ್ಪಮಟ್ಟಿಗೆ ಮಾಡಿಕೊಟ್ಟಿದ್ದೇವೆ. ಶ್ರೀ ಜಗನ್ಮೋಹನ ಚಿತ್ರಶಾಲೆಯ ಸ್ಥಾಪನೆಯೂ ಶ್ರೀಮನ್ಮಹಾರಾಜರವರ ಕಲಾಸಂಪ್ರೀತಿಯಿಂದಲೇ ಉಂಟಾದದ್ದು.

ಮಹಾಸ್ವಾಮಿಗಳವರ ರಸಿಕತೆಯು ಇವೆಲ್ಲಕ್ಕಿಂತಲೂ ಬಹು ಮನೋಹರವಾದ ರೂಪನ್ನು ತಳೆದಿರುವುದು, ಈಗಾಗಲೇ ಭರತಖಂಡದಲ್ಲೆಲ್ಲಾ ಆನಂದವನ್ನು ಬೀರಿ ಶಾಶ್ವತವಾದ ಕೀರ್ತಿಯನ್ನು ತಂದಿರುವ ಗಾನರಚನೆಯಲ್ಲಿ. ನಮ್ಮ ಸಂಗೀತವು ಮಧುರವಾದದ್ದೇನೋ ನಿಜ; ಅದನ್ನು ಪಿಟೀಲು ತಂಬೂರಿ ಮೃದಂಗಗಳೊಡನೆ ಹಾಡುವುದೂ ರೂಢಿ; ಆದರೆ ನಾನಾ ವಾದ್ಯಗಳನ್ನು ಪಾಶ್ಚಾತ್ಯರೀತಿಯಲ್ಲಿ ಒಂದೇ ಹದಕ್ಕೆ ತಂದು ನಿಲ್ಲಿಸಿ ಮೇಳ ಪದ್ಧತಿಯಿಂದ ಅಮೃತವರ್ಷವನ್ನು ಕರೆಯುವಂತೆ ಕಲ್ಪಿಸಿದ್ದು ಒಂದು ಅಪೂರ್ವ ವರಪ್ರದಾನ. ಈ ಗಾಯನ ಮೇಳ

ದವರು ಈಗ ಕೆಲವು ವರ್ಷಗಳ ಕೆಳಗೆ ಮೊದಲುಸಾರಿ ಹೊರಕ್ಕೆ ಬಂದು, ಸಾಯಂಕಾಲದ ತಂಪಿನಲ್ಲಿ, ಸುಂದರವಾದ “ ನಿಷಾತ್ ಬಾಗ್ ” ನಲ್ಲಿ, ವಿದ್ಯುದ್ದೀಪಗಳ ಬೆಳಕಿನಲ್ಲಿ, ಅಮೃತವನ್ನು ಸೂಸುವುದಕ್ಕೆ ಆರಂಭಿಸಲು, ಅದು ವಾಯುಮಂಡಲದಲ್ಲಿ ನರ್ತಿಸುತ್ತ ನಲಿಯುತ್ತ ಬಂದು, ಅಲ್ಲಿ ಏನೇನೋ ನೋಡುತ್ತ ಏನೇನೋ ಯೋಚಿಸುತ್ತ ಹೋಗುತ್ತಿದ್ದ ಜನರನ್ನು ಹೇಗೆ ತಟ್ಟನೆ ಗಂಧರ್ವ ಲೋಕಕ್ಕೆ ತೆಗೆದುಕೊಂಡು ಹೋಗಿ ಮೋಹದಲ್ಲಿ ಮುಳುಗಿಸಿಬಿಟ್ಟಿತೆಂಬುದು ಅನೇಕರ ಅನುಭವದಲ್ಲಿದೆ. ಒಳ್ಳೆಯ ಕಾರ್ಯವೂ ಒಳ್ಳೆಯ ಗಾನವೂ ಮರ್ತ್ಯಲೋಕದವುಗಳಲ್ಲ; ಆದ್ದರಿಂದಲೇ ಅವುಗಳನ್ನು ಎಷ್ಟು ಅನುಭವಿಸಿದರೂ ತೃಪ್ತಿಯಾಗುವುದಿಲ್ಲ; ಇದನ್ನು ಒಪ್ಪುವುದಾದರೆ ಈ ಹೊಸ ಸಂಗೀತ ಮೇಳನವು ಅಮರಲೋಕದ ಗಾನವೆಂದು ಹೇಳಬಹುದು. ಮಿಠಾಯಿ ಅಂಗಡಿಯಲ್ಲಿ ಸದಾ ಕುಳಿತಿರುವವರಿಗೆ ಸಿಹಿ ಬೇಡವಾಗಬಹುದು. ನೀರಿನಲ್ಲಿಯೇ ಓಡಾಡುತ್ತಿರುವ ಮೀನಿಗೆ ನೀರು ಬೇಕಾಗದಿರಬಹುದು. ಆದರೆ ಈ ಗಾನವನ್ನು ಕೇಳುತ್ತಿರುವವರಿಗೆ ತೃಪ್ತಿಯಾಗದು. ಇದರ ಪ್ರಾಬಲ್ಯದಿಂದ ಪ್ರತಿಯೊಂದು ಬ್ಯಾಂಡು ವಾದ್ಯವೂ ಮಾರ್ಪಟ್ಟು, ಬಾರಿಸುವವರಿಗೂ ಕೇಳುವವರಿಗೂ ಮತ್ತಾವುದೂ ರುಚಿಸದಂತಾಗಿದೆ. ಕೊನೆಗೆ ಸಿನಿಮಾ ಕಂಪೆನಿಗಳೂ ಈ ಜಾತಿಯ ಬ್ಯಾಂಡುಗಳನ್ನೇ ಇಟ್ಟುಕೊಂಡಿದ್ದಾರೆ—ಇದನ್ನು ನೋಡುವುದಕ್ಕೆ ಹೋದರೆ, ಕಾಸಿಗೆ ಕಸ ಕೊಂಡುಕೊಂಡು ಕೊಸರಿಗೆ ಚಿನ್ನ ಸಂಪಾದಿಸಿದಂತೆ ಭಾವನೆಯಾಗುತ್ತದೆ.

ಇದನ್ನೆಲ್ಲಾ ಯೋಚಿಸಿ ನೋಡಿದರೆ, ಮೈಸೂರಿನಲ್ಲಿ ‘ ಸಂಗೀತ ಸಾಹಿತ್ಯ ಕಲಾವಿಹೀನ ’ ರೇ ಹುಡುಕಿದರೂ ಸಿಕ್ಕದಂತಾಗಿ ಬಿಡುತ್ತದೆಯೋ ಎನ್ನಿಸುತ್ತದೆ. ‘ ರಾಜಾ ರಾಷ್ಟ್ರಸ್ಯ ಕಾರಣಂ ’ ‘ ಯಥಾ ರಾಜಾ ತಥಾ ಪ್ರಜಾಃ ’ ಎಂಬ ಹೇಳಿಕೆಗಳ ತತ್ತ್ವವು ಇಲ್ಲಿ ಅನುಭವಕ್ಕೆ ಬಂದಿದೆ. ಶ್ರೀಮನ್ಮಹಾರಾಜರವರ ಧರ್ಮಪರಾಯಣತೆ, ಸದಾಚಾರ, ಪರಿಶುದ್ಧವಾದ ನಡತೆ, ಪಾಪಭೀತಿ, ಪವಿತ್ರವಾದ ಜೀವನಕ್ರಮ, ವಾತ್ಸಲ್ಯ ಇವು ‘ ನಾವಿಷ್ಣುಃ ಪೃಥಿವೀಪತಿಃ ’ ಎಂದು ಬಂಗಾರದ ಅಕ್ಷರದಲ್ಲಿ ಕೆತ್ತಿ ಬರೆದಿವೆ. ಇಂಥ ಪ್ರಭುಗಳನ್ನು ಪಡೆದಿರುವುದು ಪ್ರಜೆಗಳ ಒಂದು

ಅಪೂರ್ವ ಪುಣ್ಯ. ಈ ಪುಣ್ಯವನ್ನು ಪ್ರಜೆಗಳಾದ ನಮಗೆ ಭಗವಂತನು ಶಾಶ್ವತವಾಗಿ ಕರುಣಿಸಲಿ! ರಜತ ಮಹೋತ್ಸವವಾದಂತೆ ಸ್ವರ್ಣ ಮಹೋತ್ಸವವೂ, ರತ್ನಮಹೋತ್ಸವವೂ ನೆರವೇರುವಂತೆ ಅನುಗ್ರಹಿಸಲಿ! ಆ ಉತ್ಸವಗಳಲ್ಲಿ ಇನ್ನೂ ಹೆಚ್ಚು ಉತ್ಸಾಹದಿಂದ ಭರತಖಂಡವೇ ಭಾಗಿಯಾಗುವಂತೆ ದಯಪಾಲಿಸಲಿ!!

೩೧-೧೯೩೭

---

## ಸಮುದ್ರದ ನೆಂಟು, ಉಪ್ಪಿಗೆ ಬಡತನ

ಈಗ ಕೆಲವು ಕಾಲದಿಂದೀಚೆಗೆ ಮಂಗಳೂರು ಪ್ರಾಂತದಿಂದ ಕನ್ನಡಕ್ಕೆ ಜೀವಕಳೆಯು ಹೆಚ್ಚು ಹೆಚ್ಚಾಗಿ ಬರುತ್ತಿದೆ. ಕನ್ನಡ ಪತ್ರಿಕೆಗಳಲ್ಲಿ ಮೊದಮೊದಲು ಚೆನ್ನಾಗಿ ಬಾಳಿದ "ಶ್ರೀ ಕೃಷ್ಣಸೂಕ್ತಿ"ಯು ನಿಂತೇ ಹೋಗಿದ್ದರೂ ಅದರಂತೆಯೇ ಹೆಸರುಗೊಂಡು ನಿಂತು ಹೋಗಿದ್ದ "ಸುವಾಸಿನಿ" ಯು ಪುನರುಜ್ಜೀವಿತವಾಗಿದೆ. ಸುಮಾರು ಆರೇಳು ತಿಂಗಳಿಂದೀಚೆಗೆ 'ಉದಯಭಾರತ' 'ಕರ್ಣಾಟಕ ಕೇಸರಿ' ಮುಂತಾದ ಮಾಸಪತ್ರಿಕೆಗಳು ಹೊಸದಾಗಿ ಹೊರಟಿವೆ. ಈ ವರ್ಷ ಮಂಗಳೂರಿನಲ್ಲಿ ನಡೆದ ಸಾಹಿತ್ಯಸಮ್ಮೇಳನದ ಜ್ಞಾಪಕಾರ್ಥವಾಗಿ ಆ ಉತ್ಸವದಲ್ಲಿಯೇ "ಪಂಚಕಜ್ಜಾಯ" ದ ಸಂಚಿಕೆ ಬೇರೆ ಆಗಿದೆ. ಇದೆಲ್ಲವನ್ನೂ ನೋಡಿದಾಗ, ಮನಸ್ಸುಮಾಡಿದರೆ ಮ|| ಪಂಜೆ ಮಂಗೇಶರಾಯರಂಥವರ ಗುರುತ್ವದಲ್ಲಿ, ಮ|| ಗಳಾದ ಮಂ. ಅನಂತರಾವ್ ಮತ್ತು ವಿಟ್ಠಲರಾವ್ ಇಂಥವರ ನೇತೃತ್ವದಲ್ಲಿ ಮಂಗಳೂರಿನವರೊಬ್ಬರೇ ಎಷ್ಟು ಕೆಲಸ ಮಾಡಬಲ್ಲರೆಂದು ಗೊತ್ತಾಗುತ್ತದೆ . . . . . ಹೀಗೆಂದರೆ, ಇತರ ಪ್ರಾಂತದವರು ಅಲಸರಾಗಿದ್ದಾರೆಂದು ಅರ್ಥವಲ್ಲ. ಉತ್ತರಕರ್ಣಾಟಕರು ಕರ್ಮವೀರರೆಂದು ಯಾವಾಗಲೂ ಹೆಸರು ಪಡೆದಿದ್ದಾರೆ. ಅಲ್ಲಿ "ಜಯಕರ್ನಾಟಕ" ದ ಜಯಘೋಷದೊಡನೆ ನವೀನ ಗ್ರಂಥಗಳ ಉದ್ಘೋಷವೂ ಹೊಸ ಹೊಸ ಪತ್ರಿಕೆಗಳ ಪ್ರಘೋಷವೂ ಕೇಳಿಬರುತ್ತಿದೆ. ಇವುಗಳಲ್ಲಿ ರಾವ್‌ಸಾಹೇಬ್ ಪಿ. ಜಿ. ಹಳಕಟ್ಟಿಯವರ "ನವಕರ್ನಾಟಕ"ವು ಆಗಲೇ ಎಲ್ಲರ ದೃಷ್ಟಿಗೂ ಗೋಚರ

ವಾಗಿದೆಯೆಂದು ನಂಬಿದ್ದೇವೆ. ಇವಕ್ಕೆ ಕೆಲಸಮಾಡುತ್ತಿರುವವರೆಲ್ಲರೂ ಉತ್ಸಾಹಪೂರ್ಣರಾದ ಸಾಹಿತ್ಯಾಭಿಮಾನಿಗಳು. ಆದರೂ ಕನ್ನಡ ಸಾಹಿತ್ಯ ಪತ್ರಿಕೆಗಳಿಗೆ "ಭವತಿ ಭಿಕ್ಷಾಂ ದೇಹಿ" ಎಂದು ಜೋಳಿಗೆ ಹಾಕಿಕೊಂಡು ಹೊರಟು, ಹೊತ್ತಿಲ್ಲದೆ ಕಾಲವಿಲ್ಲದೆ ದೀಪಾವಳಿಯನ್ನು ಸಂಕ್ರಾಂತಿಯಲ್ಲಿ ನಡಸಿ, ಊಟದ ಶಾಸ್ತ್ರ ಮಾಡುವುದು ಬೇರೆ ತಪ್ಪಿಲ್ಲ. ಎಲ್ಲ ದೋಸೆಗೂ ತೂತಿರುವ ಹಾಗೆ ಎಲ್ಲ ಕನ್ನಡ ಪತ್ರಿಕೆಗೂ ಕಾಲು ಕುಂಟು. ನಾಲ್ಕಾರು ಜನರು ಹೊಟ್ಟೆಗೆ ಸಾಲದೆ ನಶಿಸಿ ಸಾಯುವುದು ಒಳ್ಳೆಯದೋ ಒಬ್ಬಿಬ್ಬರು ಹೊಟ್ಟೆತುಂಬ ಊಟಮಾಡಿ ಬೆಳೆದು ಬದುಕುವುದು ಒಳ್ಳೆಯದೋ? ಹೇಗೆ ಹೇಳುವುದು! ಹಾಗೂ ಉಂಟು ಹೀಗೂ ಉಂಟು. ಊಟ ಕಡಮೆಯಾದರೆ ಅಜೀರ್ಣದ ಭಯವಿಲ್ಲ; ಅಲ್ಲದೆ ಬಡ ಸಂಸಾರದಲ್ಲಿ ಎಲ್ಲರೂ ಸಾಕುಸಾಲದ ಹಾಗೆ ಊಟಮಾಡುತ್ತಿರುವುದೂ ಉಂಟು; ಮಿಕ್ಕವರೆಲ್ಲರೂ ಪ್ರಾಣ ಒಪ್ಪಿಸಿ ಶಕುನಿಯನ್ನು ಬದುಕಿಸಿಕೊಂಡು ಮಹಾಭಾರತವನ್ನು ಮಾಡಿ ಮುಗಿಸಿದ್ದೂ ಉಂಟು! ಆದರೂ ಒಂದೊಂದೇ ಕಾಲಿನ ನಾಲ್ಕು ಮಂಚಗಳಿಗಿಂತಲೂ ನಾಲ್ಕು ಕಾಲಿನ ಒಂದು ಮಂಚವೇ ಉತ್ತಮವೆನ್ನಿಸುತ್ತಿದೆ.

೩೨–೧೯೨೭

---

## ಮಿ|| ಲೂಯಿ ರೈಸ್, ಸಿ. ಐ. ಇ.

ಮಿ|| ಲೂಯಿ ರೈಸ್‌ರವರು ಪಾಶ್ಚಾತ್ಯರಾದರೂ ನಮ್ಮವರು— ನಮ್ಮದೇಶದಲ್ಲಿ ಹುಟ್ಟಿದವರು. (೧೭–೭–೧೮೩೭.)ಇಂಗ್ಲೆಂಡಿನಲ್ಲಿ ಶಿಕ್ಷಣ ಪಡೆದು ನಾಲ್ಕಾರುವರ್ಷ ಕೆಲಸದಲ್ಲಿದ್ದರೂ ೧೮೬೦ ರಲ್ಲಿ ನಮ್ಮದೇಶಕ್ಕೆ ಬಂದು ಇಲ್ಲಿ ಸುಮಾರು ಅರ್ಧಶತಮಾನದವರೆಗೆ ದೇಹವನ್ನು ತೆಯ್ದವರು. ಅವರು ನಮ್ಮ ಸಂಸ್ಥಾನಕ್ಕೆ ಬಂದಾಗ ಇಲ್ಲಿ ಆಗ ಇನ್ನೂ ಕಾಲೇಜುಗಳಿರಲಿಲ್ಲ. ಬೆಂಗಳೂರಿನಲ್ಲಿ, ಇನ್ನೂ ಹುಟ್ಟಿ ಎರಡು ವರ್ಷವಾಗಿದ್ದ ಸೆಂಟ್ರಲ್ 'ಹೈಸ್ಕೂಲು' ಮಾತ್ರ ಇತ್ತು. ಅದಕ್ಕೆ ಅವರು ಹೆಡ್‌ಮಾಸ್ಟರಾಗಿ ಬಂದರು. ಆಮೇಲೆ ಕೆಲವುಕಾಲ ಮೈಸೂರು ಮತ್ತು ಕೊಡಗು ಸೀಮೆಗಳ ಇನ್ಸ್‌ಪೆಕ್ಟರಾಗಿಯೂ, ವಿದ್ಯಾಭ್ಯಾಸದ ಇಲಾಖೆಯ

ಮುಖ್ಯಾಧಿಕಾರಿಗಳಾಗಿಯೂ, ಹಂಟರ್ ವಿದ್ಯಾಸಮಿತಿಯ (೧೮೮೨) ಕಾರ್ಯದರ್ಶಿಗಳಾಗಿಯೂ, ಮೈಸೂರು ಸರ್ಕಾರದ ವಿದ್ಯಾಶಾಖೆಯ ಪ್ರಥಮ ಕಾರ್ಯದರ್ಶಿಗಳಾಗಿಯೂ ಕೆಲಸಮಾಡಿ ಅನಂತರ ೧೮೮೫ರಲ್ಲಿ ಹೊಸದಾಗಿ ಏರ್ಪಾಟಾದ ಶಾಸನ ಸಂಶೋಧನ ಇಲಾಖೆಯ ಪ್ರಧಾನಾಧಿಕಾರಿ ಕಾರ್ಯವನ್ನು ಕೈಕೊಂಡು ತಮ್ಮ ಎಪ್ಪತ್ತನೆಯ ವಯಸ್ಸಿನಲ್ಲಿ (೧೯೦೬) ನಿವೃತ್ತರಾಗುವವರೆಗೂ ಈ ಕೆಲಸದಲ್ಲಿಯೇ ಇದ್ದರು.

ಶಾಸನದ ಇಲಾಖೆಗೆ ಬರುವುದಕ್ಕೆ ಮುಂಚೆಯೇ ಶಾಸನ ಸಾಹಿತ್ಯಾದಿ ಸಂಶೋಧನ ಕಾರ್ಯಗಳಲ್ಲಿ ದಕ್ಷರೆಂದು ಅವರು ಹೆಸರು ಪಡೆದಿದ್ದರು. ದೇಶಭಾಷೆಯಲ್ಲಿ ಪಾಂಡಿತ್ಯವನ್ನು ಸಂಪಾದಿಸಿ ಸಂಸ್ಥಾನದಲ್ಲಿ ಪ್ರಯಾಣಮಾಡುತ್ತಿದ್ದಾಗಲೆಲ್ಲಾ ಆಯಾ ಸ್ಥಳದ ಪುರಾಣ ಚರಿತ್ರೆ ವಿದ್ಯಮಾನಗಳನ್ನು ಪರಿಚಯ ಮಾಡಿಕೊಂಡಿದ್ದರು. ಇದರಿಂದ ಅವರ ಸುಪ್ರಸಿದ್ಧವಾದ ಮೈಸೂರು ಗೆಜೆಟಿಯರ್‌ನ ಎರಡು ಸಂಪುಟಗಳನ್ನು ಬರೆಯುವುದಕ್ಕೆ ಅವರಿಗೆ ಒಳ್ಳೆಯ ಸಾಧನ ಸಂಪತ್ತಿ ದೊರಕಿತು. ಇವುಗಳಲ್ಲಿ ಅವರು ತೋರಿಸಿರುವ ಸಾಮಗ್ರಿಸಂಚಯ, ವಿಷಯ ಪ್ರತಿಪಾದನ, ರೀತಿನೈಪುಣ್ಯಾದಿಗಳು ಅತ್ಯಾಶ್ಚರ್ಯಾವಹವಾಗಿವೆ. ಈ ಎರಡು ಸಂಪುಟಗಳ ಗಾತ್ರವನ್ನು ನೋಡಿದರೇ ನಮ್ಮಂಥವರು ಎದೆಗುಂದುವ ಹಾಗಿದೆ. ಅದರಲ್ಲಿಯೂ ಇಂಥ ಗ್ರಂಥವನ್ನು ಹೊಸದಾಗಿ ಬರೆಯಬೇಕಾದರೆ ಅಪೂರ್ವಸಾಮರ್ಥ್ಯ ಬೇಕು. ಅಂಥ ಮೇಧಾಶಕ್ತಿ, ಲೇಖನಶಕ್ತಿ, ಕಾರ್ಯಾಸಕ್ತಿಗಳು ಈಚೆಗೆ ಬಂದ ಇಂಗ್ಲಿಷ್ ಅಧಿಕಾರಿಗಳಲ್ಲಿಯೂ ಅಪರೂಪ. ಅಂಥವರಿಗೆ ಸರ್ಕಾರದವರು ಕೊಟ್ಟ ಸಂಬಳವು ಅವರು ಮಾಡಿದ ಕೆಲಸಕ್ಕೆ ಹೋಲಿಸಿದರೆ ಅತ್ಯಲ್ಪ; ಇಂಥ ಕೆಲವರ ಅಮೋಘವಾದ ಕಾರ್ಯಕಲಾಪವನ್ನು ನೋಡಿ ಪಾಶ್ಚಾತ್ಯರಲ್ಲಿ ಗೌರವವೂ ಅವರಿಗೆ ನಮ್ಮ ದೇಶೀಯರಿಗಿಂತ ಹೆಚ್ಚು ಸಂಬಳವನ್ನು ಕೊಡುವ ಸಂಪ್ರದಾಯವೂ ಬಂದಿವೆ. ಇವರೇ ೧೮೮೧ರಲ್ಲಿ ಮೈಸೂರು ದೇಶದ ಮೊದಲನೆಯ ಖಾನೇಷುಮಾರಿಯ ಲೆಕ್ಕವನ್ನೂ ವರದಿಯನ್ನೂ ಮಾಡಿದವರು. ಹೀಗೆ ಅವರು ಮೈಸೂರಿನವರಿಗೆ ಅನೇಕ ವಿಷಯಗಳಲ್ಲಿ ಮಾರ್ಗದರ್ಶಿಗಳೂ ಅಗ್ರಯಾಯಿಗಳೂ ಆಗಿದ್ದರು.

ಅವರ ಕಾಲದಲ್ಲಿ ನಮ್ಮ ಸಂಸ್ಥಾನದ ಸಾವಿರಾರು ಶಾಸನಗಳು ದೃಷ್ಟಿಗೂ ಅಚ್ಚಿಗೂ ಬಂದು ಹನ್ನೆರಡು ಸಂಪುಟಗಳಲ್ಲಿ ಎಪಿಗ್ರಾಫಿಯಾ ಕರ್ಣಾಟಿಕಾ ಎಂಬ ಹೆಸರಿನಿಂದ ಪ್ರಕಟವಾದುವು. ಮೊಳಕಾಲ್ಮುರು ತಾಲ್ಲೂಕಿನಲ್ಲಿದ್ದ ಅಶೋಕನ ಶಾಸನಗಳನ್ನು ಕಂಡುಹಿಡಿದು ಅಶೋಕನ ಚಕ್ರಾಧಿಪತ್ಯವು ಮೈಸೂರು ಸೀಮೆಯವರೆಗೂ ಹಬ್ಬಿತ್ತೆಂದು ತಿಳಿಯಪಡಿಸಿದವರು ಅವರೇ. ಪಂಪಭಾರತ, ಪಂಪರಾಮಾಯಣ, ಶಬ್ದಾನುಶಾಸನ, ಮುಂತಾದ ಕನ್ನಡ ಗ್ರಂಥಗಳನ್ನು ಶೋಧನೆಮಾಡಿಸಿ ಪ್ರಕಟಿಸಿ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ತೋರಿಸಿ, ಶಬ್ದಾನುಶಾಸನದ ಪೀಠಿಕೆಯಲ್ಲಿ ಕನ್ನಡ ಸಾಹಿತ್ಯದ ಚರಿತ್ರೆಗೆ ಪ್ರಥಮ ಸೋಪಾನವನ್ನು ಕಟ್ಟಿದವರು ಅವರೇ. ಕನ್ನಡನಾಡಿನಲ್ಲಿ ಹುಟ್ಟಿ ಬೆಳೆದು ಅದರ ಉಪ್ಪನ್ನು ಮಣಗಟ್ಟಲೆ ತಿಂದವನೂ ಕನ್ನಡದೇಶಕ್ಕೆ ಇಷ್ಟು ಉಪಕಾರವನ್ನು ಮಾಡಿರುವುದು ಅಪರೂಪವೆಂದು ಹೇಳಿದರೆ ಅತ್ಯುಕ್ತಿಯಾಗಲಾರದು.

ಅವರು ಸುಮಾರು ಎಪ್ಪತ್ತನೆಯ ವಯಸ್ಸಿನಲ್ಲಿ ಕೆಲಸವನ್ನು ಬಿಟ್ಟು ಸೀಮೆಗೆ ಹೋಗಿ ಹ್ಯಾರೋ ಪಟ್ಟಣದಲ್ಲಿ ವಿಶ್ರಾಂತಿ ಪಡೆದಿರುತ್ತಿದ್ದರು. ಅಲ್ಲಿಯೂ ಕನ್ನಡದ ವಿಚಾರ ಬಂದರೆ ರಾಯಲ್ ಏಷಿಯಾಟಿಕ್ ಸೊಸೈಟಿಯ ಪತ್ರಿಕೆ ಇಂಡಿಯನ್ ಆಂಟಿಕ್ವೇರಿ ಮುಂತಾದ ಪತ್ರಿಕೆಗಳಿಗೆ ಲೇಖನಗಳನ್ನು ಬರೆದು ಕಳುಹಿಸುತ್ತಿದ್ದರು. ಈಗ ಆರೇಳು ವರ್ಷಗಳ ಕೆಳಗೆ ಅವರಿಗೆ ಕೈಕಾಲು ಹಿಡಿದು ನಡೆಯದಂತಾಯಿತು. ಮ|| ಎಸ್. ಜಿ. ಶಾಸ್ತ್ರಿಗಳು ಪ್ರದರ್ಶನ ಸಂಬಂಧವಾಗಿ ಇಂಗ್ಲೆಂಡಿಗೆ ದಯಮಾಡಿಸಿದ್ದಾಗ ಆ ಸ್ಥಿತಿಯಲ್ಲಿಯೇ ರೈಸ್ ಸಾಹೇಬರು ಅವರನ್ನು ನೋಡಲು ಬಂದರಂತೆ. ಮ|| ಶಾಸ್ತ್ರಿಗಳು ತಕ್ಕ ಗೌರವದಿಂದ ಅವರನ್ನು ಬರಮಾಡಿಕೊಂಡು ಮಿಕ್ಕವರನ್ನೆಲ್ಲಾ ಕಳುಹಿಸಿಕೊಟ್ಟು ಅವರೊಡನೆ ಇಂಗ್ಲೀಷಿನಲ್ಲಿ ಮಾತನಾಡಲಾರಂಭಿಸಿದರಂತೆ. ಆಗ ಸಾಹೇಬರು "ಇಂಗ್ಲೀಷಿರಲಿ, ದಯವಿಟ್ಟು ಕನ್ನಡದಲ್ಲಿಯೇ ಮಾತನಾಡಿ; ಅದನ್ನು ಕೇಳಬೇಕೆಂದು ಆಸೆಯಾಗಿದೆ" ಎಂದರಂತೆ. ಆಗ ಮ|| ಶಾಸ್ತ್ರಿಗಳು ಕನ್ನಡದಲ್ಲಿಯೇ ಮಾತನಾಡಲು, ಎರಡು ಕಿವಿಗಳಿಂದಲೂ ಬಹು ಆಸಕ್ತಿಯಿಂದ ಆಲಿಸಿ ಸಂತೋಷಪಟ್ಟು "ಆಹಾ

ಕನ್ನಡ! ಎಷ್ಟು ಮಧುರ! ಎಷ್ಟು ಮಧುರ!!" ಎಂದು ಆನಂದಪಟ್ಟ ರಂತೆ. ಕನ್ನಡದ ಮೇಲೆ ಕನ್ನಡಿಗರಿಗೆ ಈ ಅಭಿಮಾನವಿದೆಯೇ?

ಅವರು ೧೯೨೭ನೆಯ ಜುಲೈ ತಿಂಗಳಲ್ಲಿ ಸುಮಾರು ತೊಂಬತ್ತು ವರ್ಷ ವಯಸ್ಸಾಗಿದ್ದಾಗ ಸ್ವಕ್ಷೇತ್ರ ಸ್ವಗೃಹದಲ್ಲಿ ಬಂಧುಮಿತ್ರರ ಮಧ್ಯ ದಲ್ಲಿ ಸ್ವರ್ಗಸ್ಥರಾದರು. ಅವರು ಮೈಸೂರುದೇಶದಲ್ಲಿ ಮಾಡಿಟ್ಟು ಹೋಗಿ ರುವ ಕೆಲಸವು ಅವರನ್ನು ಸರ್ವದಾ ನಮ್ಮ ಕಣ್ಣು ಮುಂದೆ ಮೇಲ್ಪಂಕ್ತಿ ಯಾಗಿರುವಂತೆ ಇಟ್ಟು ಕನ್ನಡಿಗರೆಲ್ಲರೂ ಚಿರಋಣಿಗಳಾಗಿರುವಂತೆ ಮಾಡಿದೆ.

೩೪–೧೯೨೮

---

## ಕಥೆ ಬರೆಯುವವರಿಗೆ ಒಂದು ಮಾತು

....ಈ ಸಂದರ್ಭದಲ್ಲಿ ಕಥೆ ಬರೆಯುವವರಿಗೆ ಒಂದು ಮಾತು ಹೇಳಬೇಕೆನ್ನಿಸುತ್ತದೆ. ಇದುವರೆಗೆ ನಾಲ್ಕಾರು ವರ್ಷಗಳಿಂದ ಸ್ಪರ್ಧೆಗೆ ಬಂದ ನೂರಾರು ಕಥೆಗಳಲ್ಲಿ ಹತ್ತಕ್ಕೆ ಎಂಟರೊಳಗೆ ಇರತಕ್ಕ ವಸ್ತುವು, ಮದುವೆ–ಪಾಶ್ಚಾತ್ಯರೀತಿಯಲ್ಲಿ 'ಕೋರ್ಟ್‌ಷೀಪ'ನ್ನು ಬೆಳೆಸಿ ಪ್ರಣಯ ವನ್ನೂ ಭ್ರಮೆಯನ್ನೂ ಸೂಸಿ ಅದ್ಭುತ ಸುಖದಲ್ಲಿಯೋ ಹುಚ್ಚಿನಲ್ಲಿಯೋ ಮರಣದಲ್ಲಿಯೋ ಮುಗಿಯುವ ಮದುವೆ,—ಮತ್ತು ಇದಕ್ಕೆ ಸಂಬಂಧ ಪಟ್ಟಹಾಗೆಯೋ ಸ್ವತಂತ್ರವಾಗಿಯೋ ಪರೀಕ್ಷೆಗಳಲ್ಲಿ ಪ್ಯಾಸು ಮಾಡು ವುದು. ಒಂದು ವಿಧದಲ್ಲಿ ನೋಡಿದರೆ ಇದು ನೈಜವಾಗಿ ತೋರುವುದು; ಏಕೆಂದರೆ ಪ್ರತಿಯೊಬ್ಬರೂ ಅವರವರ ಅನುಭವಕ್ಕೆ ಬಂದ ಸಂಗತಿ ಗಳನ್ನು ತಾನೇ ಬರೆದಾರು, ಮತ್ತು ಬರೆಯಬೇಕು? ವಿದ್ಯಾರ್ಥಿಗಳಿಗೆ ಆದರ್ಶಪ್ರಪಂಚದಲ್ಲಿಯೋ ವ್ಯಾವಹಾರಿಕ ಪ್ರಪಂಚದಲ್ಲಿಯೋ ಅನು ಭವಕ್ಕೆ ಬರತಕ್ಕದ್ದು—ವಿಶೇಷವಾಗಿ ಅನುಭವಕ್ಕೆ ಬರತಕ್ಕದ್ದು—ಈ ಎರಡು ವಿಷಯಗಳು. ಆದರೆ ಈ ಕಥೆಗಳನ್ನು ಬರೆಯುವವರು ಕಾಲೇ ಜಿನ ವಿದ್ಯಾರ್ಥಿಗಳು; ಇವೊತ್ತು ವಿದ್ಯಾರ್ಥಿಗಳಾಗಿದ್ದು ನಾಳೆ ಕುಟುಂಬಿ ಗಳೂ ಪ್ರಜೆಗಳೂ ಅಧಿಕಾರಿಗಳೂ ಆಗತಕ್ಕವರು. ಇಂಥವರಿಗೆ ಮತ್ತಾವ ಅನುಭವವೂ ಇಲ್ಲವೇ? ಕಣ್ಣೀರು ಬರುವ, ಹೃದಯ

ಉಬ್ಬುವ, ಆವೇಶ ಹುಟ್ಟಿಸುವ ಮತ್ತಾವ ಸಂಗತಿಗಳೂ ಕಣ್ಣಿಗೇ ಬೀಳುವುದಿಲ್ಲವೇ? ಯಾವುದನ್ನೂ ಯೋಚಿಸಲಾದರೂ ಬೇಡವೇ? ಮದುವೆಯೆಂದರೆ ವಿಶೃಂಖಲವಾದ ಪ್ರತಿಭಾಪ್ರಪಂಚದಲ್ಲಿ ಹೊರತು, ಗೋಣಗುತ್ತ ತಿಂದು ತೇಗುವ ಅತಿಥಿಗಳು ಹೊರತು, ಅದು ಹೆಣ್ಣು ಗಂಡು ಮೊದಲಾಗಿ ಎಲ್ಲರೂ ಈಗ ನಾನಾ ದೃಷ್ಟಿಯಿಂದ ದೀರ್ಘವಾಗಿ ಚಿಂತಿಸತಕ್ಕ ಸಂಗತಿಯಾಗಿದೆ. ಪ್ಯಾಸುಮಾಡುವುದರ ಬೆರಗೂ ಸಾಯಂಕಾಲದ ಬೆಳಕಿನಂತೆ ಮಂಕಾಗುತ್ತಾ ಬರುತ್ತಿದೆ. ಸರ್ವವಿದಿತವಾದ ನಿತ್ಯಗಟ್ಟಲೆಯ ನೀರಸವೂ ನಿಷ್ಫಲವೂ ಆದ ಇಂಥ ವಸ್ತುವನ್ನು ರಸವತ್ತಾಗಿ ಮಾಡಬೇಕಾದರೆ ಅದಕ್ಕೆ ದೇವದತ್ತವಾದ ಪ್ರತಿಭೆಯುಳ್ಳವನೂ ಅನುಭವಶಾಲಿಯೂ ಆದ ಕವಿವರ್ಯನಾಗಬೇಕು. ವಿದ್ಯೆ ವಿವಾಹ ಇವೆರಡನ್ನು ಬಿಟ್ಟರೆ ಉಳಿಯುವುದು ಸಂನ್ಯಾಸ ತಾನೇ?—ಎಂದು ಆಕ್ಷೇಪಿಸಬಹುದು. ಸಂನ್ಯಾಸವೋ ವಿಂನ್ಯಾಸವೋ, ದೇಶದಲ್ಲಿ ನೂರಕ್ಕೆ ತೊಂಬತ್ತೊಂಬತ್ತು ಜನ ವಿದ್ಯಾವಂತರಾದ ಯುವಕರು ಸ್ವತಂತ್ರವಾದ ಸಾಹಿತ್ಯಪ್ರಪಂಚದಲ್ಲಿ ಕೂಡ ಮೂರು ಹೊತ್ತೂ ಅಸಾಧ್ಯ ಆದರ್ಶ ವಿವಾಹಕಲ್ಪನೆಯಲ್ಲಿಯೂ ಪ್ಯಾಸಿನ ಪ್ರಬಲಪ್ರವಾಹದಲ್ಲಿಯೂ ಮುಳುಗಿದ್ದರೆ ಗಡ್ಡೆ ಹತ್ತುವುದು ಹೇಗೆ?

೩೫-೧೯೩೮

---

## ಮೈಸೂರು ಮತ್ತು ಕನ್ನಡ

ಮೈಸೂರು, ಕರ್ಣಾಟಕದ ತಿರುಳು; ಇಲ್ಲಿಯ ತಾಯಿಮಾತು ಕನ್ನಡ; ದೇಶಭಾಷೆ ಕನ್ನಡ; ಆದ್ದರಿಂದ ಅದಕ್ಕೆ ಮೈಸೂರಿನಲ್ಲಿ ಸರ್ವವ್ಯಾಪಿಯಾದ ಪ್ರಾಶಸ್ತ್ಯವು ಸ್ವಾಭಾವಿಕವಾಗಿಯೂ ಸ್ವತಸ್ಸಿದ್ಧವಾಗಿಯೂ ಇರಬೇಕಾದದ್ದು; ಹೀಗಿರುವಾಗ ಇಲ್ಲಿಯೇ, ಕನ್ನಡಕ್ಕೆ ಇನ್ನುಮೇಲೆ ಪ್ರಾಶಸ್ತ್ಯ ಕೊಡಬೇಕು, ಕನ್ನಡದ ಮೂಲಕ ಶಿಕ್ಷಣವಾಗಬೇಕು, ಎಂದು ಈಗಲೂ ಇನ್ನೂ ಹೋರಾಡುತ್ತ ಅದರಲ್ಲಿ ಭಿನ್ನಾಭಿಪ್ರಾಯಗಳನ್ನು ತೋರಿಸುತ್ತ ಇದ್ದೇವಷ್ಟೆ. ಊಟಮಾಡುವವನು ಹೊಟ್ಟೆಗೆ ಪ್ರಾಶಸ್ತ್ಯ ಕೊಡಬೇಕು, ಬಾಯಿಮೂಲಕವೇ ಅದಕ್ಕೆ ಆಹಾರವನ್ನು ಅಗಿದುಕೊಡ

ಬೇಕು ಎಂದು ಯಾರಾದರೂ ಹೊಡೆದಾಡುತ್ತಾರೆಯೇ? ಹಾಗಿಲ್ಲದ ಸಂದರ್ಭದಲ್ಲಿ—ಎಂದರೆ ಕೃತಕಾಹಾರವನ್ನು ಬೇರೆದಾರಿಯಿಂದ ತುಂಬುವಾಗ—ಅದು ಎಂಥ ದೌರ್ಬಲ್ಯದ ಮತ್ತು ಪ್ರಬಲವ್ಯಾಧಿಯ ನಿದರ್ಶಕವಾಗಿದೆಯೆಂದು ಹೇಳಬೇಕಾಗಿಲ್ಲ.

ಅಂತೂ ಈಗ ಹಲವು ವರ್ಷಗಳಿಂದ ಕನ್ನಡಕ್ಕೆ ಪ್ರಾಶಸ್ತ್ಯ ಕೊಡಬೇಕು ಎನ್ನುತ್ತ ಆ ಉದ್ದೇಶವೂ ಒಂದಾಗಿ ಮೈಸೂರು ವಿಶ್ವವಿದ್ಯಾನಿಲಯವು ಸ್ಥಾಪಿತವಾಯಿತು. ಒಟ್ಟಿಗಲ್ಲದಿದ್ದರೆ ಕ್ರಮ ಕ್ರಮವಾಗಿ ಅದರ ಆ ಉದ್ದೇಶವೂ ತಕ್ಕಮಟ್ಟಿಗೆ ನೆರವೇರುತ್ತಿದೆ.—ಕನ್ನಡದಲ್ಲಿ ಎಂ. ಎ. ಪರೀಕ್ಷೆಯನ್ನು ಇಟ್ಟಾಯಿತು. ಅದಕ್ಕೆ ತಕ್ಕ ಗೌರವಸ್ಥಾನವುಳ್ಳ ಮಹೋಪಾಧ್ಯಾಯರನ್ನೂ ಅಧ್ಯಾಪಕರನ್ನೂ ಗೊತ್ತುಮಾಡಿಯಾಯಿತು; ಅದಕ್ಕಾಗಿಯೇ ಇಂಥ ಇನ್ನೂ ಬೇರೆ ಬೇರೆ ದೊಡ್ಡ ಪರೀಕ್ಷೆಗಳು ಹುಟ್ಟುವುದರಲ್ಲಿವೆ; ಅದನ್ನು ಇತರ ದೊಡ್ಡ ಪರೀಕ್ಷೆಗಳಲ್ಲಿ ಸೇರಿಸಿ ಮಿಕ್ಕ ವ್ಯಾಸಂಗ ವಿಷಯಗಳೊಡನೆ ಅದಕ್ಕೆ ಸಹಪಂಕ್ತಿ ದೊರೆಯುಂತೆ ಏರ್ಪಾಡುಗಳು ಆಗಿವೆ, ಆಗುವುದರಲ್ಲಿವೆ. ಆದರೆ ಎಲ್ಲವೂ ಆದ್ಯಂತವಾಗಿ ಕನ್ನಡಕ್ಕೆ ಅನುಕೂಲವಾಗಿದೆಯೆಂದು ಹೇಳುವಂತಿಲ್ಲ; ಉದಾಹರಣೆಗೆ, ಕನ್ನಡವನ್ನು ನಿರ್ಬಂಧಭಾಷೆಯಾಗಿ ಮಾಡಬೇಕೆಂದು ಹೊರಟು, ಒಂದು ವಿಧದಲ್ಲಿ ಅದನ್ನು ಕುಗ್ಗಿಸಿದಂತಾಯಿತು; ಏಕೆಂದರೆ ಅದನ್ನು ಮೊದಲಿಗಿಂತಲೂ ಸ್ವಲ್ಪ ಹೆಚ್ಚುಮಂದಿ ಓದಬಹುದಾದರೂ ಅದನ್ನು ಎಲ್ಲರೂ ಲಕ್ಷ್ಯಕೊಟ್ಟು ವಿಸ್ತಾರವಾಗಿ ವ್ಯಾಸಂಗ ಮಾಡುವುದು ಇನ್ನುಮುಂದೆ ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿಯೇ ನಿಂತು ಹೋಗುತ್ತದೆ. ಅಲ್ಲಿಂದ ಮೇಲೆ ಕನ್ನಡದ ಓದು ಇದೆ ಎಂದು ಕೊಂಡರೂ ಅದು ಕೆಲವು ಹೊಸಕನ್ನಡ ಗ್ರಂಥಗಳನ್ನು ಮಾತ್ರ ಮೇಲೆ ಮೇಲೆ ಓದಿ ಆ ವಿಚಾರವಾಗಿ ಒಂದೋ ಎರಡೋ ಪ್ರಬಂಧಗಳನ್ನು ಬರೆಯಬಲ್ಲ ಸಾಮರ್ಥ್ಯವನ್ನು ಪಡೆಯುವಷ್ಟು ಮಾತ್ರ; ಈಗ ಕೆಲವು ವರ್ಷಗಳ ಕೆಳಗೆ ಕನ್ನಡದಲ್ಲಿ ಬರುತ್ತಿದ್ದ ಪ್ರಶ್ನಪತ್ರಿಕೆಗಳನ್ನೂ ಇಂಥ ಪ್ರಬಂಧ ರಚನೆಯನ್ನೂ ಹೋಲಿಸಿ ನೋಡಿದರೆ, ಹೊಲಉತ್ತು ಬೆಳೆ ತೆಗೆಯುತ್ತಿದ್ದವನು ರೆಕ್ಕೆ ಪಡೆದು ಆಕಾಶದಲ್ಲಿ ಸ್ವೇಚ್ಛೆಯಾಗಿ ಹಾರುವುದನ್ನು

ಕಂಡಂತಾಗುವುದು. ಮತ್ತೆ ಕೆಲವು ಮೇಲಿನ ಪರೀಕ್ಷೆಗಳಿಗೆ ಹೆಸರು ಮಟ್ಟಿಗೆ ಕನ್ನಡವಿದ್ದರೂ ಅದು ಪರೀಕ್ಷೆಗೆ ಇಲ್ಲ. —ಗೋಕುಲಾಷ್ಟಮಿಯಲ್ಲಿ "ದೇವರ ನೈವೇದ್ಯಕ್ಕೆ" ಎಂದು ಮಾಡಿಟ್ಟ ತಿಂಡಿಯ ಹಾಗೆ; ಇಲ್ಲದಿದ್ದರೆ ಪ್ರದರ್ಶನಶಾಲೆಯಲ್ಲಿ ನೋಡುವುದಕ್ಕೆ ಮಾತ್ರ ಇಟ್ಟ ಬೆಲೆಯುಳ್ಳ ವಸ್ತುಗಳ ಹಾಗೆ. ಕನ್ನಡಕ್ಕೆ ಬೆಂಬಲವಾಗಿದ್ದ ಸಂಸ್ಕೃತವು ಈ ನೆಪದಲ್ಲಿ ಮೂಲೆಗೆ ಬಿತ್ತು. ಕನ್ನಡವೊಂದೇ ಉಳಿಯಬೇಕು ಎಂದು ಹೊರಟಾಗ ಮಿಕ್ಕವು-ದೊಡ್ಡದೋ ಚಿಕ್ಕದೋ ಒಳ್ಳೆಯದೋ ಕೆಟ್ಟದ್ದೋ —ಉಳಿಯುವುದು ಹೇಗೆ? ಉಳಿದರೂ ಅವಕ್ಕೆ ಅದೇ ಪ್ರಾಶಸ್ತ್ಯ ಕೊಡುವುದು ಹೇಗೆ? ಆದರೆ ಹೀಗೂ ಆಗಲಿಲ್ಲ.

ಈ ವಿಚಾರವನ್ನು ದೊಡ್ಡ ದೊಡ್ಡ ಅಧಿಕಾರಿಗಳೂ ವಿದ್ವಾಂಸರೂ ದೀರ್ಘವಾಗಿ ಆಲೋಚನೆಮಾಡಿ ತೀರ್ಮಾನಿಸಿದ್ದಾರೆ. ಅವರನ್ನು ಆಕ್ಷೇಪಿಸುವುದು ನಮ್ಮ ಅಭಿಪ್ರಾಯವಲ್ಲ. ಆದರೆ ಸಂಸ್ಥಾನದ ಭಾಷಾ ಸಾಹಿತ್ಯಗಳ ಒಮ್ಮುಖವಾದ ಬೆಳವಣಿಗೆ, ಐಕಮತ್ಯ ಶ್ರೇಯಸ್ಸುಗಳ ಮೂಲಕ ದೇಶದ ಪುರೋಭಿವೃದ್ಧಿ, ಇವುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಇಲ್ಲಿ ಕೆಲವು ಅಂಶಗಳನ್ನು ಸೂಚಿಸಲಪೇಕ್ಷಿಸುತ್ತೇವೆ.

ಈ ಸಾರಿ ಪ್ರಜಾಪ್ರತಿನಿಧಿಸಭೆಯಲ್ಲಿ ಕನ್ನಡದ ವಿಚಾರ ವಿಮರ್ಶೆಗೆ ಬಂದಾಗ ಚರ್ಚೆನಡೆದು ಶಿಕ್ಷಣ ಸಚಿವರು "ನಾಡಿನ ಅಭ್ಯುದಯಕ್ಕೆ ಮಾತೃಭಾಷೆಯ ಮೂಲಕ ಕೊಡುವ ಶಿಕ್ಷಣವೇ ಮೂಲ. ಆದರೆ ಮುಸಲ್ಮಾನ ಬಂಧುಗಳನ್ನು ಒತ್ತಾಯಪಡಿಸದೆ ಅವರಾಗಿ ಅವರೇ ಕನ್ನಡ ಕಲಿಯುವಂತೆ ಮಾಡಬೇಕು.'' ಎಂದು ಅಪ್ಪಣೆ ಕೊಡಿಸಿದಂತೆಯೂ ಮೇಲೆಕಂಡ ವಿಚಾರವನ್ನು ವಿಮರ್ಶೆಮಾಡಲು ಒಂದು ಸಮಿತಿಯು ಏರ್ಪಾಡಾಗಬೇಕೆಂದು ಎಲ್ಲರೂ ಒಪ್ಪಿದಂತೆಯೂ ಕೇಳುತ್ತೇವೆ. ಆದ್ದರಿಂದ ಈ ಸಂದರ್ಭದಲ್ಲಿ ನಮಗೆ ತೋರಿದ ಕೆಲವು ಭಾವಗಳನ್ನು ಅಸಂಕುಚಿತವಾದ ಮತ್ತು ದೇಶಾಭ್ಯುದಯದ ದೃಷ್ಟಿಯಿಂದ ಮಹಾಜನರ ಮುಂದೆ ಇಟ್ಟಿದ್ದೇವೆ.

ಪ್ರತಿಯೊಬ್ಬನೂ ಅವನವನ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಾದದ್ದು ಅವನ ಕರ್ತವ್ಯ:—ಆದರೆ ಅವನ ಕರ್ತವ್ಯವು ಅಷ್ಟಕ್ಕೇ

ಮುಗಿಯುವುದಿಲ್ಲ. ತನ್ನ ವಿಷಯದಲ್ಲಿ ತನ್ನ ಕರ್ತವ್ಯವಿದ್ದಂತೆಯೇ ತನ್ನ ಕುಟುಂಬದ ವಿಷಯದಲ್ಲಿಯೂ ತಾನು ಮಾಡಬೇಕಾದ ಕರ್ತವ್ಯವಿರುತ್ತದೆ. ಬೇಕಾಗಿಯೋ ಬೇಡವಾಗಿಯೋ ಕಟ್ಟಿಕೊಂಡ ತನ್ನ ಹೆಂಡತಿ ಮಕ್ಕಳನ್ನು, ಅವರಿಂದ ಸುಖವಿರಲಿ ಇಲ್ಲದಿರಲಿ, ಕಾಪಾಡಬೇಕು, ಸಂತೋಷಪಡಿಸಬೇಕು. ಮನೆಯಲ್ಲಿ ಎಲ್ಲರೂ ಸುಖವಾಗಿದ್ದರೆ ತಾನು ಮನೆಗೆ ಬಂದಾಗ ಎಂದಾದರೂ ಸುಖವುಂಟಾಗುವ ಸಂಭವವೂ ಉಂಟು. ತನ್ನ ಸುಖವಿರಲಿ; ಅಂತು ತನ್ನನ್ನು ಸೇರಿದವರ ವಿಷಯದಲ್ಲಿ ತಾನು ಮಾಡಬೇಕಾದ ಕರ್ತವ್ಯವೊಂದಿದೆ; ಅದಕ್ಕೆ ಸ್ವಸ್ವಾರ್ಥವು ಅಡ್ಡಿ ಬರಬಾರದು; ಹಾಗೇ ತನ್ನ ನಾಡಿನ ವಿಷಯದಲ್ಲಿ ಇನ್ನೂ ಉಚ್ಚತರವಾದ ಕರ್ತವ್ಯವೂ ಇದೆ; ಇದಕ್ಕೆ ಸ್ವಸ್ವಾರ್ಥವೂ, ಸ್ವಕುಟುಂಬ ಸ್ವಾರ್ಥವೂ ಅಡ್ಡಿಬರಬಾರದು. ತಾನು ತನ್ನಕುಟುಂಬಕ್ಕೆ ಹೇಗೋ ತನ್ನ ಕುಟುಂಬವು ನಾಡಿನಲ್ಲಿ ಹಾಗೆ. ಆ ಕುಟುಂಬಗಳನ್ನು, ಅವುಗಳಿಂದ ಸುಖವಿರಲಿ ಇಲ್ಲದಿರಲಿ, ಅವು ಅಜ್ಞವಾಗಿರಲಿ ಅವಿವೇಕಿಯಾಗಿರಲಿ, ಅವುಗಳನ್ನು ಮಕ್ಕಳಂತೆ ಕಾಪಾಡುವುದು ತಂದೆಯಂಥ ರಾಜನ ಧರ್ಮ. ಆದರೆ ಮನೆಯಲ್ಲಿ ಹೆಂಡತಿ ಮಕ್ಕಳು ಗುದ್ದಾಡಿ ಒಬ್ಬರ ಮಾತನ್ನು ಒಬ್ಬರು ಕೇಳದೆ ಯಜಮಾನನ ಮಾತು ನಡೆಯುದಂತಾದರೆ ಯಾರಿಗೆ ಸುಖವುಂಟು? ಆದ್ದರಿಂದ, ಮನೆಯ ಸಂಸಾರದಲ್ಲಿ ಎಲ್ಲರೂ ವಿವೇಕಿಗಳಾಗಿ ತಮ್ಮ ಕುಟುಂಬದ ಶ್ರೇಯಃಕಾಂಕ್ಷಿಗಳಾದ ತಾಯಿತಂದೆಗಳೊಡನೆ ಮಧುರಭಾವದಲ್ಲಿ ಕಲೆತು ಕುಟುಂಬದ ಶ್ರೇಯಸ್ಸನ್ನೂ ಆ ಮೂಲಕ ತಮ್ಮ ಪ್ರತಿಯೊಬ್ಬರ ಶ್ರೇಯಸ್ಸನ್ನೂ ಪಡೆಯುವಂತೆ, ರಾಜ್ಯಸಂಸಾರದಲ್ಲಿ ಪ್ರತಿಯೊಬ್ಬ ಕುಟುಂಬದವರೂ ಜಾತಿಗಳವರೂ ಸರ್ಕಾರದೊಡನೆ ಮಧುರಭಾವದಲ್ಲಿ ಕಲೆತು ಆ ಮೂಲಕ ಒಟ್ಟು ದೇಶದ ಶ್ರೇಯಸ್ಸನ್ನೂ ಅದರ ಮೂಲಕ ಒಂದೊಂದು ಪಂಗಡದ ಶ್ರೇಯಸ್ಸನ್ನೂ ಕೋರಬೇಕು. ದೇಹಾರೋಗ್ಯ ಚೆನ್ನಾಗಿದ್ದರೆ ತಾನೇ ಕೈಕಾಲುಗಳು ಕೆಲಸಮಾಡುವುದು? ತಲೆಯಲ್ಲಿ ನೋವೋ ಹೊಟ್ಟೆಯಲ್ಲಿ ಛಳುಕೋ ಇದ್ದರೆ ಕೈಕಾಲು ಕೆಲಸಮಾಡುವುದುಹೇಗೆ? ಅವಕ್ಕೆ ತ್ರಾಣವಿದ್ದೀತು ಹೇಗೆ?

ಮೈಸೂರಿನ ತಾಯಿಮಾತು ಕನ್ನಡ, ದೇಶಭಾಷೆ ಕನ್ನಡ, ರಾಜಭಾಷೆ ಕನ್ನಡ—ಎಂದೆವು. ಇದನ್ನು ಯಾರೂ ಅಲ್ಲವೆನ್ನುವುದಿಲ್ಲ. ಆದ್ದರಿಂದ ಮೈಸೂರಿನ ಪ್ರತಿಯೊಂದು ಪ್ರಜೆಗೂ, ಅವನು ಯಾವ ವರ್ಣಾಶ್ರಮದವನಾಗಲಿ, ಜಾತಿಕಸಬಿನವನಾಗಲಿ, ದೇಶಾಭ್ಯುದಯ ದೃಷ್ಟಿಯಿಂದ, ಅದನ್ನು ಉಳಿಸಿಕೊಂಡು ಬಲಪಡಿಸಿಕೊಳ್ಳುವುದು ಕರ್ತವ್ಯ.—ತನ್ನದೇಶಕ್ಕೆ, ತನ್ನ ರಾಜನಿಗೆ, ತಾನು ಮಾಡಬೇಕಾದ ಶ್ರೇಷ್ಠವಾದ ಕರ್ತವ್ಯ. ಜಾತಿ ಮತಗಳಿಗೂ, ಕಸಬು ಕೈಗಾರಿಕೆಗಳಿಗೂ, ಸಂಸ್ಕೃತಿ ವ್ಯವಹಾರಗಳಿಗೂ ಇದಕ್ಕೂ ಸಂಬಂಧವಿಲ್ಲ. ಹಣೆತುಂಬ ವಿಭೂತಿಯನ್ನೋ ಗಂಧವನ್ನೋ ಬಳಿದುಕೊಳ್ಳಲಿ, ನಾಲ್ಕು ನಾಲ್ಕುಸಲ ಸ್ನಾನಮಾಡಲಿ ಒಂದೊಂದು ಗೂಡೆಯ ತುಂಬ ಹೂವು ತುಲಸಿಗಳನ್ನು ದೇವರಿಗೆ ಪೂಜೆಮಾಡಲಿ, ದಿನಕ್ಕೆ ಹತ್ತುಸಲ ನಮಾಜುಮಾಡಲಿ, ಅದು ಅವರವರ ಸ್ವಂತ ವಿಚಾರವಾಯಿತು. ಮತ ಧರ್ಮ ಆಚಾರ ಇವೆಲ್ಲ ಅವರವರ ಗೃಹಕೃತ್ಯದ ಹಾಗೆ; ಧರ್ಮಾನುಷ್ಠಾನದಿಂದ ಅವನವನು ಮಾತ್ರ ಉದ್ಧಾರವಾಗಬಹುದೇ ಹೊರತು ಅವನವನ ಹೆಂಡತಿಮಕ್ಕಳನ್ನೂ ಸ್ವರ್ಗಕ್ಕೆ ಕರೆದುಕೊಂಡು ಹೋಗುವಂತಿಲ್ಲ. ಇವೆಲ್ಲ ಒಟ್ಟುನಾಡಿಗೆ ಸಂಬಂಧಪಡತಕ್ಕವಲ್ಲ; ಒಬ್ಬನೌಕರನು ಮನೆಯಲ್ಲಿ ಹಿಟ್ಟು ತಿಂದನೇ ಚಿರೋಟಿ ತಿಂದನೇ ಉಪವಾಸ ಮಾಡಿದನೇ ಎಂದು ಸರ್ಕಾರದವರು ವಿಚಾರ ಮಾಡುವುದಿಲ್ಲ.—ಅದು ಅವನವನ ಯೋಗಕ್ಷೇಮ. ಹಾಗೇ ಒಬ್ಬೊಬ್ಬರು ಒಂದೊಂದು ಕಸಬನ್ನು ಅನುಸರಿಸಬಹುದು; ಆದರೆ, ಎಲ್ಲರೂ ತಮ್ಮದೇಶಕ್ಕೆ ಅದರಿಂದ ಲಾಭವೇ ನಷ್ಟವೇ ಎಂದು ನೋಡಬೇಕು. ಇದರಂತೆ ವ್ಯವಹಾರಕ್ಕಾಗಿ—ಬೆಂಗಳೂರಿನಂಥ ಊರಿನಲ್ಲಿ—ತಮಿಳು ತೆಲುಗು ಉರ್ದು ಕನ್ನಡ ಇಂಗ್ಲೀಷು ಮುಂತಾದ ನಾನಾ ಭಾಷೆಗಳು ಬೇಕಾಗಬಹುದು. ದೇವರು ಕೊಟ್ಟ ಒಂದೇ ಬಾಯಲ್ಲಿ ಈ ಹಲವು ಮಾತುಗಳನ್ನಾಡಬೇಕು. ಆದರೂ ಮನೆಯಲ್ಲಿ ತಾಯಿಯೊಡನೆ ನಮ್ಮ ಮಕ್ಕಳೊಡನೆ ಆಡುವುದು ಒಂದೇ ಮಾತು. ತಾನು ಇಂಗ್ಲೀಷು ಕಲಿತ ಮಾತ್ರಕ್ಕೆ ತನ್ನ ತಾಯಿಯೋ ಮಕ್ಕಳೋ ತನ್ನೊಡನೆ ಇಂಗ್ಲೀಷು ಮಾತನಾಡಲಾರ

ರೆಂದು ದೂರುವುದು ಅನ್ಯಾಯ. ಹಾಗೇ ದೇಶಕ್ಕೆಲ್ಲಾ ಒಂದು ಮಾತು ಇರಬೇಡವೇ? ಇದರಿಂದ ದೇಶವು ಮುಂದಕ್ಕೆ ಬರುವುದಿಲ್ಲವೆ? ಇಂಡಿಯಾ ದೇಶಕ್ಕೆಲ್ಲಾ ಒಂದು ಭಾಷೆಯಿಲ್ಲದಿರುವುದರಿಂದ ಎಷ್ಟು ಅಡಚಣೆಯಾಗಿದೆ! ಬಂಗಾಳಾ ದೇಶದಲ್ಲಿ ಬಹು ಸಂಖ್ಯೆಯ ಜನರು ಮಹಮ್ಮದೀಯರು; ಅವರೆಲ್ಲರೂ ತಮ್ಮ ದೇಶಭಾಷೆಯಾದ ಬಂಗಾಳಿಯನ್ನು, ಓದಿ ಬರೆದು ಅದಕ್ಕೆ ಒತ್ತಾಸೆ ಕೊಟ್ಟಿದ್ದರಿಂದ ಅದರ ಸಾಹಿತ್ಯವು ಅಷ್ಟು ಪುಷ್ಟವಾಗಿದೆ. ; ಆ ಕೀರ್ತಿಯು ರವೀಂದ್ರನಾಥರಂಥ ಶ್ರೇಷ್ಠ ವ್ಯಕ್ತಿಗಳಿಗೆ ಎಷ್ಟರ ಮಟ್ಟಿಗೆ ಹೋಗುತ್ತದೆಯೋ ಅಷ್ಟುಮಟ್ಟಿಗೆ ನಾನಾ ಜಾತಿ ಮತಗಳಿಗೆ ಸೇರಿದ್ದರೂ ದೇಶಭಾಷಾವತ್ಸಲರಾದ ಬಂಗಾಳಾ ದೇಶೀಯರಿಗೆ ಹೋಗುತ್ತದೆ. ಹೈದರಾಬಾದಿನಲ್ಲಿ ಉರ್ದು ದೇಶಭಾಷೆಯಾಗಿ ರಾಜಭಾಷೆಯಾಗಿ ಶೋಭಿಸುತ್ತದೆ; ಅಲ್ಲಿನ ಕನ್ನಡಿಗರು ಕನ್ನಡಮಾತನಾಡಬಲ್ಲರು; ಆದರೆ ಅನೇಕರಿಗೆ ಅದನ್ನು ಬರೆಯುವುದಕ್ಕೆ ಬರದು, ಓದುವುದಕ್ಕೆ ಬರದು; ಅದನ್ನು ಓದಬೇಕಾದರೆ, ಕುರುಡರಿಗೆ ಗುಳ್ಳೆಭಾಷೆಯಲ್ಲಿ ಅಕ್ಷರಗಳನ್ನು ಚುಚ್ಚಿಕೊಟ್ಟಂತೆ, ದೇವನಾಗರಿಯಲ್ಲಿಯೋ ಉರ್ದುವಿನಲ್ಲಿಯೋ ಬರೆದುಕೊಡಬೇಕು; ಇದರಿಂದ ಆ ದೇಶದ ರಾಜ್ಯಾಡಳಿತದಲ್ಲಿ ಭಾಷೆಯ ತೊಡಕುಗಳಿಂದ ಬರತಕ್ಕ ಎಷ್ಟು ತೊಂದರೆಗಳು ನಿವಾರಣೆಯಾಗಿವೆ! ಉರ್ದುಭಾಷೆಯಲ್ಲಿ ಅಷ್ಟುಗ್ರಂಥಗಳು ಹುಟ್ಟಿರುವುದಕ್ಕೂ ದೇಶಭಾಷೆಯಲ್ಲಿ ಶಿಕ್ಷಣಕೊಡತಕ್ಕ ಉಸ್ಮಾನಿಯಾ ಯೂನಿವರ್ಸಿಟಿಯಂಥ ವಿಶ್ವವಿದ್ಯಾಲಯವು ಸಾಧ್ಯವಾಗುವುಕ್ಕೂ ಇದು ಎಷ್ಟು ಸಹಾಯಕಾರಿಯಾಗಿದೆ! ಹಾಗೇ ಸಂಸ್ಕೃತವೂ; ನ್ಯಾಯವಾಗಿ ನೋಡಿದರೆ, ಇಂಡಿಯದ ಭಾಷೆ—ಉತ್ತರ ಇಂಡಿಯಕ್ಕಾದರೂ—ಸಂಸ್ಕೃತ; ಅದನ್ನು ರಾಜಕೀಯವಾದ ಇಂಗ್ಲೀಷಿಗೂ ವ್ಯಾವಹಾರಿಕವಾದ ಇತರಭಾಷೆಗಳಿಗೂ ಮಾರು ಕೊಟ್ಟಿಲ್ಲವೇ? ಸಂಸ್ಕೃತಕ್ಕೆ ಉತ್ತೇಜಕವಾಗಿ ಪಾಠಶಾಲೆಗಳೂ ಪಾಠಶಾಲೆಯಲ್ಲಿ ವೇತನಗಳೂ ಇವೆ ಎನ್ನಬಹುದು; ಕನ್ನಡವು ಸಾರ್ವತ್ರಿಕವಾದಾಗ ಹಾಗೇ ಬೇಕಾದರೆ ಉರ್ದು ಕಾಲೇಜುಗಳನ್ನು ಸ್ಥಾಪಿಸಿ ಅವುಗಳಲ್ಲಿ ಬೇಕಾದಷ್ಟು ವೇತನಗಳನ್ನು ಇಡಬಹುದು. ನಾಳೆ ಹಿಂದಿಯು ಅಖಿಲಭಾರತೀಯ ದೇಶಭಾಷೆಯೆಂದು

ಏರ್ಪಟ್ಟು ಆದರಿಂದ ದೇಶದಲ್ಲಿ ಒಕ್ಕಟ್ಟು ಬಂದು ಮಂಗಳವುಂಟಾಗುವಂತಿದ್ದರೆ ಇವೆಲ್ಲವನ್ನೂ ಅದರದರ ಸ್ಥಾನದಲ್ಲಿರಿಸಿ ಹಿಂದಿಯನ್ನು ಮುಂದುಮಾಡೋಣ! ಇವೊತ್ತು, ಮೈಸೂರಿನ ದೇಶಭಾಷೆ ರಾಜಭಾಷೆಯಾದ ಕನ್ನಡವನ್ನು ಎತ್ತಿಹಿಡಿಯುವದು ಎಲ್ಲಾ ಮೈಸೂರು ಪ್ರಜೆಯ ಕರ್ತವ್ಯವೂ ಅಲ್ಲವೇ?

ಆದರೆ ಈಚೆಗೆ ಇಸ್ಲಾಂ ಸಂಸ್ಕೃತಿಯು ಬೇರೆಯೆಂದೂ ಮಹಮ್ಮದೀಯರಿಗೆ ಕನ್ನಡ ಕಲಿಯುವುದು ಕಷ್ಟವೆಂದೂ ಒಂದು ಭಾವನೆಯುಂಟಾಗಿ ವಿಶ್ವವಿದ್ಯಾಲಯದಲ್ಲಿ ಕನ್ನಡ ಉರ್ದು ಇವೆರಡರಲ್ಲಿ ಯಾವುದಾದರೂ ಒಂದು ಒತ್ತಾಯವಾದ ದ್ವಿತೀಯ ಭಾಷೆಯಾಗಿರಬೇಕು ಎಂದು ವಿಧಾಯಕವಾಗಿದೆ. ಅದನ್ನು ಅನುಸರಿಸಿ ಮಿಕ್ಕ ಕಡೆಗಳಲ್ಲಿಯೂ 'ಕನ್ನಡ'ವೆಂದರೆ ಕನ್ನಡ ಒಂದೇ ಅಲ್ಲ, ಕನ್ನಡ ಉರ್ದು (ಈ ಎರಡೂ) ಎಂದು ಅರ್ಥವಾಗುವ ಮಟ್ಟಿಗೆ ಉರ್ದುಭಾಷೆಯು ಒಡವೆರೆದು ಬರುತ್ತಿದೆ. ಈಗ ಕೆಲವು ದಿನಗಳ ಕೆಳಗೆ ನಡೆದ ಒಂದು ಗಣ್ಯ ಸಭೆಯಲ್ಲಿ ಕನ್ನಡಕ್ಕೆ 'ಹಾಗೆ ಮಾಡಬೇಕು, ಹೀಗೆಮಾಡಬೇಕು' ಎಂದು ವಿಚಾರ ನಡೆಯುತ್ತ ತೀರ್ಮಾನವಾಗುವ ಕಾಲಕ್ಕೆ ಒಬ್ಬ ಮಹಮ್ಮದೀಯ ದೊಡ್ಡ ಮನುಷ್ಯರು ಎದ್ದು ನಿಂತುಕೊಂಡು 'ಕನ್ನಡ' ಎಂದರೆ 'ಉರ್ದು'ವೂ ಸೇರುತ್ತದೆ ತಾನೆ?—ಎಂದರು. ಎಲ್ಲರೂ ನಗುತ್ತ 'ಹೌದು' ಎಂದರು.

ಇಸ್ಲಾಂ ಸಂಸ್ಕೃತಿಯು ಭಿನ್ನವಾಗಿರಬಹುದು. ಆದರೆ ಅದನ್ನು ಆ ಭಾಷೆಯ ಮೂಲಕವೇ ತಿಳಿದುಕೊಳ್ಳಬೇಕೇ? ಈಗ ಗ್ರೀಕ್ ಚೈನ ಸಂಸ್ಕೃತ ಮುಂತಾದ ಸಂಸ್ಕೃತಿಗಳನ್ನು ನಾವು ಇಂಗ್ಲಿಷ್ ಮೂಲಕ ತಿಳಿದುಕೊಳ್ಳುತ್ತಿಲ್ಲವೇ? ಹಾಗೆಯೇ ಇಸ್ಲಾಂಗ್ರಂಥಗಳನ್ನೂ ಉರ್ದುವಿನಲ್ಲಿಯೇ ಎಲ್ಲೋ ಕೆಲವು ಮಹಮ್ಮದೀಯರು ಓದುವುದಕ್ಕಿಂತ ಅವುಗಳನ್ನು ಕನ್ನಡಿಸಿ ಎಲ್ಲರೂ ಓದುವಂತಾದರೆ ಎಷ್ಟು ಲಾಭ! ಆಗಲೂ ಉರ್ದು ತಿಳಿದವರು ಮೂಲ ಓದುವುದಕ್ಕೇನೂ ಅಡ್ಡಿ ಇಲ್ಲ. ತಮಿಳರು ಹೇಗೆ ವೇದವನ್ನು ತರ್ಜುಮೆ ಮಾಡಿಕೊಂಡರು; ಉಪನಿಷತ್ತು ಗೀತಾದಿಗಳನ್ನು ಸಂಸ್ಕೃತದಲ್ಲಿ ಓದುವುದು ನಿಂತು ಕನ್ನಡದಲ್ಲಿ

ಓದುವುದು ಮೊದಲಾಗುತ್ತಿದೆ. ಈಗ ಮೌ|| ಮಹಮ್ಮದಾಲಿಯವ ರಿಂದ ಪ್ರಕಾಶಿತವಾದ ಸಟಿಪ್ಪಣವಾದ ಕೊರಾ್ ಮೂಲ ಭಾಷಾಂ ತರಗಳಂಥ ಗ್ರಂಥಗಳು ಬಂದರೆ ಅದನ್ನು ಮಹಮ್ಮದೀಯರಿಗಿಂತ ಹೆಚ್ಚಾಗಿ ಇತರರು ಓದುವರೆಂದು ಹೇಳಬಲ್ಲೆವು; ಆ ಪುಸ್ತಕದ ಕಾಗದ ಮುದ್ರಣ ಬೈಂಡುಗಳ ಸೌಂದರ್ಯವೂ ಆ ಭಾಷಾಶೈಲಿಯ ಸೊಗಸೂ ಇವೆರಡೇ ಸಾಕು ವಿದ್ಯಾವಂತರನ್ನು ಆಕರ್ಷಿಸುವುದಕ್ಕೆ! ಆದ್ದರಿಂದ ಮಹಮ್ಮದೀಯರು ತಮ್ಮ ಸಂಸ್ಕೃತಿ ಗ್ರಂಥಗಳನ್ನು ದೇಶ ಭಾಷೆಯಾದ ಕನ್ನಡದಲ್ಲೇ ಓದುವಾಗ—ಅವರಿಗೆ ಆಗ ಉರ್ದು ಗೊತ್ತಿ ರುವುದಿಲ್ಲವೆಂದು ಇಟ್ಟುಕೊಳ್ಳೋಣ—ಉಭಯರಿಗೂ ಅದರಿಂದ ಎಷ್ಟು ಉಪಕಾರವಾಗುವುದು! ಮತ ಪ್ರಸಾರಣೆಗಾದರೂ ಧರ್ಮಗ್ರಂಥವು ದೇಶಭಾಷೆಗೆ ಬರುವುದು ಪ್ರಥಮಸೋಪಾನವೆಂಬುದನ್ನು ಕ್ರೈಸ್ತ ಪಾದ್ರಿಗಳು ಹೇಳಿಕೊಟ್ಟಿದ್ದಾರೆ. ಧರ್ಮೋಪದೇಶಕರ ಮೂಲತತ್ವ ಗಳು, ಎಲ್ಲಾ ದೇಶದಲ್ಲಿಯೂ ಎಲ್ಲಾ ಕಾಲದಲ್ಲಿಯೂ, ಒಂದೇ ಅರ್ಥ ಕೊಡತಕ್ಕವು, ಒಂದೇ ಉದ್ದೇಶಉಳ್ಳವು! ಆದ್ದರಿಂದ ಕೊರಾ್ ಮುಂತಾದ ಗ್ರಂಥಗಳನ್ನು ಹಿಂದೂಗಳು ಓದುವುದರಿಂದ ಪರಸ್ಪರ ಮಧುರಭಾವವು ಹೆಚ್ಚಾಗುವುದರಲ್ಲಿ ಏನೇನೂ ಸಂಶಯವಿಲ್ಲ. ಇಂಗ್ಲೀಷು ಓದಿದವರಲ್ಲಿ ಬೈಬಲ್ ಗ್ರಂಥವನ್ನು ಅದರ ಧರ್ಮತತ್ತ್ವಗಳಿಗೂ ಉದಾತ್ತ ಭಾವಗಳಿಗೂ ಗೌರವಿಸದವರಿಲ್ಲ. ಮತ್ತು, ಸಂಸ್ಕೃತಿಯಲ್ಲಿ ನಿಜವಾಗಿಯೂ ಭೇದವಿರುವುದಾದರೆ ಆ ವಿಷಯಗಳನ್ನು ಪಠ್ಯ ಪುಸ್ತಕ ಗಳಲ್ಲಿ ಸೇರಿಸಿ ಎಲ್ಲರೂ ಓದೋಣ! ಮಿರ್ಷಸ್ಕೂಲಿನಲ್ಲಿ ಪಾದ್ರಿಗಳು ತಮ್ಮ ರೀಡರುಗಳನ್ನು ಇಟ್ಟು ಅದರಲ್ಲಿ ಬೈಬಲ್ ಪಾಠಗಳನ್ನು ಸೇರಿ ಸಿಲ್ಲವೇ? ಬೈಬಲನ್ನು ಬೇರೆ ಪಾಠ ಹೇಳುತ್ತಿಲ್ಲವೇ?—ಹಾಗೆ. ಸಾಲ ದಿದ್ದರೆ, ಧಾರ್ಮಿಕಶಿಕ್ಷಣಕ್ಕೆ ಪ್ರಾಶಸ್ತ್ಯಕೊಟ್ಟು ಪ್ರತಿಯೊಬ್ಬರೂ ಹಿಂದು ಮಹಮ್ಮದೀಯ ಕ್ರೈಸ್ತ ಧರ್ಮಗಳೆಲ್ಲವನ್ನೂ ತಕ್ಕಮಟ್ಟಿಗೆ ಓದುವಂತೆ ಮಾಡಬಹುದು. ಮತ್ತೊಂದು ಧರ್ಮವನ್ನು ಓದುವುದ ರಿಂದ ಮನುಷ್ಯನು ಪತಿತನಾಗುವನೆಂಬ ಕಾಲವು ಹೋಯಿತು. ಪ್ರತಿ ಯೊಂದು ವಿಷಯವನ್ನೂ ತುಲನಾತ್ಮಕವಾಗಿ ಸವಿಮರ್ಶವಾಗಿ ಓದು

ತ್ತಿರುವಾಗ ಇದಕ್ಕೆ ಯಾರೂ ಹಿಂದೆಗೆಯರು. ಇತರರೊಡನೆ ಹೋಲಿಸಿ ನೋಡಿಕೊಂಡರೆ ನಮ್ಮ ನಿಜಸ್ವರೂಪವು ಗೊತ್ತಾಗುವಹಾಗೆ, ನಮ್ಮನ್ನು ನಾವು ಕನ್ನಡಿಯಲ್ಲಿ ಎಷ್ಟು ನೋಡಿಕೊಂಡರೂ ಗೊತ್ತಾಗುವುದಿಲ್ಲ. ಅಷ್ಟೇಕೆ, ಶುದ್ಧ ವೈದಿಕರಾದವರೂ ದರ್ಶನಗಳನ್ನು ಓದುವಾಗ ಚಾರ್ವಾಕ ಮುಂತಾದ "ನಾಸ್ತಿಕ" ದರ್ಶನಗಳನ್ನು ವ್ಯಾಸಂಗ ಮಾಡುತ್ತಿರಲಿಲ್ಲವೇ ?

ಹಿಂದೂ ಮುಸಲ್ಮಾನರು ಜಾತಿಯಲ್ಲಿ ಬೇರೆಯಾದರೂ ದೇಶದಲ್ಲಿ ಒಂದು; ಭಾರತೀಯ ಮುಸಲ್ಮಾನರಾರೂ ವರ್ಷಕ್ಕೊಂದು ಸಾರಿ ತುರ್ಕಿಗೋ ಈಜಿಪ್ಟಿಗೋ ಅರೇಬಿಯಾಕ್ಕೋ ಹೋಗಿಬರುವುದಿಲ್ಲ. ಇಲ್ಲಿ ಮುದುಕರಾಗುವವರೆಗೆ ದುಡಿದು ಪೆನ್ಷನ್ ಪಡೆದು ಬೇರೆ ಖಂಡಕ್ಕೆ ಹೋಗುವುದಿಲ್ಲ. ಹಿಂದೂ ಮುಸಲ್ಮಾನರಿಬ್ಬರೂ ಭಾರತೀಯರು. ನಮ್ಮನ್ನು ಇಂಡಿಯಾದಿಂದ ಹೊರಗೆ ಜನರು ವ್ಯವಹರಿಸುವುದು ಹಾಗೇ. ಆದ್ದರಿಂದ ನಾವು ಇರಬೇಕಾದ್ದೂ ಹಾಗೇ; ಇಂದಲ್ಲದಿದ್ದರೆ ಮುಂದಾದರೂ ನಾವು ಒಂದಾಗಬೇಕು; ಅದಕ್ಕೆ ಹತ್ತಿರವಾದ, ಸುಖ ಶಾಂತಿದಾಯಕವಾದ ದಾರಿಯನ್ನು ಹುಡುಕಬೇಕು. ಒಂದು ಮನೆಯಲ್ಲಿ ಒಡಕುಹುಟ್ಟಿದರೆ ಅದು ನಿಲ್ಲುವುದು ಕಷ್ಟ. ಆದ್ದರಿಂದ ಈಗ ರಾಜಕೀಯ ಸಾಮಾಜಿಕ ಮುಂತಾದ ವಿಚಾರಗಳಲ್ಲಿ ಐಕಮತ್ಯವನ್ನು ಸಾಧಿಸುತ್ತಿರುವಂತೆ ಭಾಷಾಸಾಹಿತ್ಯ ವಿಚಾರಗಳಲ್ಲಿಯೂ ಐಕಮತ್ಯವನ್ನು ಸಾಧಿಸಬೇಕಾದದ್ದು ಎಲ್ಲರ ಕರ್ತವ್ಯ.

ಮಹಮ್ಮದೀಯರು ಕನ್ನಡ ಕಲಿಯುವುದು ಕಷ್ಟವೆಂಬುದೂ, ಎರಡು ಮೂರು ಭಾಷೆ ಕಲಿಯುವುದು ಇನ್ನೂ ಕಷ್ಟವೆಂಬುದೂ ಮತ್ತೊಂದು ವಾದ. ಕನ್ನಡವೇಕೆ, ಯಾವುದನ್ನು ಕಲಿಯುವುದೂ ಕಷ್ಟ; ಮಹಮ್ಮದೀಯರಿಗೆ ಮಾತ್ರವಲ್ಲ, ಎಲ್ಲರಿಗೂ ಎಲ್ಲವೂ ಕಷ್ಟವೇ! —ಮರಗೆಲಸ ಸುಲಭವೇ, ವ್ಯವಸಾಯ ಸುಲಭವೇ, ಲೆಕ್ಕ ಸುಲಭವೇ? ಒಂದು ಮಠದಲ್ಲಿ ಒಬ್ಬ ಹಿಂದೂ ಹುಡುಗನಿಗೆ ಮೇಷ್ಟರು 'ಶ್ರೀ' ಕಾರವನ್ನು ಹೇಳಿಕೊಟ್ಟರೂ ಅವನು ಅದನ್ನು ಉಚ್ಚರಿಸಲಾರದೆ "ಚೀಳೀ" ಎಂದು ಹೇಳುತ್ತಿದ್ದುದನ್ನು ನಾನೇ ಕೇಳಿದ್ದೇನೆ. ಇನ್ನೂ, ಯೂರೋಪಿ

ಯನ್ನರು ಕನ್ನಡ ಕಲಿಯಲಾರರು. ಅವರು ಎಷ್ಟು ಶ್ರಮಪಡಲಿ ಮಹಮ್ಮದೀಯರಷ್ಟು ಚೆನ್ನಾಗಿ ಕಲಿಯಲಾರರೆಂಬುದು ಎಲ್ಲರಿಗೂ ತಿಳಿದವಿಷಯ. ಎರಡು ಭಾಷೆಗಳೂ ಗೊತ್ತಿರುವಾಗ ಒಂದೇವಿಷಯವನ್ನು ಯಾವುದರಲ್ಲಿ ಕಲಿತರೂ ಶ್ರಮ ಒಂದೇ ಆಗುತ್ತದೆ. ಇಷ್ಟರಮೇಲೆ ಗ್ರಾಮಾಂತರಗಳಲ್ಲಿರುವ ಮಹಮ್ಮದೀಯರನ್ನು ಮಹಮ್ಮದೀಯರೆಂದು ತಪ್ಪಿಲ್ಲದೆ ಗುರುತಿಸಬಲ್ಲವರಾರು? ಅವರಿಗೆ ಕನ್ನಡ ಬರುವುದಿಲ್ಲವೆಂದು ಹೇಳುವರಾರು? ಅವರು ಹಿಂದೂಗಳೊಡನೆ ಬೆರೆತುಹೋಗಿದ್ದಾರೆ; ಅವರು ಆಡುವ ಕನ್ನಡಕ್ಕೂ ಹಿಂದೂ ರೈತರು ಆಡುವ ಕನ್ನಡಕ್ಕೂ ಸ್ವರ ಉಚ್ಚಾರಣೆ ಮೊದಲಾದವುಗಳಲ್ಲಿ ಯಾವ ಭೇದವೂ ಇಲ್ಲ. ಅಲ್ಲದೆ ನಮ್ಮ ಸಹಪಾಠಿಗಳಲ್ಲಿ, ಸರ್ಕಾರದ ನೌಕರರಲ್ಲಿ, ವಿದ್ಯಾರ್ಥಿವರ್ಗದಲ್ಲಿ ಎಷ್ಟೋ ಜನ ಮಹಮ್ಮದೀಯರು ಸೊಗಸಾದ ಕನ್ನಡಬರೆದು ಓದಿ ಆಡಿ ಸನ್ಮಾನಿತರಾಗಿದ್ದಾರೆ. ರನ್ನನ ಗದಾಯುದ್ಧದಂಥ ಹಳಗನ್ನಡವನ್ನು ಸುಲಭವಾಗಿ ಸೊಗಸಾಗಿ ಉಚ್ಚರಿಸಿ ಮೈಸೂರಿನಲ್ಲಿಯೂ ಬೆಂಗಳೂರಿನಲ್ಲಿಯೂ ಅಭಿನಯಿಸಿದ ಇಬ್ಬರು ಮಹಮ್ಮದೀಯ ವಿದ್ಯಾರ್ಥಿಗಳ ಉದಾಹರಣೆಯೇ ಇದಕ್ಕೆ ನಿದರ್ಶನವಾಗಿಲ್ಲವೇ ?

ಎರಡು ಮೂರುಭಾಷೆಗಳನ್ನು ಕಲಿಯುವುದು ಎಲ್ಲರಿಗೂ ಕಷ್ಟ; ಆದರೆ ವ್ಯವಹಾರಕ್ಕೆ ಆವಶ್ಯಕತೆ ಬಂದರೆ ಈಗ ತಮಿಳು ತೆಲುಗು ಹಿಂದಿ ಇಂಗ್ಲೀಷು ಮುಂತಾದ ಮೂರು ನಾಲ್ಕು ಭಾಷೆಗಳನ್ನು ಅವಿದ್ಯಾವಂತರೂ ಕಲಿಯುವುದಿಲ್ಲವೇ ? ಕನ್ನಡವು ಶಿಕ್ಷಣಭಾಷೆಯಾಗಿ ಗ್ರಂಥಗಳೂ ಶಿಕ್ಷಣವೂ ವ್ಯವಹಾರವೂ ಅದರಲ್ಲಿಯೇ ನಡೆಯುವುದಾದರೆ ಹೆಚ್ಚು ಭಾಷೆಯನ್ನು ಕಲಿಯುವುದರ ಆವಶ್ಯಕತೆಯು ಕಡಿಮೆಯಾಗಿಯೋ ತಪ್ಪಿಯೋ ಹೋಗುವುದಿಲ್ಲವೇ ?

ಮಿಕ್ಕ ಎಲ್ಲಾ ಜನರನ್ನೂ ಅವರ ಮಾತನ್ನೂ ಅಟ್ಟಿಬಿಟ್ಟು ಕನ್ನಡವನ್ನು ಏಕನಾದ ತಂಬೂರಿಯ ತಂತಿಯಂತೆ ನಿಲ್ಲಿಸಬೇಕೆಂಬುದು ನಮ್ಮ ಅಭಿಪ್ರಾಯವಲ್ಲ; ಎಲ್ಲವೂ ಬೇಕು, ಎಲ್ಲರೂ ಬೇಕು; ಆದರೆ ಅವರು ವೀಣೆಯ ತಂತಿಗಳಂತೆ ಸೇರಿ ಮಧುರವಾದ ಗಾನವನ್ನು ಬೀರಿ ದೇಶಕ್ಕೆ ಗೌರವವನ್ನೂ ಸುಖವನ್ನೂ ತರಬೇಕು. ಹಾಗಲ್ಲದೆ ಒಂದು ತಂತಿ

ಹೆಚ್ಚು ಕಡಿಮೆಯಾದರೆ—ವೀಣೆಗೆ ಎಷ್ಟು ದಂತದ ಕೆಲಸಮಾಡಿದ್ದರೇನು —ಅಪಸ್ವರ ಹೊರಡುತ್ತದೆ. ಎಲ್ಲಾದರೂ ಸ್ವಲ್ಪ ಬಿರುಕು ಬಂದಿತೆಂದರೆ ವೀಣೆ ಹೋಗಿ ಸೋರೆಬುರುಡೆಯಾಗುತ್ತದೆ. ಆದ್ದರಿಂದ, ಎಲ್ಲಿಯೂ ಭಿನ್ನಭಾವಗಳಿಗೆ ಅವಕಾಶ ಕೊಡಬಾರದು. ಮೈಸೂರು ಮೈಸೂರೇ ಆಗಿರಬೇಕೆಂದೂ, ಅದು ವೀಣೆಯಂತಿರಬೇಕೆಂದೂ ಒಡಕುಸೋರೆ ಬುರುಡೆಯಾಗಬಾರದೆಂದೂ ಅಭಿಪ್ರಾಯವಿರತಕ್ಕವರೆಲ್ಲರೂ, ಅವರು ಹುಟ್ಟುಕನ್ನಡಿಗರಾಗಿರಲಿ, ಅಲ್ಲದಿರಲಿ, ತಾವು ಮೈಸೂರಿನ ಪ್ರಜೆಗಳು ಎಂಬ ಉಚ್ಚಭಾವದಿಂದ, ಹೆಮ್ಮೆ ಮಮತೆಗಳಿಂದ, ದೇಶದ ಒಟ್ಟು ಶ್ರೇಯೋಭಿವೃದ್ಧಿಯಿಂದಲೇ ತಮ್ಮ ತಮ್ಮ ಶ್ರೇಯೋಭಿವೃದ್ಧಿಯೆಂದು ನಿಶ್ಚಯಮಾಡಿಕೊಂಡು, ಈ ಸಂಗತಿಯನ್ನು ನಿಸ್ಸ್ವಾರ್ಥಬುದ್ಧಿಯಿಂದಲೂ ನಿಷ್ಪಕ್ಷಪಾತವಾಗಿಯೂ ವಿಚಾರಮಾಡಿ ಆಚರಣೆಗೆ ತರುವರೆಂದು ನಂಬುತ್ತೇವೆ.

೩೬—೧೯೩೮

---

## ಅಶ್ವತ್ಥಾಮನ್

ಈಗ ಕೆಲವು ವರ್ಷಗಳ ಕೆಳಗೆ ಶ್ರೀಮಾನ್ ಬಿ.ಎಂ. ಶ್ರೀಕಂಠಯ್ಯನವರು ಮೈಸೂರು ವಿಶ್ವವಿದ್ಯಾನಿಲಯಸಂಘದ ಅಧ್ಯಕ್ಷರಾಗಿದ್ದಾಗ ಅದರ ವಾರ್ಷಿಕೋತ್ಸವ ಕಾಲದಲ್ಲಿ ಕನ್ನಡನಾಟಕವನ್ನು ಆಡುವುದಕ್ಕೆ ಮೊದಲಾಯಿತು. "ಗದಾಯುದ್ಧ ನಾಟಕ"ಕ್ಕೆ ಅಗ್ರಪೂಜೆಯು ದೊರೆಯಿತು. ಅದು ಪ್ರಾಚೀನ ಕನ್ನಡ ಕವಿಶ್ರೇಷ್ಠರಲ್ಲಿ ಒಬ್ಬನಾದ ರನ್ನನ ಕಾವ್ಯಕಾನನದಲ್ಲಿ ಬಿಟ್ಟಿದ್ದ ಹೂಗಳನ್ನೆಲ್ಲಾ ಕುಯ್ದು ಕುಶಲತೆಯಿಂದ ಕಟ್ಟಿದ ಕುಸುಮ ಮಾಲೆ. ಆದ್ದರಿಂದ ಅದರ ಭಾಷೆಯು ಹತ್ತನೆಯ ಶತಮಾನದ ಹಳಗನ್ನಡವಾದರೂ ಅದು ಬಲು ಜನರ ಮೆಚ್ಚಿಗೆಗೆ ಪಾತ್ರವಾಯಿತು. ಹಳಗನ್ನಡವೆಂದರೆ ಹೆದರಬೇಕಾಗಿಲ್ಲವೆಂದೂ, ನಾಟಕವು ರಸವತ್ತಾಗಿ, ಅದರ ದೃಶ್ಯತೆಯು ಚೆನ್ನಾಗಿ, ಅದನ್ನು ಅಭಿನಯಿಸುವವರು ಕುಶಲರಾಗಿದ್ದರೆ ರನ್ನನ "ರಸಘಟ್ಟಿ"ಯು ಈ ರೂಪದಲ್ಲಿ ತನಗೆ ಸಲ್ಲಬೇಕಾದ ಉಚ್ಚಸ್ಥಾನವನ್ನು ಪಡೆಯುವುದೆಂದೂ

ಧೈರ್ಯವಾಯಿತು. ಆದರೆ ಲಂಕಾದಹನಗಳನ್ನೂ ರಾಜಸೂಯ ಯಾಗಗಳನ್ನೂ ಬೆರಗಾಗಿ ನೋಡುತ್ತಿರುವವರಿಗೆ ಇದು ಬರಸಿಡಿಲಿನ ಹಾಗೆ ಬಂದೆರಗಿತು. (ಸಿಡಿಲು ಬಿದ್ದ ಕಲ್ಲುನೆಲವು ಫಲವತ್ತಾಗುವುದೆಂದು ಎಲ್ಲಿಯೋ ಓದಿದ ಜ್ಞಾಪಕವಿದೆ.) ಸಾಹಿತ್ಯಕ್ಷೇತ್ರದಲ್ಲಿ ಮ|| ಶ್ರೀಕಂಠಯ್ಯನವರ ಈ ಬರಸಿಡಿಲುಗಳು ಎಷ್ಟು ಫಲಕಾರಿಗಳಾಗಿವೆ ಎಂಬುದಕ್ಕೆ ಅವರ "ಇಂಗ್ಲಿಷ್ ಗೀತೆಗಳು" ಈಗಾಗಲೇ ಎಲ್ಲೆಲ್ಲಿಯೂ ಹಬ್ಬಿ ನಾನಾ ವಿಧವಾದ ವಿಮರ್ಶೆ ವ್ಯಾಸಂಗ ಅನುಕರಣಗಳಿಗೆ ಮೂಲವಾಗಿರುವುದೇ ಸಾಕ್ಷಿಯಾಗಿದೆ. ಅದು ಇನ್ನೂ ಗುಡುಗುಡು ಶಬ್ದಮಾಡುತ್ತಿರುವಾಗಲೇ ಅವರು 'ಅಶ್ವತ್ಥಾಮನ್' ಎಂಬ ಅಂಥ ಇನ್ನೊಂದು ಸಿಡಿಲನ್ನು ಸೃಷ್ಟಿಸಿ ಹೊಸಕನ್ನಡ ಸಾಹಿತ್ಯ ಪ್ರಪಂಚಕ್ಕೆ ಕಳುಹಿಸಿದ್ದಾರೆ. ಇದು ಕಥೆಯಲ್ಲಿಯೂ ಶೈಲಿಯಲ್ಲಿಯೂ ಗದಾಯುದ್ಧದ ದ್ವಿತೀಯ ಭಾಗದಂತಿದೆ. ಈ ನಾಟಕವನ್ನು ಕಳೆದ ಫೆಬ್ರುವರಿ ಹತ್ತನೆಯ ತಾರೀಖಿನ ದಿವಸ ಮೈಸೂರು ವಿಶ್ವವಿದ್ಯಾನಿಲಯ ಸಂಘದವರು ಮಹಾರಾಜರವರ ಕಾಲೇಜಿನಲ್ಲಿ ಅಭಿನಯಿಸಿದರು. ಇದರ ಭಾಷೆಯೂ ಹಳಗನ್ನಡ. ಆದರೆ ಆ ಕಥೆಗೂ ಕಥೆಯ ಪ್ರಾಚೀನತೆಗೂ ಅದರ ಗಾಂಭೀರ್ಯಕ್ಕೂ ರಸಕ್ಕೂ ಈ ಬಿಗಿಯಾದ ಹಳಗನ್ನಡವು ಹೊಂದಿಕೊಂಡು ಪ್ರೇಕ್ಷಕರನ್ನು ಮಹಾಭಾರತಕಾಲದ ಬನವಾಸಿಗೆ ಕರೆದುಕೊಂಡು ಹೋಗಿ ನಿಲ್ಲಿಸುವಂತಾಗುತ್ತದೆ. ಭಾವಪ್ರವಣರಾದ ಪ್ರಾಚೀನ ಸಂಪ್ರದಾಯಾನುಯಾಯಿಗಳಿಗೆ ಇದರಲ್ಲಿ ಬರುವ ಸಿಡಿಲ ಪೆಟ್ಟು ಏನೆಂದರೆ—ಚಿರಜೀವಿಯೂ ಭಾರತ ವೀರನೂ ಆದ ಅಶ್ವತ್ಥಾಮನು ಆತ್ಮಹತ್ಯ ಮಾಡಿಕೊಳ್ಳುವುದು. ಆದರೆ ಶೂರರು ಸತ್ತರೆ ಅವರಿಗೆ ಅಮರತ್ವವಾಗಲಿ ಚಿರಜೀವಿತ್ವವಾಗಲಿ ಹೋಗುವುದೇನು? ಕರ್ಣ ಸಾಯಲಿಲ್ಲವೇ? ಕೃಷ್ಣ ಸಾಯಲಿಲ್ಲವೇ? ಅವರು ಎಂದೋ ಎಲ್ಲಿಯೋ ನಾಲ್ಕು ದಿನವಿದ್ದು ಜೀವವನ್ನು ಬಿಟ್ಟರೂ ಈಗ ಶಾಶ್ವತವಾಗಿ ಎಲ್ಲರ ಬಾಯಿ ಮನಸ್ಸು ಹೃದಯಗಳಲ್ಲಿ ಮನೆಮಾಡಿಕೊಂಡು ಆಧಿಪತ್ಯಮಾಡುತ್ತಿಲ್ಲವೇ? ಇಹಲೋಕದಲ್ಲಿ ಹುಟ್ಟು ಸಾವುಗಳೇ ಮೊದಲು ಕೊನೆಗಳಲ್ಲ........

೨೮-೧೯೨೯

---

ಶ್ರೀವರ್ಮ ಬಿ.ಎಂ. ಶ್ರೀಕಂಠಯ್ಯನವರಿಂದ ರಚಿತವಾದ "ಅಶ್ವತ್ಥಾಮನ್" ನಾಟಕವನ್ನು............ಮೈಸೂರಿನ "ವಿಶ್ವವಿದ್ಯಾನಿಲಯ ಸಂಘ"ದವರು ಈ ಸಂದರ್ಭದಲ್ಲಿ* ಅಭಿನಯಿಸಿ ಉತ್ಸವವನ್ನು ವಿಜೃಂಭಣೆಗೊಳಿಸಿದರು........ಇವರ ಅಭಿನಯ ಕೌಶಲದಿಂದ 'ಭಾಷೆ ಹಳಗನ್ನಡ" ಎಂಬ ಗೊಣಗಾಟವು ಬಹಳಮಟ್ಟಿಗೆ ಕಡಮೆಯಾಗಿ ಹೋಯಿತು. ಆದರೆ ಚಿರಜೀವಿಯಾದ ಅಶ್ವತ್ಥಾಮನು ಸತ್ತು ಹೋದನೆಂಬ ಗೊಣಗಾಟ ಮಾತ್ರ ತಪ್ಪಿಲ್ಲ. ಇದಕ್ಕೆ ಈಗಾಗಲೇ ಉತ್ತರ ಕೊಟ್ಟಿರುವೆವು. ಅದಕ್ಕಿಂತ ಹೆಚ್ಚಿಗೆ ಬರೆಯಬೇಕಾದ ಆವಶ್ಯಕತೆಯೇನೂ ತೋರುವುದಿಲ್ಲ. ಈ ಗೊಣಗಾಟಕ್ಕೆ ನಮ್ಮ ಸಂಪ್ರದಾಯ ಪ್ರೀತಿಯೂ ಅದರಿಂದ ಬಂದ ಒಂದು ದೌರ್ಬಲ್ಯವೂ ಕಾರಣವೆಂದು ತೋರುತ್ತದೆ. ನಮ್ಮ ಮಿತ್ರರೊಬ್ಬರು ಹೇಳಿದಹಾಗೆ, ಸಂಪ್ರದಾಯವೆಂಬುದು ನಮ್ಮ ಮೇಲೆ ಎಷ್ಟರಮಟ್ಟಿಗೆ ಹೆಪ್ಪುಕಟ್ಟಿಕೊಂಡು ಹೋಗಿದೆಯೆಂದರೆ, "ಹೊಸ ಚಿಪ್ಪಿಗ ಗೋಣಿ ಹೊಲಿದ" ಎಂದರೆ ನಾವು "ಛೆ! ಛೆ!! ಹೊಸ ಆಗಸ ಗೋಣಿ ಒಗೆದ" ಎಂದು ಇರಬೇಕು ಎನ್ನುವೆವು. ಇದೇನು ಪ್ರಮಾದ? ಇನ್ನೂ ಹಾಗೆ ನೋಡಿದರೆ, ಅಶ್ವತ್ಥಾಮನು ಚಿರಜೀವಿಯಾಗುವುದಕ್ಕೆ ಭಾರತದಲ್ಲಿ ಭೀಷ್ಮದ್ರೋಣರಿಗಿಂತಲೂ ಹೆಚ್ಚಾಗಿ ತೋರಿಸಿದ ಅಪೂರ್ವಸಾಹಸವೇನು ಎನ್ನಿಸುತ್ತದೆ. ಅವನು ಚಿರಂಜೀವಿಯಾಗಿದ್ದು ಇದುವರೆಗೆ ನಾವು ಅವನಿಂದ ಮಾಡಿಸಿಕೊಂಡಿರುವ ಉಪಯೋಗತಾನೇ ಏನು? ಕೃಷ್ಣ ಸತ್ತುಹೋದನೆಂದು ಅವನ ಹೆಸರನ್ನು ಎತ್ತದಿರುವ ಭಾರತೀಯನು ಯಾರಾದರೂ ಇದ್ದಾನೆಯೇ? ಪ್ರಾಯಶಃ ಕೌರವಪಕ್ಷದ ಕೆಲವರಿಗೆ ಹೊರತು ಮಿಕ್ಕ ಯಾರಿಗೆ ಕೃಷ್ಣಸಾಯಲಿ ಎನ್ನಿಸುತ್ತದೆ? ಅಂಥವನನ್ನು ಪುರಾಣಕರ್ತನೇ ಒಬ್ಬ ಬೇಡನಿಂದ ಕೊಲ್ಲಿಸಿ ದುರ್ಮರಣಕ್ಕೆ ಈಡುಮಾಡಲಿಲ್ಲವೇ? ಒಂದೊಂದು ಸಾರಿ, ಅಶ್ವತ್ಥಾಮನು ದ್ರೌಪದಿಯ ಮಕ್ಕಳನ್ನು ಕೊಂದ ಪಾಪಕ್ಕಾಗಿ, ದುರ್ಯೋಧ

---

*ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವು ೨೦-೧೨-೧೯೨೯ರಲ್ಲಿ ನಡೆಸಿದ ವಾರ್ಷಿಕೋತ್ಸವ.

ನನೂ ಹೇಸಿದ ಪಾಪಕ್ಕಾಗಿ, ತಕ್ಕ ಶಿಕ್ಷೆ ಪಡೆಯಲಿಲ್ಲವೆನಿಸುತ್ತದೆ. ಇಂಥವನ ಚಿರಜೀವಿತ್ವದಿಂದ ಅವನಿಗೇನು ಸ್ವರ್ಗಸುಖವೇ? ನಮಗೆ ತಾನೇ—ಅಭ್ಯಂಜನದ ದಿವಸ ಎಣ್ಣೆಯಲ್ಲಿ ಅದ್ದಿ ತೊಡೆಯಮೇಲೆ ಕೂರಿಸಿಕೊಳ್ಳುವುದಕ್ಕಿಂತ—ಏನು ಉಪಯೋಗವೋ ಗೊತ್ತಾಗುವುದಿಲ್ಲ. ಅಮೃತವನ್ನು ಕುಡಿದ ವೇದದೇವತೆಗಳು ಎಷ್ಟು ಜನ ಪುರಾಣ ಕಾಲಕ್ಕೇ ಸತ್ತುಹೋಗಲಿಲ್ಲ? ಅವರನ್ನು ನೆನಸಿಕೊಂಡು ಅತ್ತವರು ಯಾರು? ಈಗಿನ ಕಾಲದಲ್ಲಿ ನಮ್ಮ ಭಾಗಕ್ಕೆ ಯಾವ ದೇವತೆಗಳೂ ವೀರಶೂರರೂ ಇರುವಂತಿಲ್ಲ! ನಮಗೆ ಯಾವ ದೇವರಲ್ಲಿ ಯಾವ ಶೂರರಲ್ಲಿ, ವೀರಶ್ರದ್ಧೆಯಿದೆ? ಈ ಚಿರಜೀವಿಹನನ ದೋಷವು "ಈಗಿನ ಕಾಲದ ಹುಡುಗರು ಕ್ರಾಪು ಬಿಡಿಸಿಕೊಂಡು ಕೆಟ್ಟುಹೋದರು!" ಎಂದು ವೈದಿಕರು ಆಕ್ಷೇಪಿಸುವ ಹಾಗೆಂದು ತೋರುತ್ತದೆ. ಪುರಾಣದ ಚಿರಂಜೀವಿಗಳ ಪಟ್ಟಿಯು ಸ್ವಲ್ಪ ಮೋಟಾದರೆ ಬಂದ ಕುಂದೇನು? ಅಲ್ಲದೆ ಬದುಕಿ ಸತ್ತವರೂ ಉಂಟು, ಸತ್ತು ಬದುಕಿದವರೂ ಉಂಟು.

ಮ॥ ಶ್ರೀಕಂಠಯ್ಯನವರು ಈಗಿನ ಕನ್ನಡ ಆಚಾರ್ಯ ಪುರುಷರಲ್ಲಿ ಒಬ್ಬರು. ಈ ಗ್ರಂಥವನ್ನು ಬರೆದವರು ಅವರು ಎಂದಮೇಲಾದರೂ ಸ್ವಲ್ಪ ತಾಳ್ಮೆ ಬೇಡವೇ? ಕಾವ್ಯವಿಮರ್ಶೆಗೆ ಯಾರನ್ನು ಯಾರೂ ಅಡ್ಡಿ ಮಾಡಲಾರರು; ಆದರೆ ಅದರಲ್ಲಿಯೂ ದೊಡ್ಡದು, ಪೂಜ್ಯ, ಪವಿತ್ರ ಎಂಬ ಭಾವವಿಲ್ಲದೆ, ಮೂಲ ಹೇಗಿದೆ, ಭಾಷಾಂತರಕರಣದ ಕಷ್ಟ ಸುಖಗಳೇನು, ಹಳಗನ್ನಡವನ್ನೇಕೆ ಬರೆದರು, ಗದ್ಯದಲ್ಲೇಕೆ ಬರೆಯಲಿಲ್ಲ, ಹೊಸಛಂದಸ್ಸನ್ನೇಕೆ ಅವಲಂಬಿಸಿದರು, ಅಶ್ವತ್ಥಾಮನನ್ನೇಕೆ ಕೊಂದರು ಇದು ಸಾಹಿತ್ಯ ದೃಷ್ಟಿಯಿಂದ ಲಾಭವೇ ನಷ್ಟವೇ, ಎಂಬುದನ್ನು ವಿಚಾರ ಮಾಡದೆ ವೆಂಕ ಸೀನ ನಾಣ ಮಹಾಶಯರೂ, ಇಲ್ಲದ ಸಲ್ಲದ ಉದ್ದೇಶಗಳನ್ನು ಆರೋಪಿಸಿ ಮನಬಂದಂತೆ ಮಾತನಾಡುವುದು ಸೂಕ್ತವಾಗಿ ತೋರುವುದಿಲ್ಲ.

೪೧—೧೯೩೦.

---

## ಕೀರ್ತನೆಗಳಲ್ಲಿ ಸಾಹಿತ್ಯಗುಣ

....ಕೀರ್ತನೆಗಳಲ್ಲಿ ಭಕ್ತಿಯೇ ಆತ್ಮ, ರಾಗವೇ ಪ್ರಾಣ. ಕೆಲವು ಆಧುನಿಕ ರೂಪಕಗಳು ಶುದ್ಧ ದೃಶ್ಯಗಳಾಗಿರುವಂತೆ ಇವು ಶುದ್ಧ ಶ್ರಾವ್ಯಗಳು. ಇವುಗಳ ಮನೋಹರತ್ವವು ಹೇಳುವವರ ಮತ್ತು ಕೇಳುವವರ ಭಕ್ತಿಶ್ರದ್ಧೆಗಳು, ಮನೋಧರ್ಮಸಂಸ್ಕಾರಗಳು, ಸಂಗೀತಜ್ಞಾನ ಶಾರೀರ ಸೌಖ್ಯಗಳು, ಸಲಕರಣ ಸಂದರ್ಭ ಸನ್ನಿವೇಶಗಳು ಮುಂತಾದವುಗಳ ಮೇಲೆ ಹೋಗುತ್ತದೆ. ಇವುಗಳಿಂದೆಲ್ಲಾ ಒಂದು ಭಾಗವನ್ನು ಬೇರ್ಪಡಿಸಿ ಅದನ್ನು ಅವುಗಳ ಶಬ್ದರಸಾತ್ಮಕವಾದ ಶುದ್ಧ ಸಾಹಿತ್ಯವೆಂದು ಬೆಲೆ ಕಟ್ಟುವುದು ಅನ್ಯಾಯವಾದೀತು; ಹಾಗೆ ನೋಡಿದರೆ ಇವುಗಳಲ್ಲಿ ಅನೇಕವು ನೀರಸವಾಗಿ ಕಾಣುತ್ತವೆ; ಕೀರ್ತನೆಗಳ ಮಾತಿರಲಿ, ಜೈಮಿನಿಭಾರತ ಮುಂತಾದ ಎಷ್ಟೋ ಗ್ರಂಥಗಳಲ್ಲಿ ಬರುವ ಸ್ತೋತ್ರ ಭಾಗಗಳೂ ಹಾಗೇ ಕಾಣುತ್ತವೆ. ಕೀರ್ತನೆಗಳಲ್ಲಿ ಕಾವ್ಯಗುಣ ಗೀತಗುಣಗಳೆರಡೂ ಸೇರಿದರೆ ಸಂತೋಷ; ಆಗ ರತ್ನವನ್ನು ಕುಂದಣದಲ್ಲಿಟ್ಟಂತೆ ಆಗುತ್ತದೆ; ಹಾಗಲ್ಲದೆ ಒಂದು ಒಳ್ಳೆಯ ಗುಣವಾದರೂ ಇದ್ದರೆ ಅದಕ್ಕೆ ತಕ್ಕ ಬೆಲೆ ಅದಕ್ಕೆ ಇದ್ದೇ ಇದೆ; ಬಂಗಾರದಲ್ಲಿ ಇಮಿಟೇರ್ಷ ಹರಳುಗಳನ್ನಿಟ್ಟು ಒಡವೆ ಮಾಡುವುದಿಲ್ಲವೇ? ಹಾಗೇ ಬಂಗಾರವೂ ಹೆಚ್ಚು ಕಡಿಮೆಯ ಬಣ್ಣದ್ದಿರಬಹುದು; ಅದರಲ್ಲಿ ಒಳ್ಳೆಯ ಕಲ್ಲನ್ನಿಟ್ಟರೆ ಅದಕ್ಕೆ ಬೆಲೆ ಕಡಿಮೆಯಾಗುತ್ತದೆಯೇ? ಜ್ಞಾನವು ಕರ್ಮಗಳನ್ನೆಲ್ಲಾ ದಹಿಸಿ ಬೂದಿಮಾಡುವುದಂತೆ; ಹಾಗೇ ಭಕ್ತಿಯು ಕಸವನ್ನು ರಸವತ್ತಾಗಿ ಮಾಡಬಲ್ಲುದು. ಗೊಬ್ಬರವು ಗಿಡದಲ್ಲಿ ಸೇರಿ ಸುಂದರವಾದ ಹೂವುಗಳನ್ನೂ ಮಧುರವಾದ ಹಣ್ಣುಗಳನ್ನೂ ಬಿಡಿಸುತ್ತಿರುವ ಸ್ಥಿತಿಯಲ್ಲಿ ಅದನ್ನು ಗೊಬ್ಬರವೆಂದು ಅಲ್ಲಗಳೆಯಬಹುದೇ? ಹಾಗೇ ಕೀರ್ತನೆಗಳು ದುಃಖವನ್ನು ತಳ್ಳಿ ಸುಖವನ್ನು ತಂದು ಜನಜೀವನವನ್ನು ಉತ್ತಮಗೊಳಿಸುತ್ತಿದ್ದರೆ, ಅವುಗಳಲ್ಲಿ ಕಾವ್ಯಗುಣವನ್ನೂ, ಪದಮೈತ್ರಿಯನ್ನೂ ಹುಡುಕುತ್ತ ಅವುಗಳನ್ನು ಅಲ್ಲಗಳೆಯುವುದು ವಿವೇಕವೇ?

೪೦–೧೯೩೯

# ಕನ್ನಡಮಾತು ಒಂದಾಗಬೇಕು, ಶುದ್ಧವಾಗಿರಬೇಕು

ಕನ್ನಡಮಾತು ಒಂದಾಗಬೇಕು, ಶುದ್ಧವಾಗಿರಬೇಕು, ಎಂದು ಈಗ ಕನ್ನಡಿಗರೆಲ್ಲರೂ ಯೋಚಿಸುತ್ತಿದ್ದಾರಷ್ಟೆ. ಈ ಸಮಸ್ಯೆಯನ್ನು ಸ್ಥೂಲವಾಗಿಯಾದರೂ ಮಹಾಜನರ ಮುಂದೆ ಇಡಬೇಕೆಂದು "ಕನ್ನಡ ಮಾತಿನ ಮಾದರಿ"ಗಳನ್ನು ಪ್ರದರ್ಶಿಸಿತು. ಏಳನೆಯ ಶತಮಾನದಿಂದ ಹನ್ನೊಂದನೆಯ ಶತಮಾನದವರೆಗೆ ಕನ್ನಡ ಶಾಸನಗಳಲ್ಲಿ ಕಂಡ ಕೆಲವು ಗದ್ಯಮಾದರಿಗಳೂ ಹನ್ನೆರಡನೆಯ ಶತಮಾನಕ್ಕೆ ಬಸವೇಶ್ವರರ ಕೆಲವು ವಚನಗಳೂ ಆಧುನಿಕ ಪ್ರಾಂತಭೇದಗಳನ್ನು ಸೂಚಿಸುವುದಕ್ಕೆ "ಒಕ್ಕಲಿಗರೂ ಒಕ್ಕಲುತನವೂ'' ಎಂಬ ಪತ್ರಿಕೆಯಿಂದ ಮತ್ತು "ಟೊಳ್ಳು ಗಟ್ಟಿ"ಯಿಂದ ಕೆಲವು ವಾಕ್ಯಗಳೂ, ಓದಲ್ಪಟ್ಟುವು. ಸಾಮಾನ್ಯವಾಗಿ ಪದ್ಯಕ್ಕಿಂತಲೂ ಗದ್ಯವೂ, ಪುಸ್ತಕದ ಗದ್ಯಕ್ಕಿಂತ ಶಾಸನಗಳ ಗದ್ಯವೂ, ಆಡುವ ಮಾತಿಗೆ ಹತ್ತಿರವಿರುತ್ತದೆ; ಆದ್ದರಿಂದ ಇಂಥ ಗದ್ಯಮಾದರಿಗಳನ್ನೇ ಆರಿಸಿಕೊಂಡಿತ್ತು. ಭಾಷಾಶುದ್ಧಿ ಏಕೀಕರಣಗಳನ್ನು ಕುರಿತು ಯೋಚಿಸುವವರು ಪುಸ್ತಕದ ಮಾತನ್ನು ಗೌರವಿಸಿ ಆಡುವ ಮಾತನ್ನು ಅಲಕ್ಷಿಸಬಾರದು. ಆಡುವ ಮಾತು ಹೊಳೆಯ ನೀರಿನಂತೆ ಸಜೀವವಾಗಿ ಹರಿಯತಕ್ಕದ್ದು. (ಅದಕ್ಕೆ ನಮ್ಮ ಅನುಕೂಲಕ್ಕಾಗಿ, ಬೇಕಾದರೆ, ಅಲ್ಲಲ್ಲಿ ಕಟ್ಟೆಗಳನ್ನೂ ಸೋಪಾನಗಳನ್ನೂ ಕಟ್ಟಿಕೊಳ್ಳಬಹುದು.) ಆದ್ದರಿಂದ ಅದಕ್ಕೆ, ನ್ಯಾಯವಾಗಿ, ಎಂದೋ ನೀರು ಇಂಗಿಹೋದ ಕೆರೆಯ ಅಂಗಳಕ್ಕೂ ನಿಂತ ನೀರಿಗೂ ಬರುವ ಪ್ರಾಶಸ್ತ್ಯಕ್ಕಿಂತಲೂ ಹೆಚ್ಚು ಪ್ರಾಶಸ್ತ್ಯ ಬರಬೇಕು. ಸ್ವರ್ಗಸ್ಥರಾದವರ ಹೆಸರು ನಿಲ್ಲುವಂತೆ ಪ್ರತಿಮಾಗೃಹಗಳನ್ನು ಕಟ್ಟಿಸಿ, ಮುದುಕರಿಗೆ ಮುಪ್ಪಿನ ವೇತನಗಳನ್ನು ಕೊಡಿಸಿ, ಬೆಳೆಯುತ್ತಿರುವ ಮಕ್ಕಳನ್ನು ಅಲಕ್ಷ್ಯಮಾಡೋಣವೇ? ಇವೊತ್ತು ಆಡುವ ಮಾತು ಬರೆಯುವ ಮಾತು ಎಂದೋ ಬರೆದ ವ್ಯಾಕರಣವನ್ನು ಅನುಸರಿಸಬೇಕೆಂದು ನಿರ್ಬಂಧಪಡಿಸುವುದು ಯುಕ್ತವಾಗಿ ತೋರುವುದಿಲ್ಲ. ಆ ನಿಯಮವು ಮೃತಭಾಷೆಗಿರಲಿ; ಏಕೆಂದರೆ ಕಲ್ಲಿನಿಂದ ಕಲ್ಲನ್ನು ಉಜ್ಜಿ ನಯಮಾಡುವ ಹಾಗೆ ಆ ಮೃತಭಾಷೆಗೆ ಆ ಮೃತ ವ್ಯಾಕರಣದ ಸಹಾಯವೇ ಬೇಕು. ಆ ಭಾಷೆಯನ್ನು

ಹೊಸದಾಗಿ ಕಲಿಯುವವರಿಗೂ ಅದು ಆವಶ್ಯಕ; ಬದುಕಿರುವ ಮಾತಿಗೆ ನಮ್ಮ ನಮ್ಮ ಜೀವ ಒಡವೆರೆದು ಬರುವಂತೆ, ವ್ಯಾಕರಣವೂ ಜೊತೆಯಲ್ಲಿಯೇ ಬರುತ್ತದೆ. ಇನ್ನೂ ನಾವು ಬದುಕಿರುವಾಗಲೇ, ನಮ್ಮ ಪಿಶಾಚಿಯೊಂದು ಹುಟ್ಟಿಕೊಂಡು ನಮ್ಮನ್ನು ಹೆದರಿಸುವಂತೆ, ಕನ್ನಡ ವ್ಯಾಕರಣವೆಂಬುದು ಬರೆಯಬೇಕೆನ್ನುವ ಅನೇಕ ಕನ್ನಡಿಗರನ್ನು ಬೆದರಿಸುತ್ತಿದೆ. ಅಯಾ ಮಾತಿನ ಮಕ್ಕಳು ಮಾಡುವ "ತಪ್ಪುಗಳು'', ಅವರ "ಸೋಮಾರಿತನ" ಇವೇ ಮಾತಿನ ಚರಿತ್ರೆಯಲ್ಲಿ ಮೆಟ್ಟಲುಗಳೆಂದು ಭಾಷಾಶಾಸ್ತ್ರಜ್ಞರು ಹೇಳುತ್ತಾರೆ. ಕನ್ನಡಿಗರು ಆಡುವ ಕನ್ನಡಮಾತನ್ನು ತಪ್ಪೆಂದು ಹೇಳುವುದು ಹೇಗೆ? ಹಿಂದಿನದೇ ಸರಿಯೆಂದರೆ ಎಷ್ಟು ಹಿಂದಿನದು ಸರಿ? ಮತ್ತು ಏಕೆ? ಇದು ಉಗ್ರಪಕ್ಷದ ವಾದವಿರಬಹುದು; ಆದರೆ ಈ ಕಾಲವು ಶಾಸ್ತ್ರಯುಗ, ಸ್ವಾತಂತ್ರ್ಯ ಯುಗ; ಆದ್ದರಿಂದ ಭಾಷೆಯಲ್ಲಿಯೂ, ವಿಚಾರಮಾಡುತ್ತ ಮುಂದುವರಿಯಬೇಕು. ರಾಜ್ಯನೀತಿಯನ್ನನುಸರಿಸಿ, ಪ್ರಜಾಸಾಮಾನ್ಯದ ಹಕ್ಕು ಬಾಧ್ಯತೆಗಳನ್ನು—ಅಷ್ಟಾಗಲಿ ಇಷ್ಟಾಗಲಿ—ಒಪ್ಪಿಕೊಳ್ಳುತ್ತಿರುವಂತೆ ಭಾಷಾಶುದ್ಧಿಗಾಗಿ ಹೊಡೆದಾಡುವವರು ಭಾಷಾಶಾಸ್ತ್ರತತ್ವವನ್ನೂ ಗಣನೆಗೆ ತಂದುಕೊಂಡು, ಆಡುವ ಮಾತಿಗೆ ಶುದ್ಧಿಯನ್ನೂ ಪ್ರಾಬಲ್ಯವನ್ನೂ ಒಪ್ಪಿಕೊಳ್ಳುವ ಕಾಲವು ಬರಬೇಕೆಂದು ತೋರುತ್ತದೆ.

ಈಗಾಗಲೇ ಹಲವು ಕಾರಣಗಳಿಂದ ವ್ಯಾಕರಣದ ವ್ಯಾಸಂಗವು ಹಿಂದೆ ಬಿದ್ದಿದೆ. ಪುಸ್ತಕಗಳು ವ್ಯಾವಹಾರಿಕ ಭಾಷೆಯಲ್ಲಿ ಬರೆಯಲ್ಪಡುತ್ತಿವೆ. ಎಷ್ಟೋ ಪತ್ರಿಕೆಗಳು ಇಂಥ ಮಾತಿನಲ್ಲಿಯೇ ಒಂದೆರಡು ಪುಟಗಳನ್ನು ಕೊಡುತ್ತಿವೆ; ಅದನ್ನು ಪಾಠಕರೂ ಓದಿ ಸಂತೋಷಪಡುತ್ತಿದ್ದಾರೆ. ಈ ಪ್ರವಾಹವನ್ನು ತಡೆಯುವುದು ಎಷ್ಟು ಸಾಧ್ಯವೋ, ತಡೆಯುವುದರಿಂದ ಏನು ಪ್ರಯೋಜನವೋ ಯೋಚಿಸಬೇಕಾಗಿದೆ. ಸಾಹಿತ್ಯ ದೃಷ್ಟಿಯಿಂದ ನೋಡಿದರೆ ಭಾವ ಶೈಲಿ ವಿಷಯ ಅಭಿಪ್ರಾಯ ಇವುಗಳು ಮುಖ್ಯವೇ ಹೊರತು 'ಶುದ್ಧಿ'ಯನ್ನು ತರಬಹುದಾದ ಹಲ ಕೆಲವು ವ್ಯಾಕರಣ ರೂಪಗಳು ಮುಖ್ಯವಲ್ಲ.

ಭಾಷೆಯ ಏಕೀಕರಣವು ಈಗಿನ ಸ್ಥಿತಿಯಲ್ಲಿ ನೋಡಿದರೆ ಅಸಾಧ್ಯ

ವಲ್ಲವೆಂದು ತೋರುತ್ತದೆ. ಒಂದೊಂದು ವೇಳೆ ಏಕೀಕರಣಮಾಡುವುದಕ್ಕೆ ಭೇದವೆಲ್ಲಿದೆ?—ಎನ್ನಿಸುತ್ತದೆ. ಮೈಸೂರಿಗೂ ಮಂಗಳೂರಿಗೂ ಮಾತಿನಲ್ಲಿ ಭೇದವೆಣಿಸುವಷ್ಟು ವ್ಯತ್ಯಾಸವಿಲ್ಲ. ಉತ್ತರ ಕರ್ಣಾಟಕದ ತುದಿಯಲ್ಲಿ ಆಡುವ ಕನ್ನಡಕ್ಕೂ ಮೈಸೂರಿನ ಕನ್ನಡಕ್ಕೂ ವ್ಯತ್ಯಾಸವಿದೆ, ನಿಜ. ಆದರೆ ಇವುಗಳನ್ನು ಕನ್ನಡ ತೆಲುಗುಗಳಂತೆ ಬೇರೆಬೇರೆ ಎಂದು ಹೇಳುವಷ್ಟು ಪರಸ್ಪರ ವ್ಯತ್ಯಾಸವಿಲ್ಲ—ಅವರು ಆಡಿದ ಮಾತು ನಮಗೆ ತಿಳಿಯದಷ್ಟು ಭೇದವಿಲ್ಲ. ಈ ಅಲ್ಪ ಸ್ವಲ್ಪ ಭೇದವಿದ್ದರೆ ಆಗುವುದೇನು ನಷ್ಟ? ಅದು ಹೋದರೆ ಬರುವುದೇನು ಲಾಭ? ಒಂದು ಕುಟುಂಬದಲ್ಲೇ ಒಬ್ಬರಿಗೊಬ್ಬರು ಎಷ್ಟೋ ಅಂಶಗಳಲ್ಲಿ ಬೇರೆಬೇರೆಯಾಗಿರುತ್ತಾರೆ. ಇದರಿಂದ ಅವರು ಅನ್ಯರಾಗುತ್ತಾರೇನು? ಮಿತ್ರಭಾವದಲ್ಲಿ ಎರಡು ಪಕ್ಕಕ್ಕೂ ಎಷ್ಟು ಅಂಶಗಳು ಒಂದೇ ಆಗಿವೆ ಎಂಬುದನ್ನು ನೋಡಿಕೊಂಡು ಒಂದಾಗಬೇಕೇ ಹೊರತು, ಇರಬಹುದಾದ ಒಂದೆರಡು ಸಣ್ಣ ಭೇದಗಳನ್ನೇ ಮುಂದಿಟ್ಟು ಒತ್ತುತ್ತ ಹೋಗಬಾರದು. ಇದರಮೇಲೆ, ಯಾವ ಮಾತನ್ನು ತೆಗೆದುಕೊಳ್ಳಲಿ, ಅದು ವ್ಯವಹಾರದಲ್ಲಿರುವ ಪ್ರದೇಶವು ವಿಸ್ತಾರವಾಗಿದ್ದರೆ, ವಿಸ್ತಾರನಿಮಿತ್ತಕವಾದ ವ್ಯತ್ಯಾಸವು ಎಂದಿಗೂ ಇದ್ದೇ ಇರುತ್ತದೆ. ಕಬ್ಬಿನ ತುಂಡು ಒಂದು ಬೆಟ್ಟುದ್ದ ಇದ್ದರೆ ಅದರ ರುಚಿ ಉದ್ದಕ್ಕೂ ಒಂದೇ ಆಗಿರುತ್ತದೆ; ಅದೇ ಒಂದು ಜಲ್ಲೆಯಾಗಿದ್ದರೆ ಬುಡ ಮಧ್ಯ ತುದಿಗಳ ಆಕಾರ ರುಚಿ ಸ್ವರೂಪಗಳೇ ಬೇರೆಬೇರೆಯಾಗುತ್ತವೆ. ಹೀಗಿರಬಹುದಾದ ಅಲ್ಪ ಸ್ವಲ್ಪ ವ್ಯತ್ಯಾಸಗಳೂ ಈಗ ಗೋಚರವಾಗುವುದು ನಿಂತು ಹೋಗಿದೆ. ಇದಕ್ಕೆ ಹೆಚ್ಚು ಬಳಕೆಯೇ ಕಾರಣ. ಭಾಷೆಯು ಏಕೀಕರಣದಿಂದ ಜನರಲ್ಲಿ ಬಳಕೆ ಸ್ನೇಹಗಳು ಹೆಚ್ಚಾಗುವುವೆಂದು ಹೇಳುವುದಕ್ಕಿಂತಲೂ, ಜನರಲ್ಲಿ ಬಳಕೆ ಸ್ನೇಹಗಳಿಂದ ಭಾಷೆಯು ಏಕೀಕರಣವು ಹೆಚ್ಚಾಗುವುದೆಂದು ಹೇಳುವುದು ಸರಿಯೆಂದು ತೋರುತ್ತದೆ.

೪೧–೧೯೩೦

---

## ಗಾನವಿಶಾರದ ಬಿ. ಕೃಷ್ಣಪ್ಪನವರ ಸಂಗೀತ

ಕರ್ಣಾಟಕದಲ್ಲಿ " ಗಾನ ವಿಶಾರದ " ರ ಗಾನವನ್ನು ಕೇಳದವರು ಕೇಳಿ ಅರಿಯದವರು, ಅಪರೂಪ; ಅವರ ಸಂಗೀತವು ತುಂಬು ಸಂಗೀತ, ದೊಡ್ಡ ಸಂಗೀತ, ವಿಸ್ತಾರವಾದ ಸಂಗೀತ, ಘನವಾದ ಸಂಗೀತ. ಕೆಲವರ ಗಾನ ಎಳೆಯ ತಳಿರಿನ ಹಾಗೆ, ಎಸಳು ಹೂವಿನ ಹಾಗೆ, ಹೊಂಬಣ್ಣದ ಹಣ್ಣಿನ ಹಾಗೆ. ಮ|| ಕೃಷ್ಣಪ್ಪನವರದು ಇವೆಲ್ಲವನ್ನೂ ಒಳಕೊಂಡ ದೊಡ್ಡ ಕಲ್ಪವೃಕ್ಷ! ಅವರ ಗಾನವೈಭವದಲ್ಲಿ ಸರ್ವಾವಯವ ಸಾಮಂಜಸ್ಯ ಮಾಧುರ್ಯಗಳುಳ್ಳ ಅಗಾಧವಾದ ಉನ್ನತ ಮೂರ್ತಿಯೂ ಅದರಲ್ಲಿ ರೆಪ್ಪೆಯ ಕೂದಲನ್ನು ಬಿಡಿಸುವಂಥ ಸೂಕ್ಷ್ಮ ಕೆಲಸಗಳೂ ಏಕಕಾಲದಲ್ಲಿ ಗೋಚರಿಸುತ್ತವೆ. ಆ ದಿನ ಅವರ ಗಾನವು ಚಚ್ಚೌಕವಾದ "ಕಛೇರಿ" ಯಾಗುವುದಕ್ಕೆ ಅವಕಾಶವಿರಲಿಲ್ಲ. ಏಕೆಂದರೆ ಕನ್ನಡಸಾಹಿತ್ಯದ ದೃಷ್ಟಿಯಿಂದ ಅದಕ್ಕೆ ಒಂದು ಅಡ್ಡಗಟ್ಟು ಬಂದಿತ್ತು; ಕೇವಲ ದಾಸರ ಕೀರ್ತನೆಗಳನ್ನೇ ಹಾಡಬೇಕೆಂಬುದು ಸ್ವಾಗತ ಮಂಡಲಿಯವರ ಅಪೇಕ್ಷೆಯಾಗಿತ್ತು. ದಾಸರ ಕೀರ್ತನೆಗಳನ್ನು—ತ್ಯಾಗಯ್ಯನವರ ಕೆಲವು ಕೀರ್ತನೆಗಳಂತೆ—ಘನವಾಗಿ, ವಿಸ್ತಾರವಾಗಿ, ಹಾಡುವುದೆಂದರೆ, ಎಲೆ ಅಡಕೆಯ ಚೀಲದಲ್ಲಿ ಸವರನ್ನುಗಳನ್ನು ತುಂಬಿ ಅದನ್ನು ದೊಡ್ಡ ಬಂಗಾರದ ಥೈಲಿಯಾಗಿ ಮಾಡುವಂಥ ಕೆಲಸ. ನಮ್ಮ ಅನುಭವದಲ್ಲಿ ಈ ಅಸಾಧ್ಯಕಾರ್ಯಸಾಧನೆಯನ್ನು ಮಾಡಬಲ್ಲವರು ಮ|| ಕೃಷ್ಣಪ್ಪನವರೊಬ್ಬರೆ! ಸಂಗೀತವು ಅಂದು ಸಾಹಿತ್ಯಕ್ಕೆ ಮಾಡಿದ ಸಹಾಯವು ಸಾಮಾನ್ಯವಲ್ಲ.

೪೪—೧೯೩೦

---

## ಈಗಿನ ಯುವಕ ವಿದ್ಯಾರ್ಥಿಗಳು

ಸಾಹಿತ್ಯಲೇಖನ, ನಾಟಕಾಭಿನಯ, ಕಾರ್ಯನಿರ್ವಾಹ, ಇವು ಯಾವುದನ್ನು ನೋಡಿದರೂ, ಈಗಿನ ಯುವಕ ವಿದ್ಯಾರ್ಥಿಗಳಿಂದ ಎಷ್ಟು ಮಟ್ಟಿನ ಮತ್ತು ಎಂಥೆಂಥ ಕೆಲಸ ನಡೆಯುತ್ತಿರುವುದೆಂಬುದು ಆಶ್ಚರ್ಯ

ವಾಗುವಂತಿದೆ. ಕಾಲೇಜಿನ ಉಚ್ಚ ತರಗತಿಯ ವಿದ್ಯಾರ್ಥಿಗಳು, ಬಿ.ಎ., ಎಂ.ಎ. ಪರೀಕ್ಷೆಗಳನ್ನು ಕೊಟ್ಟವರು—ಸಮ್ಮೇಳನ ಮಂದಿರದ ಬಾಗಿಲು ಕಾಯುವುದು, ಅಡಿಗೆ ಮನೆಯಲ್ಲಿ ತರ್ಕಾರಿ ಹೆಚ್ಚುವುದು, ಈ ಕೆಲಸಗಳಿಂದ ಮೊದಲು ಮಾಡಿಕೊಂಡು, ಕವಿತೆಗಳನ್ನೂ ಉಪನ್ಯಾಸಗಳನ್ನೂ ಬರೆದು ಓದುವುದು, ನಾಟಕಗಳನ್ನು ರಚಿಸಿ ವೇಷ ಹಾಕಿ ಆಡಿ ತೋರಿಸುವುದರ ವರೆಗೆ, ಯಾವ ಕೆಲಸವನ್ನೂ ಕೀಳು ಮೇಲೆಂದು ಭಾವಿಸದೆ, ಯಾವ ಕೆಲಸವೂ ಬಾರದೆನ್ನದೆ, ಆಯಾಸವೆನ್ನದೆ, ಬೇಸರಪಡದೆ—ಮಾಡಿದ ಕೆಲಸವನ್ನು ನೋಡಿದರೆ, ನಮ್ಮಲ್ಲಿ ಈಗ ಯಾವ ಸಾರ್ವಜನಿಕ ಮಹಾಕಾರ್ಯವಾದರೂ ತರುಣರ ಕೈಗೆ ಬಿದ್ದರೆ ಗೆದ್ದುಹೋಗಬಹುದೆನ್ನಿಸುತ್ತದೆ.

೪೪—೧೯೩೦.

---

## ಕನ್ನಡದ ಮನೆಯಲ್ಲಿ ಕನ್ನಡಕ್ಕೆ ಸ್ಥಾನ

ಕನ್ನಡದ ಮನೆಯಲ್ಲಿ ಕನ್ನಡಕ್ಕೆ ಸ್ಥಾನವಾವುದಿರಬೇಕೆಂಬ ವಿಷಯದಲ್ಲಿ ಇನ್ನೂ ಅನೇಕರಿಗೆ ಶಂಕೆಗಳೂ ಸಂದೇಹಗಳೂ ಭಿನ್ನಾಭಿಪ್ರಾಯಗಳೂ ಇವೆ. ಇದು ಆಶ್ಚರ್ಯ. "ಶ್ರೀ" ಯವರೇ ಹಿಂದೆ ಒಂದು ಸಂದರ್ಭದಲ್ಲಿ ಅಪ್ಪಣೆ ಕೊಡಿಸಿದಂತೆ ಕನ್ನಡದ ಮನೆಯಲ್ಲಿ ಕನ್ನಡವು ಯಜಮಾನಿಯಾಗಿರಬೇಕು—ಮಿಕ್ಕಿದ್ದು ಹಕ್ಕಿದ್ದನ್ನು ತಿಂದುಕೊಂಡು ಚಾಕರಿಮಾಡಿಕೊಂಡಿರುವ ಕೀಳು ಜಾತಿಯ ಪರಿಚಾರಿಕೆಯಂತಿರಬಾರದು. ಧೃಷ್ಟರಾದ ನೆಂಟರಿಷ್ಟರು ಮನೆಗೆ ಬಂದು ತುಂಬಿಕೊಂಡರೆ ಸೇವಾಶೀಲಳಾದ ಸಾತ್ವಿಕಸತಿಗೆ ಅನೇಕ ವೇಳೆ ಆಗುವುದು ಹೀಗೆಯೇ. ಯಜಮಾನಿ ಗಟ್ಟಿಯಾಗಿದ್ದರೆ ತಾನೇ ಯಜಮಾನ, ಮಕ್ಕಳು ನೆಂಟರು ಇಷ್ಟರು, ಹೋಗುವವರು ಬರುವವರು? ಅವಳಿಗೆ ಗೌರವವಿದ್ದರೆ ತಾನೇ ಆಳು ಕಾಳು ಸುಖ ಸಂಭ್ರಮ? ಈ ತತ್ತ್ವವನ್ನು ನಮ್ಮ ಜನಕ್ಕಿಂತಲೂ ಮಿಕ್ಕ ಪ್ರಾಂತಗಳವರು ಹೆಚ್ಚಾಗಿ ಗ್ರಹಿಸಿದ್ದಾರೆ. —ಬಂಗಾಳಿ, ಮರಾಠಿ, ತೆಲುಗು ತಮಿಳು ಇತ್ಯಾದಿ. ಭಾಷಾಪ್ರಾಂತಗಳು ಏರ್ಪಟ್ಟು ಆ ಮೂಲಕ ಪ್ರಾಂತೀಯ ಭಾಷೆಗಳಿಗೆ ಪ್ರಧಾನಸ್ಥಾನ

ದೊರೆಯುವುದೇನೋ ಎಂಬ ಆಶೆ ಈಗ ದೂರವಾಗುತ್ತಿದೆ. ಆದರೂ ಆಯಾ ಮಾತನಾಡುವ ಜನರು ತಮ್ಮ ಜನತೆಗೆ ತಿಳಿವಳಿಕೆ ಕೊಡಲು ತಮ್ಮ ಮಾತೇ ಏಕಮಾತ್ರಸಾಧನವೆಂದು ಗ್ರಹಿಸುತ್ತಿದ್ದಾರೆ, ಒತ್ತಿ ಹೇಳುತ್ತಿದ್ದಾರೆ, ಅದಕ್ಕೆ ತಕ್ಕ ಸ್ಥಾನವನ್ನು ಕೊಡಬೇಕೆಂದು ಹೋರಾಡು ತ್ತಿದ್ದಾರೆ; ಇಂದು ಮತ್ತು ಮುಂದೆ ಇತರ ಭಾಷೆಗಳ ವ್ಯಾಸಂಗವೇನಿ ದ್ದರೂ ಅದು ಸ್ವಭಾಷೆಯನ್ನು ಪುಷ್ಟಿಗೊಳಿಸುವುದಕ್ಕೆ ಸಾಧನವಾಗಬೇಕೇ ಹೊರತು ತಾನೇ ಪ್ರಧಾನವಾಗಬಾರದು ; ಸ್ವಭಾಷೆಯೂ ಜನಸಾಮಾ ನ್ಯಕ್ಕೆ ಉಪಯೋಗವಾಗುವಂತೆ ಹೆಚ್ಚು ಸುಲಭವಾಗಬೇಕು—ಎಂದು ಸಾರುತ್ತಿದ್ದಾರೆ. ಈ ಸಂದರ್ಭದಲ್ಲಿ ಕಳೆದ ತಿಂಗಳು ತಿರುವಾಂಕೂರಿನ ದಿವಾನರವರು ಅಲ್ಲಿನ ಶಾಸನಸಭೆಯಲ್ಲಿ ಆಡಿದ ವಾಕ್ಯಗಳು ಜ್ಞಾಪಕಕ್ಕೆ ಬರುತ್ತವೆ. ಅವರು—ಮಿಕ್ಕಭಾಷೆ ಯಾವುದಿದ್ದರೂ ಎಷ್ಟೇ ಉಪಯುಕ್ತ ವಾಗಿದ್ದರೂ ದ್ವಿತೀಯ ಭಾಷೆಯಾಗಲರ್ಹವಲ್ಲವೆಂದೂ ತಿರುವಾಂಕೂರಿನ ವಿಶ್ವವಿದ್ಯಾನಿಲಯದಲ್ಲಿ ಪ್ರೌಢವ್ಯಾಸಂಗಕ್ಕೆ ಮಲಯಾಳ ತಮಿಳುಗಳೇ ಪ್ರಧಾನವಾಗಿರಬೇಕೆಂದೂ ತಮ್ಮ ಅಭಿಪ್ರಾಯವನ್ನು ಖಚಿತವಾಗಿ ತಿಳಿ ಸಿದರು. ಈಗ ಕೆಲವು ತಿಂಗಳಹಿಂದೆ ಸೇರಿದ ಭಾರತೀಯ ವಿಶ್ವವಿದ್ಯಾ ನಿಲಯದ ಸಮ್ಮೇಳನದಲ್ಲಿ ಸೆಂಟ್ರಲ್ ಕಾಲೇಜಿನ ಭೌತಶಾಸ್ತ್ರ ವಿಶಾರದ ರಾದ ಪ್ರೊ. ವೆಂಕಟರಾವ್ ತೆಲಂಗರು ಪ್ರೌಢ ತರಗತಿಗಳಲ್ಲಿಯೂ ದೇಶ ಭಾಷೆಯನ್ನೇ ಬೋಧನಭಾಷೆಯನ್ನಾಗಿ ಉಪಯೋಗಿಸಬೇಕೆಂಬ ಅರ್ಥಕ್ಕೆ ಒಂದು ನಿರ್ಣಯವನ್ನು ತಂದಿದ್ದು ಅದಕ್ಕೆ ಸಮ್ಮೇಳನದ ಸಹಾನುಭೂತಿ ದೊರೆತದ್ದು ಒಂದು ಪ್ರೋತ್ಸಾಹಕರವಾದ ಸಂಗತಿಯಾ ಗಿದೆ. ಇಂದು ಅಸಾಧ್ಯವಾಗಿ ಕಾಣುವುದು ನಾಳೆ ಸಾಧ್ಯವಾಗಿ ತೋರು ತ್ತದೆ, ನಾಡಿದ್ದು ಸತ್ಯವಾಗುತ್ತದೆ. ಅದಕ್ಕೆ ಬೇಕಾದದ್ದು, ಅಭಿಮಾನ, ಅಭಿಮಾನದಿಂದ ಬರುವ ಧನ, ಅಭಿಮಾನವಿಟ್ಟು ಕೆಲಸಮಾಡಬಲ್ಲ ಜನ.

೭೯-೧೯೩೯

---

# ಶ್ರೀ ಗೊಮ್ಮಟೇಶ್ವರಸ್ವಾಮಿ

........ಮತಧರ್ಮಗಳ ಹೆಸರಿನಲ್ಲಿ, ಶಾಂತಿ ಭಕ್ತಿ ಜ್ಞಾನ ವೈರಾಗ್ಯಗಳೇ ಉದ್ದೇಶ ಫಲಗಳಾಗಿ ಉಳ್ಳ ಮತ ಧರ್ಮಗಳ ಹೆಸರಿನಲ್ಲಿ, ಹಿಂದೆ ಎಲ್ಲಾ ದೇಶಗಳಲ್ಲಿಯೂ ವಾದ ವಿವಾದಗಳೂ ಕದನ ಕಾಳಗಗಳೂ ಕೊಲೆ ಕಡಿತಗಳೂ ಅಪಾರವಾಗಿ ನಡೆದುವು. ಆದರೆ ಈಗ ಮಳೆಗಾಲದ ಹೊಳೆ ತಿಳಿಯಾಗಿ, ಅಮೃತವಾಗಿ, ಪಾನಯೋಗ್ಯವಾಗುವಂತೆ, ನಾಗರಿಕತೆಯ ಫಲವಾಗಿ, ಶಾಸ್ತ್ರೀಯವಾದ ಸತ್ಯಾನ್ವೇಷಿಯಾದ ಪರಿಶೀಲನದ ಫಲವಾಗಿ, ಸರ್ವಧರ್ಮ ಸಮನ್ವಯವು ಪ್ರಪಂಚದಲ್ಲಿ ಹಬ್ಬುತ್ತಿದೆ; ಮನಸ್ಸಿನಲ್ಲಿ ಧರ್ಮಭಾವನೆಯುಂಟಾಗುವ, ಉದಾತ್ತ ಆದರ್ಶವನ್ನು ತೋರುವ, ಶುದ್ಧ ಜೀವನವನ್ನು ಬೋಧಿಸುವ, ಪ್ರತಿಯೊಂದು ಧರ್ಮವೂ ಎಲ್ಲರಿಗೂ ಪೂಜ್ಯವಾಗುತ್ತಿದೆ, ಪ್ರತಿ ಕ್ಷೇತ್ರವೂ ಪವಿತ್ರವಾಗುತ್ತಿದೆ. ಇದಕ್ಕೆ ನಮ್ಮನ್ನಾಳುತ್ತಿರುವ ಮಹಾಸ್ವಾಮಿಯವರು ಶ್ರವಣಬೆಳ್ಗೊಳದಲ್ಲಿ ನಡೆದ ಜೈನಮಹಾಸಮ್ಮೇಳನದ ಆರಂಭೋತ್ಸವವನ್ನು ನೆರವೇರಿಸುತ್ತ ಅಪ್ಪಣೆ ಕೊಡಿಸಿದ ಈ ವಾಕ್ಯಗಳೇ ಸಾಕ್ಷಿ—"ನಮ್ಮ ಪೂರ್ವಜರಾದ ನಮ್ಮ ವಂಶದ ಪೂಜ್ಯಪಾದರುಗಳಿಗೂ ಮತ್ತು ನಮಗೂ ಸಹ ಜೈನಮತತತ್ತ್ವಗಳಲ್ಲಿ, ವಿಶೇಷತಃ ಅವುಗಳಲ್ಲಿ ಮುಖ್ಯವಾದವುಗಳಲ್ಲೊಂದಾದ ಅಹಿಂಸಾ ಧರ್ಮದಲ್ಲಿ, ಪ್ರೀತ್ಯಾದರ ಪೂರ್ವಕವಾದ ಮೆಚ್ಚಿಕೆ." ಯಥಾ ರಾಜಾ ತಥಾ ಪ್ರಜಾಃ.

ಇದರ ಜೊತೆಗೆ, ಅದೇದಿವಸ, ಮದರಾಸಿನಲ್ಲಿ ಅಲ್ಲಿಯ ಸಂಸ್ಕೃತ ಪಾಠಶಾಲಾ ಸ್ಥಾಪಕರ ಜಯಂತ್ಯುತ್ಸವದ ಸಂದರ್ಭದಲ್ಲಿ ನಮ್ಮಸಂಸ್ಥಾನದ ದಿವಾನ್ ಸಾಹೇಬರವರು "ನಿಜವಾದ ಭಾರತೀಯರು ಸಮಸ್ತ ಮತಗಳಲ್ಲಿಯೂ ಪೂಜ್ಯಭಾವನೆಯನ್ನಿಟ್ಟುಕೊಳ್ಳಬೇಕಾದುದೇ ಅವರ ಧರ್ಮ. ಹಾಗೆ ಮಾಡಿದಲ್ಲಿ ಅವರಿಗೆ ಯಾರಲ್ಲಿಯೂ ದ್ವೇಷವಿರುವುದಿಲ್ಲ; ಸಮಸ್ತರಲ್ಲಿಯೂ ಸೌಹಾರ್ದದಿಂದ ವರ್ತಿಸುವುದೇ ಅವರ ಸಲ್ಲಕ್ಷಣವಾಗುತ್ತದೆ." ಎಂದು ಅಪ್ಪಣೆಕೊಡಿಸಿದುದನ್ನೂ ಜೋಡಿಸಿಕೊಂಡು ಯೋಚನೆಮಾಡಿದರೆ, ಮೈಸೂರು ಪ್ರಜೆಗಳ ಮುಂದೆ ಎಂಥ ಉದಾತ್ತಧ್ಯೇಯಗಳೂ ಉಚ್ಚಾದರ್ಶಗಳೂ ಸಮನ್ವಯ ನೀತಿಯೂ ಇದೆ ಎಂಬುದು ಗೊತ್ತಾಗುತ್ತದೆ.

ಶ್ರೀಗೊಮ್ಮಟಮೂರ್ತಿಯು ತನ್ನ ಭವ್ಯಾಕಾರದಿಂದ ಭೂವ್ಯಾಕಾಶಗಳನ್ನು ಮುಟ್ಟಿರುವಂತೆಯೇ ಧ್ಯಾನ ಯೋಗ ಲೋಕಕಾರುಣ್ಯಾದಿಗಳಿಂದ ಸ್ವರ್ಗಮರ್ತ್ಯಗಳನ್ನೂ ಸಂಬಂಧಿಸಿ, ದಿವ್ಯಜೀವನಕ್ಕೆ ಏಣಿ ಹಾಕಿಕೊಟ್ಟಿದೆ; ಸಾವಿರ ವರ್ಷಗಳಿಂದ, ಉತ್ತರ ದಕ್ಷಿಣ ಹಿಂದೂಸ್ಥಾನಗಳನ್ನು ಗಂಟುಹಾಕಿದೆ; ಶ್ರವಣಬೆಳುಗೊಳವನ್ನು, ಐತಿಹಾಸಿಕ ಧಾರ್ಮಿಕದೃಷ್ಟಿಗಳಿಂದ ಮಾತ್ರವಲ್ಲದೆ ಕಲಾದೃಷ್ಟಿಯಿಂದಲೂ, ಪ್ರಪಂಚದ ಗಣ್ಯಸ್ಥಳಗಳಲ್ಲಿ ಒಂದಾಗಿ ಮಾಡಿದೆ. ಈ ಉನ್ನತ ಮೂರ್ತಿಯು ಅಂದಿನ ಕನ್ನಡ ಸಾಹಿತ್ಯದ, ಆಗಿನ ಕಾಲದ ರಾಜರ, ಕವಿಗಳ, ಜನರ, ಜನಜೀವನದ, ಔನ್ನತ್ಯವನ್ನು ನೆನಪಿಗೆ ತಂದುಕೊಡುತ್ತದೆ. ಆದಿಪುರಾಣ, ವಿಕ್ರಮಾರ್ಜುನವಿಜಯ, ಚಾವುಂಡರಾಯಪುರಾಣಗಳು ಸಾಹಿತ್ಯದಲ್ಲಿ ಹೇಗೋ ಗೊಮ್ಮಟಮೂರ್ತಿಯು ಶಿಲ್ಪದಲ್ಲಿ ಹಾಗೆ! ಒಂದು ಅಕ್ಕಿಯ ಕಾಳಿನಲ್ಲಿ ನೂರು ಅಕ್ಷರ ಬರೆಯುವ ಕಿರುಗೆಲಸಗಳು ಅಂದಿನ ಜನರ ಮನಸ್ಸಿಗೆ ಬರುತ್ತಿರಲಿಲ್ಲ; ಅದಕ್ಕೆ ಬದಲು ಬೆಟ್ಟದ ಹಿರಿಯ ಬಂಡೆಯೇ ಬರಹದ ಹಲಗೆ; ಅದರ ಮೇಲೆ ಆಚಂದ್ರಾರ್ಕವಾಗಿರುವಂತೆ, ಕೆತ್ತಿದ ಮೊಳಮೊಳ ಉದ್ದದ ಅಕ್ಷರಗಳು; ಬೆಟ್ಟದ ಮೇಲೆ ಬೆಟ್ಟವನ್ನಿಟ್ಟಂತೆ ಕಡೆದು ನಿಲ್ಲಿಸಿದ ಹನ್ನೆರಡಾಳುದ್ದದ ಭವ್ಯವಿಗ್ರಹ! ಧರ್ಮದಲ್ಲಿ, ಕಾವ್ಯದಲ್ಲಿ, ಕಲೆಯಲ್ಲಿ, ಇತಿಹಾಸದಲ್ಲಿ ಈ ಮಹೋನ್ನತಿಯನ್ನು ಎಲ್ಲಿ ತರೋಣ! ಮಹಾಪರ್ವತವನ್ನು, ಮಹಾಸಾಗರವನ್ನು, ಮೊದಲು ನೋಡಿದಂದು ಆಗುವ ಚಿತ್ತದ ಔನ್ನತ್ಯವೇ, ಹೃದಯವಿಸ್ತಾರವೇ, ಈ ಮಹಾಮೂರ್ತಿಯನ್ನು ದರ್ಶನ ಮಾಡುವಾಗಲೂ ಆಗುತ್ತದೆ; ಜೀವವು ರೆಕ್ಕೆ ಪಡೆದು ಮೊಟ್ಟೆಯೊಡೆದು ಹಾರಿಬರುವ ರೇಷ್ಮೆಹುಳುವಿನಂತೆ ಸ್ವಾತಂತ್ರ್ಯ ಭಾವವನ್ನೂ ಬಿಡುಗಡೆಯ ಭಾವನೆಯನ್ನೂ ಪಡೆದು ಮೇಲೆ ಹಾರುತ್ತದೆ. ಆತ್ಮಕ್ಕೆ ಇದಕ್ಕಿಂತ ಹೆಚ್ಚಿನ ಸಂಸ್ಕಾರವೇನು ಬೇಕು?

೮೨-೧೯೪೦

# ಕೀರ್ತಿಶೇಷರಾದ
# ಶ್ರೀಮನ್ನಾಲ್ವಡಿ ಕೃಷ್ಣರಾಜವೊಡೆಯರ್ ಬಹದ್ದೂರ್,
## ಜಿ. ಸಿ. ಎಸ್. ಐ., ಜಿ. ಬಿ. ಇ., ಮಹಾಪ್ರಭುಗಳವರು.

### ಕಂಬನಿ

ಇನ್ನೂ ಆರುತಿಂಗಳ ಕೆಳಗೆ, ಕಳೆದ ಸಂಚಿಕೆಯಲ್ಲಿ ತಾನೆ, ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ವೊಡೆಯರವರು ಮೃತಿಪಟ್ಟರೆಂದು "ಕಂಬನಿ" ಯನ್ನಿಡಲಾಯಿತು. ಆದಕ್ಕೆ ಮುಂದಿನ ಸಂಚಿಕೆಯಲ್ಲಿಯೂ ಹಿಂದಕ್ಕಿಂತ ಹೆಚ್ಚಾಗಿ ಕಣ್ಣೀರು ಸುರಿಸಿ "ಕಂಬನಿ" ಬರಹವನ್ನು ಬರೆಯುವ ಈ ಶೋಕಕರ್ತವ್ಯ ಒದಗುವುದೆಂದು ನಾವು ಕನಸು ಮನಸಿನಲ್ಲಿಯೂ ನೆನಸಿರಲಿಲ್ಲ. ಈಗ ಮುವ್ವತ್ತೆಂಟು ವರ್ಷಗಳಿಂದ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರಾಗಿಯೂ, ಮೈಸೂರು ವಿಶ್ವವಿದ್ಯಾನಿಲಯವು ಹುಟ್ಟಿದಂದಿನಿಂದ ಅದರ ಛಾನ್ಸೆಲರವರಾಗಿಯೂ ಇದ್ದ ಶ್ರೀ ನಾಲ್ವಡಿ ಕೃಷ್ಣರಾಜ ವೊಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರು ನಮ್ಮನ್ನು ಅಗಲಿ ಹೋಗಿ ಆಗಲೇ ಒಂದು ತಿಂಗಳಾಗುತ್ತ ಬಂತು. ಕನ್ನಡನಾಡಿನ ಎರಡು ರತ್ನಕಲಶಗಳಂತಿದ್ದ ರಾಜಸೋದರರು ಇಬ್ಬರೂ ಹೀಗೆ ಆರು ತಿಂಗಳೊಳಗಾಗಿ ಪ್ರಜಾವರ್ಗವನ್ನು ತಬ್ಬಲಿ ಮಾಡಿ ಸ್ವರ್ಗಸ್ಥರಾಗುವರೆಂದು ಯಾರು ನಂಬಬಹುದಾಗಿತ್ತು? ದಿವಂಗತರಾದ ನಮ್ಮ ಮಹಾಪ್ರಭುಗಳವರು ಕೆಲವು ಕಾಲದಿಂದ ಅಸ್ವಸ್ಥರಾಗಿದ್ದರೂ, ಅಶಕ್ತರಾಗಿದ್ದರೂ, ತಕ್ಕಮಟ್ಟಿಗೆ ಚೇತರಿಸಿಕೊಂಡು ರಾಜಕಾರ್ಯಗಳನ್ನು ಎಂದಿನಂತೆ ನಡಸಿಕೊಂಡು ಹೋಗುತ್ತಿದ್ದರು. ಚಿಂತಾವ್ಯಾಕುಲಗಳಿಗೆ ಸಿಕ್ಕಿದ್ದ ಅವರ ಮನಸ್ಸು, ಧೀರಪ್ರಕೃತಿಯಿಂದ ಶಾಂತವಾಗಿ ಉಳಿದಿದ್ದರೂ, ಕಳೆದ ಮಾರ್ಚಿ ತಿಂಗಳಲ್ಲಿ ಏಕಮಾತ್ರ ಸೋದರರಿಂದ ವಿರಹಿತವಾದಾಗ ಜರ್ಝರಿತವಾಗಿ ಊರೆ ತಪ್ಪಿ ಸೊರಗಿ ಹೋಯಿತು. ಆದರೂ ಅವರು ಕರ್ತವ್ಯಕಾರ್ಯಗಳಲ್ಲಿ ತೊಡಗಿಯೇ ಇರುತ್ತಿದ್ದರು; ರಾಜಕಾರ್ಯ ಪ್ರಜಾಕಾರ್ಯ ದೇಶಕಾರ್ಯ ಭಾಷಾಸಾಹಿತ್ಯಕಾರ್ಯ-

ಗಳಲ್ಲಿ ನಿರತರಾಗಿಯೇ ಇರುತ್ತಿದ್ದರು ; ಅಂಥ ಅಶಕ್ತ ಸ್ಥಿತಿಯಲ್ಲಿಯೂ ಕನ್ನಡ ಸಾಹಿತ್ಯಪರಿಷತ್ತಿನ ಬೆಳ್ಳಿಯ ಹಬ್ಬದಲ್ಲಿ ಭಾಗಿಗಳಾಗಿ ಅದನ್ನು ಆರಂಭಿಸಿ ಹರಸಿದರು. "ಸಿರಿಗನ್ನಡಂ ಗೆಲ್ಗೆ" ಎಂಬುದು ಅವರು ಕನ್ನಡಿಗರ ಆ ಮಹಾಸಭೆಯಲ್ಲಿ ಆಡಿದ ಕೊನೆ ಮಾತು; ಆ ಮಾತನ್ನು ಅವರ ಬಾಯಿಂದ ಕೊನೆಯದಾಗಿ ಹೇಳಿಸುವ ಭಾಗ ಪರಿಷತ್ತಿನದಾಯಿತು. ಈಗ ಸುಮಾರು ೨೫ ವರ್ಷಗಳ ಕೆಳಗೆ ಮೈಸೂರು ವಿಶ್ವವಿದ್ಯಾನಿಲಯವನ್ನು ಆರಂಭಿಸಿದಾಗ ಅವರು ತಮ್ಮ ಕನ್ನಡದ ಅಭಿಮಾನವನ್ನು ವ್ಯಕ್ತಪಡಿಸಿದರು ; ಆ ಅಭಿಮಾನವು ಸಂತತವೂ ಅವರ ನಡೆ ನುಡಿಗಳಲ್ಲೆಲ್ಲಾ ಕಂಡುಬರುತ್ತ ಕನ್ನಡದ ಮುನ್ನಡೆಗೆ ಪ್ರೋತ್ಸಾಹಕರವಾಯಿತು. ಕನ್ನಡದಲ್ಲಿ ನಾಲ್ಕು ಪಂಕ್ತಿಗಳನ್ನು ಬರೆದು ಮಹಾಸ್ವಾಮಿಯವರಿಗೆ ಅರ್ಪಿಸಲಿ, ಬರೆದವರಿಗೆ ಒಂದು ಪ್ರೋತ್ಸಾಹ ದೊರೆಯದೆ ಇರುತ್ತಿರಲಿಲ್ಲ. ಆದರೆ ಇದು ಎಷ್ಟು ಸದ್ದಿಲ್ಲದೆ ನಡೆಯುತ್ತಿತ್ತೆಂದರೆ ಅವರ ಆ ಅಭಿಮಾನ ಔದಾರ್ಯಗಳು ಅವುಗಳ ಫಲವನ್ನು ಪಡೆದವರಿಗಲ್ಲದೆ ಹೊರಗೆ ಪ್ರಕಾಶಕ್ಕೆ ಬರುತ್ತಿರಲಿಲ್ಲ. ಕನ್ನಡ ಭಾಷಾಸಾಹಿತ್ಯಗಳ ಚರಿತ್ರೆಯಲ್ಲಿ ಸಂಪ್ರದಾಯವಾಗಿ ಬಂದ ರಾಜಾಶ್ರಯವು ಅವರ ಮೂಲಕ, ಅವರ ಸರ್ಕಾರದ ಮೂಲಕ ಸರ್ಕಾರದ ಅಧಿಕಾರಿ ಮತ್ತು ಅವರ ಕಾರ್ಯನೀತಿಗಳ ಮೂಲಕ ಈಚೆಗೆ ಎಷ್ಟು ಮಟ್ಟಿಗೆ ಪ್ರಸರಿಸಿತೆಂಬುದನ್ನು ತಿಳಿಯಬೇಕಾದರೆ, ಸುಮಾರು ಐವತ್ತು ವರ್ಷಗಳ ಕೆಳಗೆ ಮೈಸೂರಲ್ಲಿ ಕನ್ನಡ ಹೇಗಿತ್ತು ಈಗ ಹೇಗಿದೆ ಎಂಬುದನ್ನು ಹೋಲಿಸಿ ನೋಡಬೇಕು. ಅಂದಿಗೂ ಇಂದಿಗೂ ಅಜಗಜಾಂತರ! ಅವರಿಗೆ ಕನ್ನಡದಲ್ಲಿ ಎಷ್ಟು ಅಭಿಮಾನವೋ ಸಂಸ್ಕೃತದಲ್ಲಿಯೂ ಸಂಗೀತದಲ್ಲಿಯೂ ಅಷ್ಟೇ ಅಭಿಮಾನ ; ಹೀಗೆ ಕನ್ನಡ ಸಂಸ್ಕೃತಗಳ ಪೋಷಕರೆಂದು, ಸನಾತನ ಧರ್ಮದ ಏಕಾವಲಂಬನವೆಂದು, ಪ್ರಜಾವತ್ಸಲರಾದ ರಾಜರೆಂದು ಅವರು ಸರ್ವಜನ ಸಂಮಾನ್ಯರಾಗಿದ್ದರು ಪ್ರೀತಿಪಾತ್ರರಾಗಿದ್ದರು; ಶೀಲ, ಘನತೆ ಗೌರವ ಗಾಂಭೀರ್ಯ ಸರಳತೆ ಇವುಗಳಲ್ಲಿ ಲೋಕಕ್ಕೆ ಮೇಲ್ಪಂಕ್ತಿಯಾಗಿದ್ದರು. ಅವರಲ್ಲಿ ಪ್ರಾಚೀನ ನವೀನ ಸಂಸ್ಕೃತಿಗಳೆರಡರ ಸಾರ

ಸರ್ವಸ್ವವೂ ಸಮರಸವಾಗಿ ಸೇರಿತ್ತು. ಭರತಖಂಡದ ಪುಣ್ಯಕ್ಷೇತ್ರ ತೀರ್ಥಗಳಲ್ಲಿ ಯಾತ್ರೆಮಾಡಿಕೊಂಡು ಬಂದಿದ್ದಂತೆಯೇ ಅವರು ಯೂರೋಪಿನ ಪ್ರವಾಸವನ್ನೂ ಮಾಡಿಕೊಂಡು ಬಂದಿದ್ದರು. ಪೂಜೆ ಪುರಸ್ಕಾರ ವ್ರತ ಆಚಾರಗಳಲ್ಲಿ ನಿರತರಾಗಿರುವಂತೆಯೇ ಆಟ ಪಾಟ ವಿನೋದ ವಿಹಾರ ಸಾಮು ಕುಸ್ತಿಗಳಲ್ಲಿಯೂ ಆಸಕ್ತರಾಗಿದ್ದರು.

ಅವರು ರಾಜರಾಗಿ ಪ್ರಜೆಗಳಲ್ಲಿ ಎಷ್ಟು ವಾತ್ಸಲ್ಯವನ್ನಿಟ್ಟಿದ್ದರೋ ಅಷ್ಟೇ ಸ್ನೇಹವನ್ನು ತಮ್ಮ ಮಂತ್ರಿಗಳಲ್ಲಿಟ್ಟದ್ದು ರಾಜ್ಯರಥವು ಸುಸೂತ್ರ ವಾಗಿಯೂ ವಿಚಕ್ಷಣವಾಗಿಯೂ ನಡೆಯುವಂತೆ ನೋಡಿಕೊಂಡರು. ಅದೂ ಎಷ್ಟು ಜನ, ಎಂಥೆಂಥ ಮಂತ್ರಿಗಳು! ಸರ್ ಕೆ. ಶೇಷಾದ್ರಿ ಅಯ್ಯರ್ ಅವರಿಂದ ಮೊದಲುಮಾಡಿಕೊಂಡು ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ವರೆಗೆ! ಇಂಥ ಅನುಕೂಲರಾದ ಸಮರ್ಥಮಂತ್ರಿ ಪರಂಪರೆಯ ಕಾಲದಲ್ಲಿ ದೇಶವು ಎಷ್ಟುವಿಧವಾಗಿ ಎಷ್ಟುಮುಖವಾಗಿ, ಮುಂದಕ್ಕೆ ಬಂದು, ಮಾದರಿ ಸಂಸ್ಥಾನವೆನ್ನಿಸಿಕೊಂಡಿತು! ರಾಜಕೀಯ ಸಾಮಾಜಿಕ, ಆರ್ಥಿಕ, ವಿದ್ಯಾಭ್ಯಾಸ ಯಾವವಿಚಾರವನ್ನು ತೆಗೆದು ಕೊಂಡರೂ, ಹಿಂದಿನ ಮೈಸೂರಿಗೆ ಹೋಲಿಸಲಿ ಇಂದಿನ ಇಂಡಿಯಕ್ಕೆ ಹೋಲಿಸಲಿ, ಮೈಸೂರಿನವರು ಈಗ ನ್ಯಾಯವಾಗಿ ಹೆಮ್ಮೆಪಟ್ಟು ಕೊಳ್ಳ ಬಹುದಾಗಿದೆ.

ಈಗ ಸುಮಾರು ಅರ್ಧ ಶತಮಾನದಿಂದಲೂ ರಾಜರೆಂದರೆ ನಮ್ಮ ಮಹಾರಾಜರು, ರಾಜರ್ಷಿಗಳೆಂದರೆ ನಮ್ಮ ಮಹಾರಾಜರು, ಆದರ್ಶ ವ್ಯಕ್ತಿಗಳೆಂದರೆ ನಮ್ಮ ಮಹಾರಾಜರು ಎಂದು ಆನಂದಪಡುತ್ತಿದ್ದೆವು. ಮಹಾರಾಜರೆಂದರೆ ಅವರ ಚಿತ್ರವೇ ನಮ್ಮ ಮುಂದೆ ಬಂದು ನಿಲ್ಲುತ್ತಿತ್ತು; ಇಂದು ಜೀವಿಸಿರುವವರಲ್ಲಿ ಶ್ರೀ ಚಾಮರಾಜೇಂದ್ರ ವೊಡೆಯರವರನ್ನು ನೋಡಿದ್ದವರು ಬಹು ಸ್ವಲ್ಪ ಜನ. ಮುಮ್ಮಡಿ ಕೃಷ್ಣರಾಜವೊಡೆಯರವ ರನ್ನು ನೋಡಿದ್ದವರು ಇದ್ದಾರೋ ಇಲ್ಲವೋ! ಆದ್ದರಿಂದ ಮೈಸೂರಿನ ಪ್ರಜೆಗಳಿಗೆ ದೊರೆಗಳೆಂದರೆ ಶ್ರೀ ನಾಲ್ವಡಿ ಕೃಷ್ಣರಾಜ ವೊಡೆಯರೇ ಆಗಿ ದ್ದರು. ಅವರನ್ನು ಈಗ ನಾವು ಕಳೆದುಕೊಂಡೆವೆಂದರೆ ನಂಬಿಕೆ ಬರುವ ಹಾಗಿಲ್ಲ; ಅವರ ಭವ್ಯಮೂರ್ತಿ ಮನಸ್ಸಿನಿಂದ ಮರೆಯಾಗುವ ಹಾಗಿಲ್ಲ.

ಸರ್ವೇಶ್ವರನು ಈ ಶಾಂತಾತ್ಮರ ಆತ್ಮಕ್ಕೆ ಶಾಂತಿಯನ್ನು ಕೊಡಲಿ! ಶ್ರೀಮನ್ಮಹಾರಾಣಿಯವರಿಗೂ ಶ್ರೀಮದ್ಯುವರಾಜರವರಿಗೂ ರಾಜವರ್ಗಕ್ಕೂ ಈ ತೀವ್ರ ಶೋಕವನ್ನು ಸಹಿಸಲು ಭಗವಂತನು ಧೈರ್ಯವನ್ನು ಅನುಗ್ರಹಿಸಲಿ!

## ಶುಭಾಶಂಸನ

ಈಗ ದೇಶದ ಆಶೆಯೆಲ್ಲ ಶ್ರೀ ಜಯಚಾಮರಾಜೇಂದ್ರ ವೊಡೆಯರವರಲ್ಲಿ ಕೇಂದ್ರೀಕೃತವಾಗಿದೆ. ಇನ್ನು ಅವರೇ ನಮ್ಮ ಮಹಾರಾಜರು. ಅವರು ಶ್ರೀಮದ್ ನಾಲ್ವಡಿ ಕೃಷ್ಣರಾಜವೊಡೆಯರವರ ಸನ್ನಿಧಿಯಲ್ಲಿ ಬೆಳೆದು ಅವರ ಸತ್ವವನ್ನೂ ಶಾಂತಿಯನ್ನೂ ತೇಜಸ್ಸನ್ನೂ ತುಂಬಿಕೊಂಡಿದ್ದಾರೆ. ಹಿರಿಯರ ಆಶೀರ್ವಾದ ಅವರ ಮೇಲೆ ಪೂರ್ಣವಾಗಿದೆ. ಅವರನ್ನು ನೋಡಿದಾಗ

ಯಾತ್ಯೇಕತೋಽಸ್ತಶಿಖರಂ ಪತಿರೋಷಧೀನಾಂ
ಆವಿಷ್ಕೃತಾರುಣಪುರಸ್ಸರ ಏಕತೋಽರ್ಕಃ ||

ಎಂಬ ಕಾಳಿದಾಸೋಕ್ತಿಯು ಜ್ಞಾಪಕಕ್ಕೆ ಬರುತ್ತದೆ. ರಾತ್ರಿಯೆಲ್ಲಾ ಸ್ನಿಗ್ಧಶಾಂತವಾದ, ಇಂಪು ತಂಪಾದ, ಬೆಳಕಿನಿಂದ ಲೋಕವನ್ನು ಬೆಳಗಿ ಚಂದ್ರನು ಅಸ್ತನಾಗುತ್ತಿರುವಾಗ, ಪೂರ್ವದಲ್ಲಿ ತೇಜೋಮಯನಾದ ಬಾಲಸೂರ್ಯನು ಉದಯಿಸಿದ್ದಾನೆ; ಇದು ಒಂದು ದೊಡ್ಡ ಸಮಾಧಾನ; ಪುಣ್ಯ. ಈ ಸೂರ್ಯನು ಕ್ಷಣಕ್ಷಣಕ್ಕೆ ತೇಜೋವಂತನಾಗಿ, ಲೋಕಕ್ಕೆ ತೇಜಸ್ಸನ್ನೂ ಶ್ರೇಯಸ್ಸನ್ನೂ ಕೊಡಲಿ!

ಇಂಗ್ಲಿಷರು ಹೇಳುವಂತೆ "ಮಹಾರಾಜರು ಸ್ವರ್ಗಸ್ಥರಾದರು! ಮಹಾರಾಜರು ದೀರ್ಘಾಯುಷ್ಮಂತರಾಗಲಿ!"

ತೇಜೋದ್ವಯಸ್ಯ ಯುಗಪದ್ವ್ಯಸನೋದಯಾಭ್ಯಾಂ
ಲೋಕೋ ನಿಯಮ್ಯತ ಇವಾತ್ಮದಶಾಂತರೇಷು ||

ಕಾಳಿದಾಸ

೮೩–೧೯೪೦

---

# ಕನ್ನಡದ ಕೆಲಸಗಳಿಗೆ ಜನ, ಧನ, ಅಭಿಮಾನ

ಇವುಗಳಿಗೆ ಜನ, ಧನ, ಅಭಿಮಾನ ಇವು ಮುಖ್ಯ ಸಾಧನಗಳೆಂದು ಹೇಳಿದರೆ ತಪ್ಪಾಗಲಾರದು. ಅವುಗಳಲ್ಲಿಯೂ ಧನವೇ ಮುಖ್ಯವೆಂಬುದು ಎಲ್ಲರೂ ಅರಿತುಕೊಂಡ ವಿಷಯವಾಗಿದೆ. ನಮ್ಮಲ್ಲಿ ಈಗ ಅಭಿಮಾನಕ್ಕೆ ಕಡಿಮೆ ಇಲ್ಲ. ಜನರೂ ತಕ್ಕಮಟ್ಟಿಗೆ ಇದ್ದಾರೆ—ಯಾವ ಕೆಲಸವನ್ನು ಬೇಕಾದರೂ ಮಾಡಬಲ್ಲ, ಯಾವ ಗ್ರಂಥವನ್ನು ಬೇಕಾದರೂ ಬರೆಯಬಲ್ಲ ಜನಗಳಿದ್ದಾರೆ. ಆದರೆ ಧನವೆಲ್ಲಿದೆ? ಕನ್ನಡಕ್ಕಾಗಿ ಹತ್ತುಸಾವಿರ ರೂಪಾಯಿಗಿಂತ ಹೆಚ್ಚಾಗಿ ದಾನಮಾಡಿರುವ, ಅದಕ್ಕಿಂತಲೂ ಹೆಚ್ಚು ಬೆಲೆಯುಳ್ಳ ಕಾಲವನ್ನೂ ದೇಹಶಕ್ತಿಯನ್ನೂ ತ್ಯಾಗಮಾಡಿರುವ ಅಭಿಮಾನಿಗಳೆಂದರೆ, ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು, ದಿವಂಗತರಾದ ದಿವಾನ್‌ಬಹದ್ದೂರ್ ಸರ್ ಕೆ. ಪಿ. ಪುಟ್ಟಣ್ಣಶೆಟ್ಟಿಯವರು ಮುಂತಾದ ತೀರ ಕೆಲವರು ಮಾತ್ರ. ಆದರೆ ಒಂದೆರಡು ಮಳೆಗೇ ಕೆರೆಯೆಲ್ಲಾ ತುಂಬಿ ಕೋಡಿ ಹರಿಯುವಷ್ಟು ನೀರು ಬರುತ್ತದೆಯೇ? ಕನ್ನಡನಾಡಿನ ಅನೇಕ ದಾನಶೀಲರು ಕನ್ನಡ ಮಕ್ಕಳ ವಿದ್ಯಾಸಂಪಾದನೆಗೋಸ್ಕರ ಅಶನ ವಸನ ವೇತನಗಳಿಗೋಸ್ಕರ, ಲಕ್ಷಾಂತರ ರೂಪಾಯಿಗಳನ್ನು ಕೊಟ್ಟಿರುವುದು ನಿಜ. ಆದರೆ ಕನ್ನಡ ಮಾತು, ಕನ್ನಡ ಸಾಹಿತ್ಯ ಇವು ಮುಂದೆ ಬರಲೆಂದೇ ಸಹಾಯವನ್ನು ನೀಡಿರುವವರು ಎಷ್ಟು ಮಂದಿ? ಹೇಗೆ ಹೇಗೆ ನೋಡಿದರೂ, ಹೇಗೆ ಸುತ್ತಿ ಬಳಸಿ ದ್ರಾವಿಡ ಪ್ರಾಣಾಯಾಮ ಮಾಡಿ ಬಂದರೂ, ಕೊನೆಗೆ ಮುಗಿಯುವ ಪಲ್ಲವಿ—ಧನ! ಏಕೆಂದರೆ ಗ್ರಂಥಗಳನ್ನು ಬರೆಯಲು ಶಕ್ತರಾದ ವಿದ್ವಾಂಸರು ಕಷ್ಟಪಟ್ಟು ವಿಷಯಗಳನ್ನು ಸಂಗ್ರಹಿಸಿ ಉಚಿತವಾಗಿ ಬರೆದರೂ, ಅಚ್ಚುಹಾಕಿಸುವುದಕ್ಕೆ ಹಣವನ್ನು ಎಲ್ಲಿ ತರಬೇಕು? ಹೇಗೋ ಹಣವನ್ನು ಒದಗಿಸಿದರೆ ಅದು ಸ್ವಲ್ಪ ಮಟ್ಟಿಗಾದರೂ ಹಿಂದಕ್ಕೆ ಬರುವುದು ಹೇಗೆ? ಎಷ್ಟು ಜನ ಕೊಳ್ಳುತ್ತಾರೆ? ಎಷ್ಟು ಜನ ಓದುತ್ತಾರೆ? ಎಷ್ಟು ಜನ ಕೊಂಡು ಓದುತ್ತಾರೆ? ಯಾವ ಪುಸ್ತಕಪ್ರಕಾಶಕರು ತಾನೇ, ಪಠ್ಯ ಪುಸ್ತಕಗಳು ಕೂಡ ಅಲ್ಪ ಸಂಖ್ಯೆಯಲ್ಲಿ ಮಾರಾಟವಾಗುವುದನ್ನು ಕಂಡೂ ಧೈರ್ಯಮಾಡಿ ಈ ಹಾವಿನ

ಬುಟ್ಟಿಗೆ ಕೈ ಹಾಕುವರು ? ನಾವು ಜನಗಣಿತಿಯ ಲೆಕ್ಕಕ್ಕೆ ಸುಮಾರು ಎರಡುಕೋಟಿಯಾದರೂ ಅಕ್ಷರಸ್ಥರ ಲೆಕ್ಕಕ್ಕೆ ಅದರೊಳಗೆ ಹತ್ತರಲ್ಲಿ ಒಂದು ಭಾಗ. ಪುಸ್ತಕಗಳನ್ನು ಓದುವವರ ಲೆಕ್ಕಕ್ಕೆ ಅದರಲ್ಲಿಯೂ ಹತ್ತರಲ್ಲಿ ಒಂದು ಪಾಲು. ಕೊಳ್ಳುವವರು ಅದರಲ್ಲಿಯೂ ದಶಮಾಂಶ. ಗ್ರಂಥಕರ್ತರಿಂದಲೂ ಪ್ರಕಾಶಕರಿಂದಲೂ ಉಚಿತವಾಗಿ ಪಡೆಯುವ ಅವರ ಸ್ನೇಹಿತರನ್ನು ಇದರಿಂದ ಕಳೆದರೆ ಉಳಿದವರ ಸಂಖ್ಯೆ ಊಹಿಸಲಾರದಷ್ಟು ಸೂಕ್ಷ್ಮವಾಗುತ್ತದೆ. ಅದ್ದರಿಂದ, ಅಕ್ಷರತೆ ಮೊದಲು ಮಾಡಿಕೊಂಡು ಎಲ್ಲಕ್ಕೂ ಮೇಲ್ಪಟ್ಟ ವಿಶ್ವವಿದ್ಯಾನಿಲಯದ ಪರೀಕ್ಷೆಯುವರೆಗೂ ವಿದ್ಯಾರ್ಥಿಸಂಪತ್ತಿ ಹೆಚ್ಚದೇ ಹೋದರೆ ಈ ಪರಿಸ್ಥಿತಿ ಉತ್ತಮವಾಗುವ ಹಾಗಿಲ್ಲ. ಇದಕ್ಕೆ ಬೇಕಾದದ್ದು ಧನ. ವಿದ್ಯೆ ಹೆಚ್ಚಿದರೆ ಅದರ ಜೊತೆಯಲ್ಲಿಯೇ ನಿರುದ್ಯೋಗವು ಏರುತ್ತಾ ಹೋಗುವುದೆಂಬುದು ಕೆಲವರ ಮತ. ಆದರೆ ಇದನ್ನು ನಾವು ಒಪ್ಪುವುದಿಲ್ಲ. ದೇಶ ಮುಂದಕ್ಕೆ ಬರಬೇಕಾದರೆ, “ನ ಹಿ ಜ್ಞಾನೇನ ಸದೃಶಂ”! “ವಿದ್ಯಯಾ ಅಮೃತಮಶ್ನುತೇ!” ಆದರೆ ದೇಶವು ವಿದ್ಯೆಯೊಂದಕ್ಕೇ ತನ್ನ ಹಣವೆಲ್ಲವನ್ನೂ ಅಲ್ಲದಿದ್ದರೆ ಬಹು ಭಾಗವನ್ನು ಖರ್ಚು ಮಾಡುವುದಕ್ಕಾಗುತ್ತದೆಯೇ ? ಅದರಲ್ಲಿಯೂ ಒಂದು ಪ್ರಾಂತವು ಸಣ್ಣದಾಗಿದ್ದು ಅದರ ಹುಟ್ಟುವಳಿಯು ಮಿತವಾಗಿದ್ದರೆ, ಅದು ಅನ್ನ ಬಟ್ಟೆಗೆ ಹೆಚ್ಚು ಗಮನ ಕೊಡಬೇಕೋ ಅಮೃತಪ್ರಾಶನಕ್ಕೆ ಹೆಚ್ಚು ಗಮನ ಕೊಡಬೇಕೋ ? ಕೊಡುವುದು ಸಾಧ್ಯವೋ ? ಇಂಗ್ಲಿಷಿನಂಥ ಭಾಷೆಯಾಗಿ, ಭೌತಶಾಸ್ತ್ರ ರಸಾಯನಶಾಸ್ತ್ರಗಳಂಥ ವಿಶ್ವವ್ಯಾಪಕವಾದ ವಿಷಯಗಳಾಗಿದ್ದರೆ ಅವುಗಳನ್ನು ಒಳಗೊಂಡ ಗ್ರಂಥಗಳು ಎಷ್ಟೇ ಸಣ್ಣ ಪ್ರಾಂತದಿಂದ ಹೊರಡಲಿ, ಯೋಗ್ಯತೆ ಒಂದಿದ್ದರೆ, ಪ್ರಪಂಚದಲ್ಲೆಲ್ಲಾ ಹರಡಿ, ಲಕ್ಷಾಂತರ ಪ್ರತಿಗಳು ಮಾರಿ, ಬರೆದವನು ಬೆಳಕಿಗೆ ತಂದವನು, ಇಬ್ಬರೂ ಬದುಕಿ ಹೋಗುವರು. ಆದರೆ ಒಂದು ಗೇಣು ಅಗಲದ ಕರ್ಣಾಟಕದಲ್ಲಿ ಇರುವ ಒಂದು ಹಿಡಿ ಜನರು ಇರುವ ಅಲ್ಪಸ್ವಲ್ಪ ಧನವನ್ನೂ ಅಭಿಮಾನವನ್ನೂ ನಾನಾ ಕಡೆಗೆ ಹರಿದು ಹಂಚಿದರೆ ಕನ್ನಡ ಸಾಹಿತ್ಯ ಬದುಕುವುದು ಹೇಗೆ? ಇದಕ್ಕೆ ದೇಶದ

ಆರ್ಥಿಕಸ್ಥಿತಿ ಉತ್ತಮವಾಗಬೇಕು ; ಜನರಲ್ಲಿ ವಿದ್ಯೆ ವಿಸ್ತಾರವಾಗಬೇಕು, ಹೆಚ್ಚಿನ ಮಟ್ಟಕ್ಕೆ ಏರಬೇಕು. ಆಗ ತಾನೇ ವಿಶ್ವಕೋಶಗಳೂ, ಉದ್ಗ್ರಂಥಗಳೂ ರಚಿತವಾಗಿ ಪ್ರಕಾಶಿತವಾಗಿ ಫಲಕಾರಿಯಾಗುವುದು ಸಾಧ್ಯ.

ಇದು ನಿರಾಶಾವಾದವಲ್ಲ ; ಕನ್ನಡಿಗರು ತಮ್ಮ ಧನ ಅಭಿಮಾನಗಳನ್ನು ಚದರಗೊಡದೆ ಹೇಗೆ ಒಮ್ಮನಸ್ಸಿನಿಂದ ಒಂದುಗೂಡಿಸಬೇಕೆಂದು ಹೇಳಿರುವ ಮಾತು.

೮೫—೧೯೪೧

---

## ಕೀರ್ತಿಶೇಷರಾದ ಶ್ರೀ ರವೀಂದ್ರನಾಥ ಠಾಕೂರರವರು

ಶ್ರೀರವೀಂದ್ರರು ಬಂಗಾಳಿಗಳು, ಆದರೂ ಹದಿನಾರಾಣೆಯ ಭಾರತೀಯರು ; ಅಷ್ಟೇ ಅಲ್ಲ ; ಸಾರ್ವಲೌಕಿಕ ವ್ಯಕ್ತಿಗಳಲ್ಲಿ ಒಬ್ಬರು. ಅವರ ವ್ಯಕ್ತಿತ್ವ ಸಾಮರ್ಥ್ಯಗಳ ಔನ್ನತ್ಯವು ಬಹು ದೂರಕ್ಕೆ ಕಾಣುವ ಮಹಾಪರ್ವತಶಿಖರದ ಔನ್ನತ್ಯದಂತೆ. ಅವರು ಕೇಶವಚಂದ್ರಸೇನ, ರಾಜಾರಾಮ್ ಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ, ಬಂಕಿಂಚಂದ್ರ ಚಟ್ಟೋಪಾಧ್ಯಾಯ, ಸ್ವಾಮಿ ವಿವೇಕಾನಂದ ಈ ಮಹಾವ್ಯಕ್ತಿಗಳ ಪಂಕ್ತಿಗೆ ಸೇರಿ ಬಂಗಾಳಕ್ಕೆ, ಬಂಗಾಳಿಗೆ, ಆ ಮೂಲಕ ಭರತಖಂಡಕ್ಕೆ, ಭಾರತೀಯರಿಗೆ, ಪ್ರಾಶಸ್ತ್ಯವನ್ನೂ ಪ್ರಶಸ್ತಿಯನ್ನೂ ತಂದವರು. ಅವರು ಒಂದು ಮಾತನ್ನಾಡಿದರೆ, ಅದು ಪ್ರಪಂಚವೆಲ್ಲಕ್ಕೂ ಕೇಳುತ್ತಿತ್ತು ; ಒಂದು ಕಾರ್ಯವನ್ನು ಮಾಡಿದರೆ ಅದರ ಬೆಳಕು ಜಗತ್ತಿನಲ್ಲೆಲ್ಲಾ ಬೀಳುತ್ತಿತ್ತು. ಅವರು ಅಂಥ ಯೋಗ್ಯತೆ ಗೌರವ ಧೀಶಕ್ತಿಗಳನ್ನು ಗಳಿಸಿಕೊಂಡಿದ್ದರು. ಆದ್ದರಿಂದ ವಿಶ್ವಮಾನ್ಯವಾದ ನೋಬೆಲ್ ಬಹುಮಾನವು ಅವರನ್ನು ವರಿಸಿ ಬಂತು.

ರವಿಯ ದೃಷ್ಟಿಯು ಹೇಗೋ ರವೀಂದ್ರರ ದೃಷ್ಟಿಯೂ ಹಾಗೇ ವಿಶ್ವವ್ಯಾಪಿಯಾದದ್ದು ; ಆದ್ದರಿಂದ ಅವರು ಪ್ರತಿಯೊಂದನ್ನೂ ವಿಶ್ವದೃಷ್ಟಿಯಿಂದಲೇ ನೋಡುತ್ತಿದ್ದರು. ವಿಶ್ವಭಾರತಿಯನ್ನು ಸ್ಥಾಪಿಸಿದರು ; ಅಲ್ಲಿ ವಿಶ್ವದ ನಾನಾ ಕಡೆಯಿಂದ ಸುಪ್ರಸಿದ್ಧರಾದ ಪ್ರಥಮಶ್ರೇಣಿಯ,

ವಿದ್ವಾಂಸರು ಬಂದು ತಮ್ಮ ಪೂರ್ಣಪಾಂಡಿತ್ಯದ, ಪರಿಪಕ್ವವಾದ ಬುದ್ಧಿಯ, ಸಂಸ್ಕಾರಗೊಂಡ ಸಂಸ್ಕೃತಿಯ, ಮಧುರ ಫಲವನ್ನು ಕೊಟ್ಟು ಹೋದರು. ಇದು ಎಷ್ಟು ಸ್ವಲ್ಪಕಾಲ ನಡೆಯಲಿ, ಈ ಭಾವವೂ ಏರ್ಪಾಡೂ ಯೋಜನೆಯೂ ಪ್ರಪಂಚದ ಮತ್ತಾವ ವಿದ್ಯಾಸಂಸ್ಥೆ ಯಲ್ಲಿಯೂ ಕಂಡದ್ದಲ್ಲ ಕೇಳಿದ್ದಲ್ಲ. ವಿಶ್ವಭಾರತಿಯ ದಯೆಯಿಂದಲೇ ನಾವೂ ಮೈಸೂರಿನಲ್ಲಿ ಸಿಲ್ವೇನ್ ಲೆವಿ, ವಿಂಟರ್‌ನಿಟ್ಸ್ ಮುಂತಾದ ನಾನಾ ಜನಾಂಗಗಳ ವಿದ್ವನ್ಮಕುಟಗಳಂತಿದ್ದ ವಿದ್ವಾಂಸರನ್ನು ನೋಡು ವಂತಾದದ್ದು.

ಅವರ ಜೀವನದ, ಭಾವದ, ಭಾವನೆಯ ಪ್ರತಿಯೊಂದು ವಿವರ ದಲ್ಲಿಯೂ ಒಂದು ವಿಶೇಷತೆಯಿತ್ತು. ಅವರನ್ನು ಒಂದು ಸಾರಿ ನೋಡಿದರೆ ಸಾಕು, ಇದೊಂದು ಅಪೂರ್ವವಾದ, ಅಸಾಧಾರಣವಾದ ವ್ಯಕ್ತಿಯೆಂದು ಯಾರಿಗಾದರೂ ಮನವರಿಕೆಯಾಗುವಂತಿತ್ತು. ವಿಶ್ವ ವಿದ್ಯಾನಿಲಯದ ಯಾವುದೊಂದು ಪದವಿಯನ್ನು ಪರೀಕ್ಷೆ ಕೊಟ್ಟು ಸಂಪಾದಿಸದಿದ್ದರೂ, ಹಾಗೆ ದೊಡ್ಡ ದೊಡ್ಡ ಪದವಿಗಳನ್ನು ಪಡೆದವರಿ ಗಿಂತ ಮೇಲ್ಗೈಯಾಗಿದ್ದವರು ರವೀಂದ್ರರು. ಇಂಗ್ಲಿಷಿನಲ್ಲಿ ಇಂಗ್ಲಿಷರಿ ಗಿಂತ ಚೆನ್ನಾಗಿ ಬರೆಯಬಲ್ಲವರಾಗಿದ್ದರೂ, ಮೊದಲು ಬಂಗಾಳಿಯಲ್ಲಿ ಬರೆಯುತ್ತಿದ್ದ ಭಾಷಾಭಿಮಾನಿಗಳು. ಕಲ್ಕತ್ತಾ ವಿಶ್ವವಿದ್ಯಾನಿಲಯದ ಪದವೀಧರರಿಗೆ ಅವರು ಬಂಗಾಳಿಯಲ್ಲಿ ಉಪದೇಶಭಾಷಣ ಮಾಡಿದ್ದು ಎಲ್ಲ ವಿಧದಿಂದಲೂ ಒಂದು ಅಪೂರ್ವವಾದ ಘಟನೆ.

ಅವರು ಕವಿಗಳು ಮಾತ್ರವಲ್ಲ; ಗದ್ಯ, ಪದ್ಯ, ನಾಟಕ, ಪ್ರಬಂಧ ಗಳನ್ನು ಬರೆದದ್ದಷ್ಟೇ ಅಲ್ಲ. ಅವುಗಳಲ್ಲಿ ಏನು ಸತ್ವ, ವೈವಿಧ್ಯ, ನವೀ ನತೆ! ಅವರ ಸಣ್ಣ ಕಥೆಗಳು ದೊಡ್ಡ ರತ್ನಗಳು. ಸಾಹಿತ್ಯದ ಜೊತೆಗೆ ಸಂಗೀತ, ಚಿತ್ರಕಲೆ, ನಾಟ್ಯ, ಮಾಧುರ್ಯ, ಸೌಂದರ್ಯ, ಸಂಪತ್ತು, ದೇಶಾಭಿಮಾನ ಹೀಗೆ ಮತ್ತಾರಲ್ಲಿ ಒಟ್ಟಿಗೆ ಸೇರಿದ್ದಾವು? ಸೃಷ್ಟಿ ಕರ್ತನು ಅವರಿಗೆ ಇವೆಲ್ಲವನ್ನೂ ತನಗೆ ಎಷ್ಟು ಕೈಗಳಿವೆಯೋ ಅಷ್ಟು ಕೈಗಳಿಂದಲೂ ಧಾರಾಳವಾಗಿ ಕೊಟ್ಟಿದ್ದನು.

ಅವರ ಮರಣದಿಂದ ನಮ್ಮ ಸಂಸ್ಕೃತಿ ಪ್ರಪಂಚಕ್ಕೇ ನಷ್ಟ.—

ಮುಖ್ಯವಾಗಿ ಭರತಖಂಡಕ್ಕೆ. ನಮ್ಮ ದೇಶ ಈಗ ವಿಷಮಸ್ಥಿತಿಯಲ್ಲಿದೆ, ದುರ್ಬಲಸ್ಥಿತಿಯಲ್ಲಿದೆ. ಅದಕ್ಕೆ ಅವಲಂಬನ ಬೇಕು, ಪೋಷಣೆ ಬೇಕು, ಪ್ರೋತ್ಸಾಹ ಬೇಕು. ರವೀಂದ್ರರು ಇವೆಲ್ಲವೂ ಆಗಿದ್ದರು; ಅವರು ಸ್ವರ್ಗಸ್ಥರಾದ್ದರಿಂದ ನಾವು ಇವೆಲ್ಲವನ್ನೂ ಕಳೆದುಕೊಂಡೆವು.

೮೭–೧೯೪೧

---

## ರಾಜಸೇವಾಸಕ್ತ

## ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು

ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಕಳೆದ ತಿಂಗಳು, ಇಂಗ್ಲಿಷ್ ಪ್ರೊಫೆಸರ್ ಮತ್ತು ಕನ್ನಡದ ಗೌರವ ಪ್ರೊಫೆಸರ್ ಈ ಅಧಿಕಾರಗಳಿಂದ ನಿವೃತ್ತರಾದರು....

....ಶ್ರೀಮಾನ್ ಶ್ರೀಕಂಠಯ್ಯನವರು ಇಂಗ್ಲಿಷ್ ಪ್ರೊಫೆಸರಾಗಿ ಪ್ರಸಿದ್ಧರಾದರು. ಆದರೆ ಅವರು ವಿಶ್ರಾಂತಿ ಪಡೆಯುವಾಗಲೂ, ಜೊತೆಗೆ ಕನ್ನಡದ ಗೌರವ ಪ್ರೊಫೆಸರೂ ಆಗಿದ್ದರೆಂದೂ ಕನ್ನಡದ ಪ್ರೌಢತರಗತಿಗಳಿಗೆ ಉಪನ್ಯಾಸಮಾಡುತ್ತಿದ್ದರೆಂದೂ ಅನೇಕರಿಗೆ ತಿಳಿಯದು. ಅದಕ್ಕಿಂತ ಹೆಚ್ಚಾಗಿ, ಅವರು ಉದ್ಯೋಗಕ್ಕೆ ಸೇರಿದಾಗಲೆ, ಕಾಲೇಜು ತರಗತಿಗಳಲ್ಲಿ ಎಷ್ಟು ಇಂಗ್ಲಿಷ್ ಪಾಠ ಹೇಳುತ್ತಿದ್ದರೋ ಅಷ್ಟು ಕನ್ನಡವನ್ನೂ—ಇಂಟರ್‌ಮೀಡಿಯೆಟ್ ತರಗತಿಗೆ, ಬಿ.ಎ. ತರಗತಿಗೆ—ಪಾಠ ಹೇಳುತ್ತಿದ್ದರೆಂದು ತಿಳಿಯದು. ಅವರ ಬೋಧನ ಕ್ರಮದಲ್ಲಿ ಇಂಗ್ಲಿಷ್ ತರಗತಿಗಳಿಗೆ ಕನ್ನಡದ ಉಪಯೋಗವೂ, ಕನ್ನಡ ತರಗತಿಗೆ ಇಂಗ್ಲಿಷಿನ ಉಪಯೋಗವೂ ಆಗುತ್ತಿತ್ತು. ಇಂಗ್ಲಿಷ್ ಪಾಠದಲ್ಲಿ ಒಂದು ರಸವತ್ತಾದ ಅಥವಾ ಮಹತ್ತಿನ ಸಂಗತಿ ಬಂದರೆ ಅದನ್ನು ಕನ್ನಡದಲ್ಲಿ ತರುವುದು ಹೇಗೆ ಎಂದು ಮೊದಲು ಯೋಚನೆ ಹೊರಡುತ್ತಿತ್ತು. ಸಾಹಿತ್ಯವನ್ನು ಐತಿಹಾಸಿಕ ದೃಷ್ಟಿಯಿಂದಲೂ ತುಲನಾತ್ಮಕದೃಷ್ಟಿಯಿಂದಲೂ ಓದಿದರೇ ನಿಜವಾದ ಬೆಲೆಕಟ್ಟುವ ವಿಮರ್ಶಬುದ್ಧಿ ಬರುವುದೆಂಬುದನ್ನು ಅವರು ತೋರಿಸಿಕೊಟ್ಟರು. ವ್ಯಾಸಂಗ ಮಾಡಿದ್ದನ್ನು ಜೀರ್ಣಿಸಿಕೊಂಡು ಉಪಯೋಗಿಸಿಕೊಳ್ಳುವುದನ್ನು ಹೇಳಿಕೊಟ್ಟ

ವರು ಅವರು. ಸಾಹಿತ್ಯ ಸೌಂದರ್ಯವನ್ನು ಸವಿದು ಆನಂದಪಡುವು ದನ್ನು ಹೇಳಿಕೊಟ್ಟವರು ಅವರು. ನಿಮ್ಮ ಓದುಮನೆಯ ಕಿಟಕಿಗಳನ್ನು ತೆರೆಯಿರಿ, ಎಲ್ಲೆಲ್ಲಿಂದ ಬೆಳಕು ಬಂದರೂ ಅದನ್ನು ಬರಮಾಡಿಕೊಳ್ಳಿ. ಸೂರ್ಯನನ್ನು ಎಲ್ಲೆಲ್ಲಿ ಕಂಡರೆ ಅಲ್ಲಲ್ಲಿ ಕೈಮುಗಿಯಿರಿ ಎಂದು ಸಂಸ್ಕೃತಿ ಪ್ರಪಂಚದಲ್ಲಿ ಒಂದು ವಿಶ್ವವಿಶಾಲಭಾವನೆಯನ್ನು ಬೆಳೆಸಿದವರು ಅವರು; ಹೀಗೆ ಪಾಶ್ಚಾತ್ಯಸಾಹಿತ್ಯವೆಂದರೆ ಬರಿಯ ಇಂಗ್ಲಿಷ್ ಸಾಹಿತ್ಯವಲ್ಲ, ಅವೆಲ್ಲಕ್ಕೂ ಮೂಲವಾದ, ಮೇಲಾದ, ಗ್ರೀಕ್ ಸಾಹಿತ್ಯ ಇದೆ ಎಂದು ಅದನ್ನು ಶಿಕ್ಷಣಕ್ಷೇತ್ರಕ್ಕೆ, ಸೃಷ್ಟಿಕ್ಷೇತ್ರಕ್ಕೆ, ತಂದವರು ಅವರು. ಈ ಕೆಲಸವನ್ನು ಅವರು "ಅಶ್ವತ್ಥಾಮನ್" "ಪಾರಸಿಕರು" ಗಳನ್ನು ಬರೆದು ಮಾಡಿದ್ದಕ್ಕಿಂತ ಹೆಚ್ಚಾಗಿ ಪಾಠಹೇಳಿ ಮಾಡಿದರು. ಕನ್ನಡದ ಕಡೆಯಲ್ಲಿಯೂ ಹೀಗೆಯೇ ತಮಿಳಿನ ಪ್ರಾಶಸ್ತ್ಯವನ್ನು ತೋರಿಸಿದರು.—ಮೈಸೂರು ವಿಶ್ವವಿದ್ಯಾನಿಲಯದಲ್ಲಿ, ನಮಗೆ ತಿಳಿದ ಮಟ್ಟಿಗೆ, ಗ್ರೀಕ್ ಸಾಹಿತ್ಯ ತಮಿಳುಸಾಹಿತ್ಯಗಳ ಪ್ರಚಾರ ಮಾಡಿದ ವರು, ಅವರಂಥವರು ಇನ್ನೊಬ್ಬರಿಲ್ಲ.

ಅವರು ಬಹು ದಿವಸದಿಂದ ಮಹಾರಾಜಾಕಾಲೇಜಿನ ಕರ್ಣಾಟಕಸಂಘದ ಮತ್ತು ಸೆಂಟ್ರಲ್ ಕಾಲೇಜಿನ ಕರ್ಣಾಟಕಸಂಘದ ಅಧ್ಯಕ್ಷರಾಗಿ, ಪ್ರಬುದ್ಧಕರ್ಣಾಟಕ ಸಂಪಾದಕ ಮಂಡಲಿಯ ಮತ್ತು ಕನ್ನಡ ಗ್ರಂಥ ಪ್ರಕಾಶನ ಸಮಿತಿಯ ಅಧ್ಯಕ್ಷರಾಗಿ, ಅವುಗಳಿಗೆ ದುಡಿದಿದ್ದಾರೆ. ಅವರು ತಮ್ಮ ಸರ್ಕಾರಿಯ ಉದ್ಯೋಗದಿಂದ ನಿವೃತ್ತರಾಗಿ ಇವುಗಳಿಂದ ಕಳಚಿಕೊಂಡರೂ ಅವರ ಆದರ ಸ್ನೇಹ ವಿಶ್ವಾಸಗಳು ಏನೂ ಕಡಿಮೆಯಾಗಿಲ್ಲ; ಅವು ಕನ್ನಡಕ್ಕೆ ಪರಿಷತ್ತಿನ ಮೂಲಕ, ಇಮ್ಮಡಿಯಾದವು, ಮೀಸಲಾದುವು....

೯೦–೧೯೪೨

---

## ಕನ್ನಡಕ್ಕೆ ಒಂದು ಗುಡಿ

....ಶಿವಮೊಗ್ಗದ ಕರ್ಣಾಟಕ ಸಂಘವು ಈಗ ಹನ್ನೆರಡು ವರ್ಷಗಳಿಂದ ಕನ್ನಡಕ್ಕೆ ಮಹತ್ತಾದ ಸೇವೆ ಸಲ್ಲಿಸಿದೆ. ಶ್ರೀಮಾನರಾದ

ಸುಬ್ರಹ್ಮಣ್ಯ ಶಾಸ್ತ್ರಿಗಳು, ಚಿದಂಬರಂ, ಕೃಷ್ಣಮೂರ್ತಿರಾವ್, ವಿಷ್ಣು ಭಟ್ಟ, ಭೂಪಾಲಂ ಸೋದರರು ಮುಂತಾದ ಶಿವಮೊಗ್ಗ ನಿವಾಸಿ ಮಹಾ ಜನರ ಕನ್ನಡದ ಅಭಿಮಾನವು ಈಗ ಎಲ್ಲೆಲ್ಲಿಯೂ ವಿದಿತವಾಗಿದೆ. ಇವರ, ಮುಖ್ಯವಾಗಿ ಸಂಘದ ಕಾರ್ಯದರ್ಶಿಗಳ, ತ್ಯಾಗ ಶ್ರಮ ಚಟು ವಟಿಕೆಗಳ ಫಲವಾಗಿ ಮಲೆನಾಡು ಪ್ರಾಂತದಲ್ಲಿ ಆಗಿರುವ ಪುನರುಜ್ಜೀ ವನ ಕಾರ್ಯ ಸ್ವಲ್ಪವಲ್ಲ; ಅದು ಮೈಸೂರು ಆದ್ಯಂತಕ್ಕೂ ಕರ್ಣಾಟ ಕಕ್ಕೂ ಹಬ್ಬುತ್ತಿದೆ. ಇದಕ್ಕಾಗಿ ಈ ಸಂತೋಷ ಸಮಾರಂಭ ಸಂದರ್ಭ ದಲ್ಲಿ ನಾವು ಅವರನ್ನು ಮೈಸೂರು ಬೆಂಗಳೂರು ಕರ್ಣಾಟಕ ಸಂಘಗಳ ಪರವಾಗಿ ಅಭಿನಂದಿಸುತ್ತೇವೆ. ಅವರ ಸಂಘವು ಮಾಡಿರುವ ಕೆಲಸದ ಮಹತ್ವಕ್ಕೆಅನುರೂಪವಾಗಿ ಅವರಿಗೆ ಶ್ರೀಮಾನ್ ಹಸೂಡಿ ವೆಂಕಟಶಾಸ್ತ್ರಿ ಗಳಂಥವರ ಘನೌದಾರ್ಯವೂ ದೊರಕಿತು. ಜ್ಞಾನದಾನಕ್ಕಾಗಿ, ಕನ್ನಡ ಕ್ಕಾಗಿ, ಕೈತುಂಬ ಹೀಗೆ ದಾನಮಾಡಿದ ಶ್ರೀ ಶಾಸ್ತ್ರಿಗಳವರು ಮಾನ್ಯರು, ಧನ್ಯರು. ಅವರ ಔದಾರ್ಯಕ್ಕೆ, ಮಾನ್ಯತೆಗೆ, ಧನ್ಯತೆಗೆ, ಅನುರೂಪ ವಾಗಿ ರಾಜಗೌರವವೂ ದೊರೆಯಿತು. ಕನ್ನಡನಾಡಿನ ಪ್ರಭುಗಳೇ ಸ್ವಂತವಾಗಿ ಮಂದಿರದ ಆರಂಭೋತ್ಸವವನ್ನು ನೆರವೇರಿಸಿದರು. ಕನ್ನ ಡದ ಮೇಲಿನ ಈ ಅಭಿಮಾನಕ್ಕಾಗಿ, ಗೌರವಕ್ಕಾಗಿ, ಮಮತೆಗಾಗಿ ನಾವು ಕನ್ನಡಿಗರ ಪರವಾಗಿ ಮಹಾ ಪ್ರಭುಗಳವರನ್ನು ವಂದಿಸುತ್ತೇವೆ.

ಕನ್ನಡ ಸಾಹಿತ್ಯಕ್ಕೆ ನೃಪತುಂಗನ ಕಾಲದಿಂದಲೂ ರಾಜಾ ಶ್ರಯವೇ ಹಿರಿಯ ಬೆಂಬಲ. ಇದು ಕಾಲಕ್ರಮದಲ್ಲಿ ವಿಜಯನಗರದ ರಾಜರ ನಂತರ ಮೈಸೂರಿನ ಒಡೆಯರನ್ನು ಆಶ್ರಯಿಸಿದೆ. ಗೋದಾವರೀ ತೀರದಿಂದ ಹರಿದು ಬಂದು ಅದು ಕಾವೇರೀತೀರದಲ್ಲಿ ಹಿರಿಯ ಕೆರೆಯಾ ಗಿದೆ. ಕಾವೇರಿಯಿಂದ ಶಕ್ತಿ, ಭುಕ್ತಿ, ಬೆಳಕು ಎಲ್ಲಾ ಬರುತ್ತಿದೆ. ಇದು ನೀರಿಗೂ ಸರಿ ಮಾತಿಗೂ ಸರಿ. ಅವುಗಳ ಯೋಗಕ್ಷೇಮದಲ್ಲಿ ನಮ್ಮ ಶ್ರೀಮನ್ ಮಹಾರಾಜರವರು ಅನವರತ ನಿರತರಾಗಿರುವುದಕ್ಕೆ ನಿದರ್ಶನವಾಗಿ ಇಂಥ ಒಂದು ಸಂಗತಿಯೇ ಸಾಕು.

ಕನ್ನಡದೇವಿಯ ಆರಾಧನೆಗಾಗಿ ಇದುವರೆಗೆ ಇದ್ದ ಮಂದಿರ ಗಳೆಂದರೆ, ಧಾರವಾಡದ "ಚಾಮರಾಜ ಮಂದಿರ" ಬೆಂಗಳೂರಿನ

"ಕೃಷ್ಣರಾಜ ಪರಿಷನ್ಮಂದಿರ." ಇವುಗಳು ಆಳಿದ ಮೈಸೂರು ಮಹಾರಾಜರವರ ಹೆಸರುಗಳನ್ನು ಕನ್ನಡದ ಚರಿತ್ರೆಯಲ್ಲಿ ಶಾಶ್ವತಗೊಳಿಸಿವೆ. ದಿವಂಗತರಾದ ನಾಲ್ವಡಿ ಕೃಷ್ಣರಾಜವೊಡೆಯರವರು, ಯುವರಾಜ ಕಂಠೀರವ ನರಸರಾಜವೊಡೆಯರವರು, ಸರದಾರ್ ಎಂ. ಕಾಂತರಾಜ ಅರಸರವರು ಮುಂತಾದವರ ಮೇಲ್ಪಂಕ್ತಿಯನ್ನು ಅನುಸರಿಸಿ ಸರ್. ಕೆ. ಪಿ. ಪುಟ್ಟಣ್ಣಚೆಟ್ಟರು, ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು ಮುಂತಾದ ಅವರ ಗಣ್ಯ ಪ್ರಜೆಗಳೂ ಭಾಷಾವತ್ಸಲರೂ ಕನ್ನಡಕ್ಕೆ ಮುಕ್ತಹಸ್ತದಿಂದ ದಾನಮಾಡಿದ್ದಾರೆ. ಶ್ರೀಮರ್ಾ ಹಸೂಡಿ ವೆಂಕಟಶಾಸ್ತ್ರಿಗಳ ದಾನವು ಈ ಉನ್ನತ ಶ್ರೇಣಿಗೆ ಸೇರಿ ಸಕಲಸನ್ಮಾನ್ಯವಾಗಿದೆ. ಗೋದಾನ ಮಾಡಿದವರು ಹಸುವನ್ನು ಸಾಕಲೆಂದು ಮೇಲೆ ದಕ್ಷಿಣೆಯನ್ನೂ ಕೊಟ್ಟಂತೆ, ಅವರು ಮಂದಿರದಮೇಲೆ ಅದರ ಮೂಲಧನದ ಬೀಜವಾಗಿ ಒಂದು ಸಾವಿರ ರೂಪಾಯಿಗಳ ಕಾಣಿಕೆಯನ್ನೂ ಕೊಟ್ಟಿದ್ದಾರೆ. ಇದು ಗಿಡವಾಗಿ, ಮರವಾಗಿ ಫಲಬಿಡಲಿ. ಶಿವಮೊಗ್ಗದ ಕರ್ಣಾಟಕ ಸಂಘವು ಇದಕ್ಕಿಂತ ಹೆಚ್ಚಿನ ಕೆಲಸಮಾಡಿ ಇನ್ನೂ ಗಣ್ಯತೆ ಪಡೆಯಲಿ, ಪ್ರೋತ್ಸಾಹ ಪಡೆಯಲಿ; ಮಿಕ್ಕ ಕರ್ಣಾಟಕಸಂಘಗಳೂ ಹೀಗೇ ಕೆಲಸಮಾಡಲಿ, ಯೋಗ್ಯತೆ ಮಾನ್ಯತೆಗಳನ್ನು ಪಡೆಯಲಿ; ಕನ್ನಡ ಬೆಳೆಯಲಿ, ಕನ್ನಡ ಜನ ಮುಂದೆ ಬರಲಿ ಎಂದು ನಾವು ಪ್ರಾರ್ಥಿಸುತ್ತೇವೆ.

೯೪-೧೯೪೩

---

# ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಮಾಧ್ಯಮ

ಮೈಸೂರು ವಿಶ್ವವಿದ್ಯಾನಿಲಯವು ಹುಟ್ಟುವುದಕ್ಕೆ ಮುಂಚೆ ಇದ್ದ ಇಲ್ಲಿನ ಪ್ರೌಢವಿದ್ಯಾಶಾಲೆಗಳು ಮದರಾಸ್ ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಒಳಪಟ್ಟು ಬೆಳೆದುಕೊಂಡು ಬಂದಿದ್ದುವು. ಆದರೆ ಈ ಎರಡು ಪ್ರಾಂತಗಳಲ್ಲಿಯೂ ಪ್ರೌಢವಿದ್ಯಾರ್ಥಿಗಳ ಸಂಖ್ಯೆ ಬಹುವಾಗಿ ಹೆಚ್ಚಿತು; ಅಲ್ಲದೆ ೧೯೧೦ ರ ಸುಮಾರಿಗೆ ಮದರಾಸ್ ವಿಶ್ವವಿದ್ಯಾನಿಲಯದ ವ್ಯಾಸಂಗಕ್ರಮದಲ್ಲಿ ಕೆಲವು ಬದಲಾವಣೆಗಳಾಗಿ, ದೇಶಭಾಷೆಗಳ

ವ್ಯಾಸಂಗ ಹಿಂದಕ್ಕೆ ಬಿತ್ತು. ಅವು ಐಚ್ಛಿಕ ವಿಷಯಗಳಾಗಿ ಪ್ರಾಶಸ್ತ್ಯ ವನ್ನು ಪಡೆದಂತೆ ತೋರಿದರೂ ನೂರಕ್ಕೆ ಒಬ್ಬ ವಿದ್ಯಾರ್ಥಿಯೂ ಅದನ್ನು ಆ ರೀತಿಯಲ್ಲಿ ಆರಿಸಿಕೊಳ್ಳುತ್ತಿರಲಿಲ್ಲ. ಸಾಮಾನ್ಯವಾಗಿ ಎಲ್ಲರೂ ಅಂತರಪರೀಕ್ಷೆಯಲ್ಲಿ ಒಂದು ಪ್ರಬಂಧವನ್ನು ಬರೆದು ತಮ್ಮ ತಮ ಭಾಷೆಯಲ್ಲಿ ಮೋಕ್ಷ ಪಡೆಯುತ್ತಿದ್ದರು.

ಮಾತೃಭಾಷೆಯೂ ಅದರ ಸಾಹಿತ್ಯವೂ ಬೆಳೆಯಬೇಕಾದ ಆವಶ್ಯ ಕತೆಯನ್ನು ಕಂಡುಕೊಂಡಿದ್ದವರಿಗೆ ಸ್ವಾಭಾವಿಕವಾಗಿ ಇದು ತುಂಬ ಅತೃಪ್ತಿಯನ್ನು ಉಂಟುಮಾಡಿತು. ಅಲ್ಲದೆ, ಆಯಾ ಪ್ರಾಂತಗಳ ಅಗತ್ಯಗಳೂ ಅಪೇಕ್ಷೆಗಳೂ ವ್ಯತ್ಯಾಸವಾಗುತ್ತ ಮೈಸೂರಿಗೆ ಒಂದು ಸ್ವತಂತ್ರವಾದ ವಿದ್ಯಾಪೀಠ ಆವಶ್ಯವಾಯಿತು. ಅಂದು ಇಲ್ಲಿ ಪ್ರಗತಿ ಪರಪ್ರಧಾನರಾಗಿದ್ದ ಸರ್. ಎಂ. ವಿಶ್ವೇಶ್ವರಯ್ಯನವರ ಸ್ಫೂರ್ತಿಯಿಂದ ದೇಶದ ಮಿಕ್ಕ ಶಾಖೆಗಳಲ್ಲಿ ನವಚೈತನ್ಯದಿಂದೊಡಗೂಡಿದ ನವೀನ ಸಂಸ್ಥೆಗಳು ಹುಟ್ಟಿದಂತೆ, ವಿದ್ಯಾಶಾಖೆಯಲ್ಲಿ ಮೈಸೂರು ವಿಶ್ವವಿದ್ಯಾನಿಲ ಯವು ಜನ್ಮತಾಳಿತು—ಮೈಸೂರಿನ ಮಕ್ಕಳಿಗಾಗಿ "ನ ಹಿ ಜ್ಞಾನೇನ ಸದೃಶಂ" ಎಂಬ ತಲೆಮಾತನ್ನು ತಳೆದು, ಮೈಸೂರಿನ ಮಹಾರಾಜ ರಿಂದ ಆರಂಭವಾಯಿತು; "ಭವಿಷ್ಯಸ್ವಪ್ನವಾಗಿದ್ದದ್ದು ಸಚೇತನ ಸೃಷ್ಟಿ ಯಾಯಿತು."

ಶ್ರೀಮನ್ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರವರು ವಿಶ್ವ ವಿದ್ಯಾನಿಲಯವನ್ನು ಆರಂಭಿಸುತ್ತಾ, "ಈ ವಿಶ್ವವಿದ್ಯಾನಿಲಯದ ಯೋಜನೆಯಲ್ಲಿ ಸೇರಿಸಿರುವ ಕನ್ನಡ ಸಾಹಿತ್ಯದ ವ್ಯಾಸಂಗಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಡಬೇಕೆಂಬ ವಿಚಾರದಲ್ಲಿ ನನಗೆ ಸ್ವಾಭಾವಿಕ ವಾಗಿ ತುಂಬ ಆಸಕ್ತಿ ಇದೆ. ಈಗಿನ ಕಾಲದಲ್ಲಿ ನಾಡಿನ ನುಡಿಗಳ ವ್ಯಾಸಂಗವನ್ನು ಸ್ಕೂಲುಗಳಲ್ಲಿಯೂ ಕಾಲೇಜುಗಳಲ್ಲಿಯೂ ಉದಾಸೀನ ಮಾಡುತ್ತಿರುವರೆಂಬುದನ್ನು ನಾವೆಲ್ಲ ಬಲ್ಲೆವು. ನಮ್ಮ ವಿಶ್ವವಿದ್ಯಾಲ ಯವು ಕನ್ನಡದ ಮತ್ತು ಮೈಸೂರಿನಲ್ಲಿ ಬಳಕೆಯಲ್ಲಿರುವ ಇತರ ದಾಕ್ಷಿ ಣಾತ್ಯಭಾಷೆಗಳ, ಪೂರ್ಣವೂ ಸಂತತವೂ ಆದ ವ್ಯಾಸಂಗಕ್ಕೆ ಏರ್ಪಾಟು ಮಾಡಿರುವುದು ನನಗೆ ತುಂಬ ಸಂತೋಷವನ್ನುಂಟುಮಾಡಿದೆ." ಎಂದು

ಅಪ್ಪಣೆ ಕೊಡಿಸಿದರು. ಆಗ ಮೈಸೂರು, ದೇಶಭಾಷಾಭ್ಯಾಸಂಗದಲ್ಲಿ ಮದರಾಸಿಗೆ ಮೇಲ್ಮೈಯಾಗಿತ್ತು.

ಕಾಲಕ್ರಮದಲ್ಲಿ ಹೊಸನೀರು ಬಂದು, ಅಭಿಪ್ರಾಯಗಳು ಬದಲಾಗಿ, ಭಾಷೆಗಿಂತ ಭಾವ ದೊಡ್ಡದು, ಸಾಹಿತ್ಯಕ್ಕಿಂತ ಶಾಸ್ತ್ರ ಹೆಚ್ಚಿನದು ಎಂಬ ಹೇಳಿಕೆ ಪ್ರಬಲವಾಗಿ ಮತ್ತೆ ಕನ್ನಡ ಹಿಂದಕ್ಕೆ ಬಿತ್ತು—ಕನ್ನಡ ನಾಡಿನ ಜೀವಸ್ಥಾನದಲ್ಲಿಯೇ, ಅದು ನಿಸ್ಸತ್ವವಾಗಿ ಉಳಿಯಿತು; ಇಷ್ಟು ಹೊತ್ತಿಗೆ ತನ್ನ ತಪ್ಪನ್ನು ತಿದ್ದಿಕೊಂಡ ಮದರಾಸ್ ವಿಶ್ವವಿದ್ಯಾನಿಲಯವೂ, ಹೊಸದಾಗಿ ಹುಟ್ಟಿದ ಆಂಧ್ರ ಅಣ್ಣಾಮಲೆ ಮುಂತಾದ ವಿಶ್ವವಿದ್ಯಾನಿಲಯಗಳೂ ತಮ್ಮಲ್ಲಿ ನಾಡಿನ ನುಡಿಗೆ ಕೊಟ್ಟ ಸ್ಥಾನ ಎಷ್ಟೋ ಮೇಲು ಎಂದು ಭಾಷಾಭಿಮಾನಿಗಳು ತಲೆತಗ್ಗಿಸಿ ಕೊರಗುವಂತಾಯಿತು.

ದೇಶವು ವಿದ್ಯಾಭ್ಯಾಸದಲ್ಲಿ ಮುಂದುವರಿದು, ಸ್ವಸ್ವರೂಪವನ್ನು ತಿಳಿಯುತ್ತ ಬಂದಮೇಲೆ ಮತ್ತೆ ಸ್ಥಿತಿಗತಿಗಳು ಬದಲಾಯಿಸುತ್ತಿವೆ. ನಾಡೆಂದರೆ ನೆಲವಲ್ಲ, ಜನ. ಅವರು ಎಚ್ಚತ್ತು ತಮ್ಮ ನಾಂಗಳವನ್ನು ತಾವು ಸಾಧಿಸಿಕೊಳ್ಳಲು ಬೇಕಾದ ಸಲಕರಣೆಗಳನ್ನು ಒಮ್ಮುಖವಾಗಿ ಅಪೇಕ್ಷಿಸುತ್ತ, ಅದಕ್ಕಾಗಿ ತಕ್ಕ ಪ್ರಯತ್ನ ಮಾಡುತ್ತ ಹೋದರೆ ಅವರನ್ನು ತಡೆಯಬಲ್ಲವರಾರು? ತಡೆಯುವುದು ಹೇಗೆ? ಯಾವ ನಾಡಿನ ಜನ ತಿಳಿವಳಿಕೆ ಪಡೆಯಬೇಕಾದರೂ ತನ್ನ ನುಡಿಯಿಂದಲೇ ಸಾಧ್ಯ ಎಂಬ ತತ್ತ್ವವನ್ನು ಈಗ ನಿರಾತಂಕವಾಗಿ, ನಿರ್ವಿವಾದವಾಗಿ, ಎಲ್ಲರೂ ಒಪ್ಪಿದ್ದಾರೆ. ಯುದ್ಧಾನಂತರದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸಗಳಾದರೂ ಸಾರ್ವತ್ರಿಕವಾಗಿ, ನಿರ್ಬಂಧವಾಗಿ ನಡೆಯಬೇಕೆಂಬುದನ್ನು ಒಪ್ಪಿದರೆ, ಅದು ಮತ್ತಾವ ಭಾಷೆಯಲ್ಲಿ ನಡೆದೀತು? ಅದಿರಲಿ; ಈಗ ಹೈಸ್ಕೂಲಿನಲ್ಲಿ ದೇಶಭಾಷೆಯೇ ಮಾಧ್ಯಮವಾಗಿರಬೇಕೆಂಬ ತತ್ತ್ವವನ್ನು ಎಲ್ಲರೂ ಒಪ್ಪಿದ್ದಾರೆ: ನಾವು ಕನ್ನಡವರಿಯದವರಿಗೆಂದು ಇಂಗ್ಲಿಷ್ ಮಾಧ್ಯಮವನ್ನು ಕೆಲವು ಕಡೆ ಬಳಕೆಯಲ್ಲಿಟ್ಟುಕೊಂಡಿದ್ದೇವೆ. ದೇಶಭಾಷೆಯ ಮಾಧ್ಯಮದ ತತ್ತ್ವದಲ್ಲಿ ಸತ್ಯವಿದ್ದರೆ, ಅದು ಮೇಲಕ್ಕೂ ಏಕೆ ಹಬ್ಬಬಾರದು? ಇದು ದೇಶದ ಹಂಬಲು. ಇದು ಈಗ್ಗೆ

ಹದಿನೈದು ವರ್ಷಗಳ ಹಿಂದೇ ಹಲವು ಪ್ರಾಂತಗಳ ಅಭಿಮತ ವಾಗಿದ್ದು, ಅಂತರ ವಿಶ್ವವಿದ್ಯಾನಿಲಯಸಮಿತಿ ಮಾತ್ರ ದೇಶವು ಈ ಸುಧಾರಣೆಗೆ ಇನ್ನೂ ತಕ್ಕಷ್ಟು ಮುಂದುವರಿದಿಲ್ಲವೆಂದು ಅಭಿಪ್ರಾಯ ಪಟ್ಟಿತ್ತು. ಆದರೆ ಆಗಿನಿಂದ ಈಚೆಗೆ ಮುನ್ನಡೆಯು ಹೊಳೆ ಎಷ್ಟೋ ದೂರ ಹರಿದಿದೆ. ಇನ್ನೊಂದು ಹೆಜ್ಜೆ ಮುಂದೆಹೋಗಿ ಪ್ರೌಢಶಾಲೆಗಳ ಲ್ಲಿಯೂ ನಾಡನುಡಿಯನ್ನು ಮಾಧ್ಯಮವಾಗಿ ಮಾಡಬೇಕೆಂಬ ಆಶೆ ಎಲ್ಲೆಲ್ಲಿಯೂ ಬಲವಾಗಿದೆ; ಅದು ದುಸ್ಸಾಧ್ಯವಾದೀತೇನೋ ಎಂಬ ಶಂಕೆ ಜನಕ್ಕೆ ತಪ್ಪಿದೆ. ಈ ವಿಚಾರವಾಗಿ ಮೈಸೂರಿನ ಪ್ರಜಾಸಭೆಯಲ್ಲಿ ಗುಂಡ್ಲುಪೇಟೆಯ ಶ್ರೀಮಾನ್ ಬಿ. ತಿಮ್ಮಾಜಯ್ಯನವರು ಒಂದು ಸೂಚನೆ ಯನ್ನು ತಂದು, ತೀವ್ರಚರ್ಚೆಯಾಗಿ, ಅದು ಹೇಗೆ ಬಹುಸಮ್ಮತವಾದ ಒಪ್ಪಿಗೆ ಪಡೆಯಿತೆಂಬುದನ್ನು ಎಲ್ಲರೂ ಬಲ್ಲರು. ಆ ಚರ್ಚೆಯನ್ನು ಆಮೂಲಾಗ್ರವಾಗಿ ಈ ಪತ್ರಿಕೆಯ ೯೨ನೆಯ ಸಂಚಿಕೆಯಲ್ಲಿ ಪ್ರಕಟಿ ಸಿದೆ. ಅದನ್ನು ಕನ್ನಡಿಗರೆಲ್ಲರೂ ಆದರದಿಂದಲೂ ಅಕ್ಕರೆಯಿಂದಲೂ ಓದಿದ್ದಾರೆಂದು ನಾವು ನಂಬುತ್ತೇವೆ. ಅಂದಿನ ವಿದ್ಯಾಮಂತ್ರಿಗಳು ಆ ನಿರ್ಣಯವನ್ನು ವಿಶ್ವವಿದ್ಯಾನಿಲಯದ ಮುಖ್ಯಾಧಿಕಾರಿಗಳಿಗೆ ಕಳುಹಿಸಿ ಕೊಟ್ಟರು. ಅದು ಸರ್ಕಾರಕ್ಕೂ, ಅಲ್ಲಿಂದ ಅವರ ಸೂಚನೆಯಂತೆ ಅಂತರ ವಿಶ್ವವಿದ್ಯಾನಿಲಯ ಸಮಿತಿಗೂ ಹೋಗಿ ಆ ವಿದ್ವನ್ಮಂಡಲಿಯು ಕಳೆದ ಡಿಸೆಂಬರ್ ತಿಂಗಳಿನಲ್ಲಿ, ಹಿಂದಿದ್ದ ವಿರೋಧವನ್ನು ಬಿಟ್ಟು, ಬಹುತರವಾದ ಸಮ್ಮತಿಯನ್ನು ಕೊಟ್ಟಿತು. ಅದರ ಮಾತುಗಳು ಇವು :—

"ಇಂಗ್ಲಿಷನ್ನೂ, ಆವಶ್ಯಕವಾದರೆ ವಿಜ್ಞಾನಗಳನ್ನೂ, ವಿನಾ ಯಿಸಿ ಅಂತರ ಮತ್ತು ಪದವೀಪರೀಕ್ಷೆಗಳಿಗೆ, ಸಾಧ್ಯವಾದಷ್ಟು ಮಟ್ಟಿಗೆ ಇಂಗ್ಲಿಷಿನೊಡನೆ, ಆಧುನಿಕ ಭಾರತೀಯ ಭಾಷೆಗಳನ್ನು ಕ್ರಮೇಣ ಶಿಕ್ಷಣ ಮಾಧ್ಯಮವಾಗಿ ಒಪ್ಪಿಕೊಳ್ಳಬಹುದು."

ಈ ಮಾತುಗಳು ಒಳಕೊಂಡಿರುವ ಎಚ್ಚರಿಕೆ ನ್ಯಾಯವಾಗಿದೆ; ಆದರೆ ಹೆದರಿಕೆ ಅನಾವಶ್ಯಕ. ಇದೇ ಮಾರ್ಚಿ ತಿಂಗಳು ಮೂರನೆಯ ತಾರೀಖಿನ ದಿನ ಸೇರಿದ್ದ ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯಲ್ಲಿ

ಶ್ರೀ [illegible] ೧೯೪೮ ರಿಂದ [illegible] ೧೯೫೩ರ ಹೊತ್ತಿಗೆ ನಮ್ಮ ವಿಶ್ವವಿದ್ಯಾನಿಲಯದ ತರಗತಿಗಳಲ್ಲೆಲ್ಲಾ ಭಾಷೇತರ ವಿಷಯಗಳಿಗೆ ಕನ್ನಡವೇ ಮಾಧ್ಯಮವಾಗಿರಬೇಕೆಂದು ಒಂದು ನಿರ್ಣಯವನ್ನು ತರಲು, ಅದು ಬಹುಮತದಿಂದ ಒಪ್ಪಿಗೆ ಪಡೆಯಿತು. ಅದನ್ನು ವಿರೋಧಿಸಿದ ಮೂವರೂ, ಜೊತೆಗೆ, ಈಗ ಹೈಸ್ಕೂಲಿನಲ್ಲಿರುವಂತೆ ಇಂಗ್ಲಿಷ್ ಮಾಧ್ಯಮವು ಐಚ್ಛಿಕವಾಗಿರಬೇಕೆಂದು ಮಾತ್ರ ಅಭಿಪ್ರಾಯ ಪಟ್ಟಂತಿತ್ತು. ಕನ್ನಡದ ಮಾಧ್ಯಮಕ್ಕೆ ಇರುವ ಆಕ್ಷೇಪಣೆಗಳು ಹೊಸದಾದವು ಯಾವುವೂ ಇಲ್ಲ; ಅವಕ್ಕೆಲ್ಲಾ ಸಮಾಧಾನಗಳನ್ನು ಹೇಳಿಯಾಗಿದೆ. ಅವನ್ನು ಅರಿಯದವರಿಗೆ ಮತ್ತೆ ಮತ್ತೆ, ಅವು ಹಳದಾಗುವವರೆಗೆ, ಹೇಳಬೇಕಾಗಿದೆ. ಹೊಸವು ಇದ್ದರೆ, ಅವು ಹಳೆಯವಕ್ಕಿಂತ ಬಲವಾದವೇನೂ ಅಲ್ಲ. ಕನ್ನಡವು ಹೈಸ್ಕೂಲಿನಲ್ಲಿ ಮಾಧ್ಯಮವಾಗಬೇಕೆಂದು ನಿರ್ಧರವಾದ ಒಂದು ವರ್ಷದಲ್ಲಿ ವಿಜ್ಞಾನ ಮೊದಲುಗೊಂಡು ಎಲ್ಲ ವಿಷಯಗಳಲ್ಲಿಯೂ ಗ್ರಂಥಗಳು ಹುಟ್ಟಿದ್ದು ಅನೇಕರಿಗೆ ಅಂಜನ ಹಾಕಿದಂತಾಗಿದೆ. ಈಗಾಗಲೇ ಅಂತರಶಾಲೆಯ ಮಟ್ಟದಲ್ಲಿ, ವಿಶ್ವವಿದ್ಯಾನಿಲಯದ ಕನ್ನಡಗ್ರಂಥ ಪ್ರಕಾಶನ ಸಮಿತಿಯ ಮೂಲಕ ವೈಜ್ಞಾನಿಕ ಗ್ರಂಥಗಳು ಸಿದ್ಧವಾಗಿವೆ, ಸಿದ್ಧವಾಗುತ್ತಿವೆ. ಕನ್ನಡನಾಡು ಮಿಕ್ಕ ಪ್ರಾಂತಗಳಿಗಿಂತ ಎಂದೂ ಯಾವುದರಲ್ಲಿಯೂ ಹಿಂದೆ ಬಿದ್ದಿರಲಿಲ್ಲ. ಈಗ ವಿದ್ಯೆಯಲ್ಲಿ, ಜ್ಞಾನದಲ್ಲಿ ಹಿಂದೆ ಬೀಳುತ್ತದೆಯೇ? ನಮ್ಮ ನೆರೆಯ ಉಸ್ಮಾನಿಯಾ ವಿಶ್ವವಿದ್ಯಾನಿಲಯವು ಈಗ್ಗೆ ಇಪ್ಪತ್ತೈದು ವರ್ಷಗಳ ಕೆಳಗೆ ಸಾಧಿಸಿದ್ದನ್ನು ನಾವು ಇಂದು ಸಾಧಿಸಲಾರೆವೇ? ಮೈಸೂರಿನವರು, ಕನ್ನಡಿಗರು, ಇಂಡಿಯದ ಎಲ್ಲ ಪ್ರಾಂತಗಳಿಗೂ ಹೋಗಿ ನಾನಾ ಕ್ಷೇತ್ರಗಳಲ್ಲಿ ದಕ್ಷರೆಂದು ಹೆಸರು ಪಡೆದಿದ್ದಾರೆ. ಹೀಗಿರಲು ನಮ್ಮ ನಾಡಿನ ಸೇವೆಗೆ, ಜನದ ನುಡಿಯ ಸೇವೆಗೆ, ಅವರ ಸಾಮರ್ಥ್ಯ ತಕ್ಕಷ್ಟಿಲ್ಲವೆಂದು ಯಾರೂ ಭಾವಿಸಲಾರರು. ಕನ್ನಡ ನಾಡು ಎಂದಿಗೂ ಹಿಂದೆ ಬೀಳದು. "ಸಿರಿಗನ್ನಡಂ ಗೆಲ್ಗೆ!"

೯೮–೧೯೪೪

---